ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೨೫

ಪ್ರಧಾನ ಸಂಪಾದಕ
**ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.**

# ಶ್ರೀರಾಮಕೃಷ್ಣ ಪರಮಹಂಸ




ಲೇಖಕ
**ಕೆ. ವಿ. ಪುಟ್ಟಪ್ಪ, ಎಂ.ಎ.**

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೩೪

# ಮುನ್ನುಡಿ

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸಬೇಕೆಂಬ ಘನೋದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಂದು "ಕನ್ನಡ ಪ್ರಕಟನ ಸಮಿತಿ"ಯನ್ನು ನಿಯಮಿಸಿ, ಪ್ರತಿ ವರ್ಷವೂ ಪ್ರಸಿದ್ಧರಾದ ಗ್ರಂಥಕರ್ತರನ್ನು ನಿಷ್ಕರ್ಷಿಸಿ, ಅವರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟನೆಗೆ ಸಿದ್ಧಪಡಿಸುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿರುತ್ತಾರೆ.

ಈ ಗ್ರಂಥಗಳು ಎರಡು ಬಗೆಯವು—

೧. ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ತ್ವ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ, ವಿವಾದಾಸ್ಪದವಲ್ಲದ ನಿಷ್ಕೃಷ್ಟವಾದ ರೀತಿಯಲ್ಲಿ ತಿಳಿಸತಕ್ಕವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು ಅಥವಾ ಭಾಷಾಂತರಗಳಾಗಿರಬಹುದು, ಸಂಕಲನಗಳಾಗಿರಬಹುದು.

೨. ಕನ್ನಡದ ಪೂರ್ವದ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ ಉತ್ತಮ ಕಾವ್ಯಗಳ ಸಂಗ್ರಹಗಳು. ಇವು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರಬೇಕು, ಮೂಲ ಪ್ರತಿಗಳನ್ನು ಪರಿಶೋಧಿಸಿದ ಶುದ್ಧ ಪಾಠಗಳನ್ನು ಒಳಕೊಂಡು ಪೀಠಿಕೆ, ಶಬ್ದಕೋಶ, ಆವಶ್ಯಕವಾದ ಟಿಪ್ಪಣಿಗಳು—ಇವುಗಳೊಡನೆ ಕೂಡಿರಬೇಕು.

ಭರತವರ್ಷದ ಧರ್ಮ ಸಂಸ್ಕೃತಿ ಸಾಹಿತ್ಯಗಳನ್ನು ಕುರಿತು ಬರೆಯಲು ಉದ್ದೇಶಿಸಿರುವ ಗ್ರಂಥಗಳಲ್ಲಿ ಮೊದಲನೆಯದಾದ ಈ ಶ್ರೀರಾಮಕೃಷ್ಣ ಪರಮ

ಹಂಸರ ಚರಿತ್ರೆಯನ್ನು ಉಜ್ಜ್ವಲಸ್ಫೂರ್ತಿಯಿಂದ ರಚಿಸಿದುದಕ್ಕಾಗಿ ಪ್ರಸಿದ್ಧ ಕವಿಗಳೂ ಸಾಹಿತಿಗಳೂ ಆದ ಶ್ರೀಮಾನ್ ಕೆ. ವಿ. ಪುಟ್ಟಪ್ಪನವರಿಗೆ ಕನ್ನಡಿಗರೆಲ್ಲರೂ ಕೃತಜ್ಞರು. ಪರಮಹಂಸರ ಮಹಾಪ್ರಭಾವದಿಂದಲೂ ದಿವ್ಯಚರಿತೆಯಿಂದಲೂ ಘನವಾದ ಉಪದೇಶ ಸಾರಾವಳಿಯಿಂದಲೂ ಕನ್ನಡಿಗರಲ್ಲಿ ಧರ್ಮ ಸಮನ್ವಯ ಬುದ್ಧಿಯೂ ವಿಶಾಲಹೃದಯವೂ ವೀರಚೈತನ್ಯವೂ ಉಂಟಾಗಬೇಕೆಂಬುದೇ ನಮ್ಮ ಆಶಯ. ಹೂಸ ಭಾರತದಲ್ಲಿ ಹೊಸ ಕರ್ಣಾಟಕವು ಶ್ರೇಷ್ಠ ಪದವಿಗೇರಲೆಂಬುದೇ ನಮ್ಮ ಹಾರೈಕೆ. ಈಗಾಗಲೇ ಅಚ್ಚಾಗಿರುವ ಶ್ರೀಮಾನ್ ಎ. ಎನ್. ಮೂರ್ತಿರಾಯರ ಸಾಕ್ರೆಟೀಸ್ ಮಹಾನುಭಾವನ ಚರಿತ್ರೆಯಲ್ಲಿ ಕಾಣುವ ಧರ್ಮಾನ್ವೇಷಣೆಯೂ ಆತ್ಮಯಜ್ಞವೂ ಭಾರತಪುತ್ರನಾದ ಈ ಮಹಾಜ್ಯೋತಿಯ ಆತ್ಮವಿಕಾಸದೊಡನೆ ಬೆರೆತು ಕನ್ನಡ ಮಕ್ಕಳನ್ನು ಪವಿತ್ರಚರಿತರನ್ನಾಗಿಯೂ ಸೇವಾತತ್ಪರರನ್ನಾಗಿಯೂ ಧೀರರನ್ನಾಗಿಯೂ ಮಾಡಲೆಂಬುದೇ ಸದಾ ಪ್ರಾರ್ಥನೆ.

ಭಗವತ್ಕೃಪೆಯಿಂದಲೂ ಕನ್ನಡಿಗರ ಸೌಹಾರ್ದ ಸಹಕಾರಗಳಿಂದಲೂ ನಮ್ಮ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಬೆಳೆಯುತ್ತಾ ಬರಲಿ.

ಬೆಂಗಳೂರು,
೧೮-೧೨-೧೯೩೪

**ಬಿ. ಎಂ. ಶ್ರೀಕಂಠಯ್ಯ,**
ಸಮಿತಿಯ ಅಧ್ಯಕ್ಷ ಮತ್ತು ಪ್ರಧಾನ ಸಂಪಾದಕ

# ಅನುಕ್ರಮಣಿಕೆ

೧ ಪೀಠಿಕೆ ೧

೨ ಉದಯ ೧೭

೩ ಚೈತ್ರಯಾತ್ರೆ ೩೯

೪ ಯಾತ್ರಿಕರು ೧೦೪

೫ "ಕಾಮಿನಿ" ೧೪೯

೬ ದೇವಶಿಲ್ಪಿ ೧೬೯

೭ ಮಹಾಸಮಾಧಿ ೨೦೭

೮ ಅನಂತರ ೨೨೪

ಗ್ರಂಥಋಣ ೨೪೩

# ಚಿತ್ರಗಳು


| | |
|---|---|
| ಶ್ರೀರಾಮಕೃಷ್ಣ ಪರಮಹಂಸರು | ಮುಖಚಿತ್ರ |
| ಕಾಮಾರಪುಕುರ (ಪರಮಹಂಸರ ಜನ್ಮಸ್ಥಳ) | ೧೯ ನೆಯ ಪುಟದ ಇದಿರು |
| ದಕ್ಷಿಣೇಶ್ವರ | ೩೯ ,, ,, |
| ಶ್ರೀ ಶಾರದಾದೇವಿಯವರು | ೧೫೪ ,, ,, |
| ಸ್ವಾಮಿ ವಿವೇಕಾನಂದರು | ೨೨೫ ,, ,, |

# ಶ್ರೀರಾಮಕೃಷ್ಣ

## ೧. ಪೀಠಿಕೆ

ಇಂಗ್ಲೀಷರು ಭರತಖಂಡವನ್ನು ಜಯಿಸಲು ಉಪಕ್ರಮಿಸಿದಾಗ ದೇಶದ ಪರಿಸ್ಥಿತಿ ಶೋಚನೀಯವಾಗಿತ್ತು. ಔರಂಗಜೇಬನ ತರುವಾಯ ಮೊಗಲರ ಚಕ್ರಾಧಿಪತ್ಯವು ಒರಲೆ ಹಿಡಿದ ಮುದಿಮರದಂತೆ ತತ್ತರಿಸುತ್ತಿದ್ದಿತು. ಮಹಾರಾಷ್ಟ್ರರೂ ಸಿಖ್ಖರೂ ಧರ್ಮರಕ್ಷಣೆಯ ಸಲುವಾಗಿ ರಾಜ್ಯಸ್ಥಾಪನೆಗೆ ಕೈಹಾಕಿ ಮಹಮ್ಮದೀಯರ ಬಲದರ್ಪಗಳನ್ನು ಸರ್ವವಿಧದಿಂದಲೂ ನಾಶಗೊಳಿಸುತ್ತಿದ್ದರು. ರಾಜಕೀಯ ಪ್ರಪಂಚದಲ್ಲಿದ್ದಂತೆಯೇ ಧರ್ಮಪ್ರಪಂಚದಲ್ಲಿಯೂ ಸಂಕುಚಿತಭಾವಗಳೂ ಕುಂದುಕೊರತೆಗಳೂ ಒಡಕುಬಿರುಕುಗಳೂ ಯಥೇಚ್ಛವಾಗಿದ್ದುವು. ಅರ್ಥಹೀನವಾದ ನೂರಾರು ದೇಶಾಚಾರ ಲೋಕಾಚಾರ ಮತಾಚಾರಗಳೂ ಐಕ್ಯಭಂಗಕಾರಿಗಳಾದ ಸಾವಿರಾರು ಸಾಂಕ್ರಾಮಿಕ ಜಾತಿಪದ್ಧತಿಗಳೂ ಕ್ಷುದ್ರವೂ ಶುಷ್ಕವೂ ಈರ್ಷ್ಯಾಮೂಲವೂ ಆದ ಅನೇಕ ವಾದವಿವಾದಗಳೂ ಭರತವರ್ಷವನ್ನು ಛಿದ್ರಛಿದ್ರ ಮಾಡಿದ್ದುವು. ಭಾರತೀಯರು ಉಪನಿಷತ್ತುಗಳಿಂದಲೂ ಮಹರ್ಷಿಗಳಿಂದಲೂ ಆಚಾರ್ಯರಿಂದಲೂ ಪ್ರಣೀತವಾದ ಮಹಾಧರ್ಮದ ಅಂತರಾತ್ಮವನ್ನು ಸಂಪೂರ್ಣವಾಗಿ ಮರೆತು ಅದರ ಶವದ ಹಂಚಿಕೆಗಾಗಿ ಕಚ್ಚಾಡುತ್ತಿದ್ದರು. ಸರ್ವಧರ್ಮಗರ್ಭಿತವಾದ ವೇದಾಂತದರ್ಶನವು ಜನಸಮುದಾಯವನ್ನು ತ್ಯಜಿಸಿ ವಾದಪ್ರಿಯರಾದ ಹಲಕೆಲವು ಪಂಡಿತರ ಸ್ವತ್ತಾಗಿತ್ತು. ಆ ಪಂಡಿತರು ಅಧಿಕಾರವಾದವನ್ನು ಆಶ್ರಯಿಸಿ ಅಮೃತದಾಯಕವಾದ ವೇದಾಂತದರ್ಶನದ ದಿವ್ಯಜ್ಯೋತಿ ಪಾಮರ ಜನರ ಕಣ್ಣಿಗೆ ಬೀಳದಿರುವಂತೆ ಜಾಗರೂಕರಾಗಿದ್ದರು. ಅದಕ್ಕೆ ಫಲರೂಪವಾಗಿ ಜನರು ಉಪನಿಷತ್ತುಗಳ "ಏಕಮೇವಾದ್ವಿತೀಯಂ ಬ್ರಹ್ಮ"ದ ಆರಾಧನೆಯನ್ನು ತ್ಯಜಿಸಿ, ಪುರಾಣೋಕ್ತ

ದೇವತೆಗಳನ್ನು ಭಜಿಸಿ, "ಏಕಂ ಸತ್ ವಿಪ್ರಾ ಬಹುಧಾ ವದಂತಿ" ಎಂಬುದನ್ನೂ ಮರೆತು, ಶಿವವಿಷ್ಣುಗಳಿಗೆ ಪಕ್ಷಪ್ರತಿಪಕ್ಷಗಳನ್ನು ಹೂಡಿ, ಕಕ್ಷಿ ಪ್ರತಿಕಕ್ಷಿಗಳಾಗಿ ನಿಂತು ಹೊಡೆದಾಡುವುದರಲ್ಲಿಯೇ ಮಗ್ನರಾಗಿದ್ದರು. ಜನರಲ್ಲಿ ರಾಜಕೀಯ ಬುದ್ಧಿಯಂತೆಯೇ ಆಧ್ಯಾತ್ಮಿಕ ಬುದ್ಧಿಯೂ ಲೋಪವಾಗಿತ್ತು. ಆರ್ಯಧರ್ಮದ ಉದಾರ ಚಿರಜಾಜ್ವಲ್ಯಮಾನವಾಗಿದ್ದ ಪ್ರದೀಪವು ಜನರ ಭಾಗಕ್ಕೆ ನಂದಿಹೋಗಿತ್ತು.

ಆದ್ದರಿಂದಲೇ ಪಾಶ್ಚಾತ್ಯ ಸಂಸ್ಕೃತಿಯ ನವಕಾಂತಿಯನ್ನು ಸಂದರ್ಶಿಸಿದ ಭಾರತೀಯರು ಆನಂದದಿಂದ ಉನ್ಮತ್ತರಾದುದು!

ಆಂಗ್ಲೇಯರ ಪ್ರಭಾವವು ಮೊದಲು ಹಬ್ಬಿದುದು ವಂಗದೇಶದಲ್ಲಿ. ಕ್ರಿಸ್ತಾಬ್ದ ೧೮೦೦ ರಲ್ಲಿ ಕಲ್ಕತ್ತಾ ನಗರದಲ್ಲಿ ಒಂದು ಕಾಲೇಜು ಸ್ಥಾಪಿತವಾಯಿತು. ಕ್ರಮೇಣ ಪಾಶ್ಚಾತ್ಯರ ದರ್ಶನಶಾಸ್ತ್ರ, ವಿಜ್ಞಾನಶಾಸ್ತ್ರ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರಗಳೂ ಫ್ರಾನ್ಸ್ ದೇಶದ ಮಹಾವಿಪ್ಲವದ ಇತಿಹಾಸ ಮತ್ತು ತತ್ತ್ವಗಳೂ ವಂಗಯುವಕರ ಹಸ್ತಗತವಾದುವು. ಡೇಕಾರ್ಟೆ, ಹ್ಯೂಮ್, ಕಾಂಟ್, ಫಿಷ್ಟೆ, ಸ್ಪಿನೋಜ, ಹೇಗೆಲ್, ಷೋಪನ್ಹಾರ್, ಆಗಸ್ಟ್‌ಕಾಮ್ಟೆ, ಡಾರ್ವಿನ್, ಗ್ರೀನ್, ಗಿಬ್ಬನ್, ಷೆಲ್ಲಿ, ವರ್ಡ್ಸ್‌ವರ್ತ್ ಮೊದಲಾದ ದಾರ್ಶನಿಕರ, ವೈಜ್ಞಾನಿಕರ ಮತ್ತು ಕವಿಗಳ ಮಹದಾಲೋಚನೆಗಳೂ ಭಾವಗಳೂ ಹಬ್ಬಿದುವು. ಐರೋಪ್ಯ ಅಧ್ಯಾಪಕರು ಭಾರತೀಯ ಯುವಕರ ಉದಾಸೀನಚಿತ್ತತೆಯನ್ನು ಮಥಿಸಿದರು. ಹಳೆಯ ನಂಬುಗೆಗಳು ಕಳಚಿ ಬಿದ್ದುವು. ಆರ್ಯ ಸಂಸ್ಕೃತಿಯ ನೈಜ ತತ್ತ್ವಗಳ ಪರಿಚಯವಿಲ್ಲದ ಅಧ್ಯಾಪಕರು ಆ ವಿಷಯದಲ್ಲಿ ತಮ್ಮಂತೆಯೇ ಅಜ್ಞಾನಿಗಳಾಗಿದ್ದ ಯುವಕರಿಗೆ ಬಾಹ್ಯದೃಷ್ಟಿಗೆ ಗೋಚರವಾಗುತ್ತಿದ್ದ ಹಿಂದೂ ಧರ್ಮದ ಅವಿವೇಕಗಳನ್ನೂ ಅನಾಚಾರಗಳನ್ನೂ ಎತ್ತಿಹಿಡಿದು ತೋರಿ, ಒತ್ತಿ ನುಡಿದು ಬೋಧಿಸಿ, ಆರ್ಯಧರ್ಮವು ಅನಾಗರಿಕವೆಂದೂ ಮೌಢ್ಯಗಳ ಮುದ್ದೆಯೆಂದೂ ಉಪದೇಶಮಾಡಿದರು. ಇದರ ಪರಿಣಾಮವಾಗಿ ಕೃತವಿದ್ಯರಾದ ಯುವಕರು ಸ್ವಧರ್ಮಖಂಡನೆಗೆ ಕೈ ಇಟ್ಟರು. ಚೆನ್ನಾಗಿ ತಿಳಿದು ವಿಮರ್ಶೆ ಮಾಡಿದ ಹೊರತೂ ಯಾವುದನ್ನಾಗಲಿ ಸ್ವೀಕರಿಸಬಾರದೆಂದು ತಾವು ಆಗ ತಾನೆ ಪಾಶ್ಚಾತ್ಯರಿಂದ ಕಲಿತ ನೂತನತತ್ತ್ವವನ್ನು ತಮ್ಮ ಸ್ವಧರ್ಮಖಂಡನೆಯ ವಿಚಾರ

ದಲ್ಲಿಯೂ ಪ್ರಯೋಗಿಸುವುದನ್ನು ಅವರು ಮರೆತರು. ಪಾಶ್ಚಾತ್ಯರ ಅಂಧಾನು ಕರಣೆ ನವಸಂಪ್ರದಾಯವಾಯಿತು. ರಭಸಮತಿಗಳಿಗೆ ವಿಮರ್ಶೆಮಾಡಲು ಸಮಯ ವೆಲ್ಲಿ? ಜೊತೆಗೆ ಕ್ರೈಸ್ತಪಾದ್ರಿಗಳು ಮತಪ್ರಚಾರಮಾಡಲು ಹೊರಟು ನಿರ್ದಾಕ್ಷಿಣ್ಯವಾಗಿ ಖಂಡನೆಯ ಕತ್ತಿಯನ್ನು ಜೀಸತೊಡಗಿದರು. ಹೀಗಾಗಿ ಅನೇಕ ಶತಮಾನಗಳ ಅನುಭವದಿಂದಲೂ ತಪಸ್ಸಿನಿಂದಲೂ ಆರ್ಯರು ಆರ್ಜಿಸಿದ ಸನಾತನ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಯ ನೂತನ ಜಂಝಾವಾತಕ್ಕೆ ಸಿಕ್ಕಿ ಮುಳುಗಿ ಸರ್ವನಾಶವಾಗುವಂತೆ ತೋರಿತು.

ಆದರೆ ಯುಗಯುಗಗಳಿಂದ ಎಷ್ಟೋ ಪರಕೀಯ ಸಂಸ್ಕೃತಿಗಳ ಸಂಘಟ್ಟನೆಗೆ ಸಿಕ್ಕಿ ಸ್ವಲ್ಪವೂ ಅಜ್ಜಳಿಯದೆ ಧೀರವಾಗಿ ನಿಂತಿರುವ ವಜ್ರದೇಹಿಯಾದ ಹಿಮಾಲಯವು ನವಜಾತ ಶಿಶುಪ್ರಹಾರದಿಂದ ಪುಡಿಯಾಗುವುದೇ? ಸ್ವಲ್ಪ ಕಾಲದಲ್ಲಿಯೇ ವಿವೇಕ ವಿಚಾರಪೂರ್ಣವಾದ ಆರ್ಯಧರ್ಮದ ಪ್ರಚಂಡ ಪ್ರತಿಘಟನೆಯ ಮಹಾವಾಣಿ ದಿಗ್ದಿಗಂತಗಳಲ್ಲಿ ಅನುರಣಿತವಾಯಿತು. ಆರ್ಯಮಾತೆಯ ಶಿಶುಗಳು ಮಂತ್ರಶಾಂತರಾದಂತೆ ಮೊಗವೆತ್ತಿ ಆಲಿಸುತ್ತ ನಿಂತರು. ಪಾಶ್ಚಾತ್ಯ ಪ್ರಭುಗಳೂ ಸ್ತಬ್ಧರಾಗಿ ಕಿವಿಗೊಟ್ಟರು.

ಆರ್ಯಧರ್ಮವು ಇತರ ಮತಗಳಂತೆ ಏಕವ್ಯಕ್ತಿಯ ಅಧಿಕಾರವಾಣಿಯಲ್ಲ; ಅನೇಕ ಅಪೌರುಷೇಯ ತತ್ತ್ವಗಳ ಶ್ರೇಣಿ. ಆ ಮಹಾವಾಹಿನಿಗೆ ಅನೇಕ ಸಂಸ್ಕೃತಿಗಳು ಉಪನದಿಗಳಾಗಿವೆ. ಅದು ಯಾವ ಬೆಳಕನ್ನೂ ಅನ್ಯವೆಂದು ಹಳಿದುದಿಲ್ಲ. ಇಸ್ಲಾಂ ಸಂಸ್ಕೃತಿ ತನ್ನಲ್ಲಿಗೆ ಒಂದಾಗ ಅದರ ಉತ್ತಮಾಂಶಗಳನ್ನು ಹೀರಿಕೊಳ್ಳಲು ಪ್ರಯತ್ನಪಟ್ಟಂತೆಯೇ ಪಾಶ್ಚಾತ್ಯ ಸಂಸ್ಕೃತಿಯ ಉತ್ತಮಾಂಶಗಳನ್ನೂ ಸ್ವೀಕರಿಸಿ ತನ್ನ ಅಸ್ತಿತ್ವಕ್ಕೆ ಚ್ಯುತಿಬಾರದಂತೆ ನೋಡಿಕೊಳ್ಳುವ ಸಲುವಾಗಿ ಹೆಡೆಯೆತ್ತಿ ನಿಂತಿತು.

ಆರ್ಯ, ಇಸ್ಲಾಂ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ಪರಸ್ಪರ ಕ್ರಿಯೆ ಪ್ರತಿಕ್ರಿಯೆಗಳಿಂದ ಮೈದೋರಿದ ಮೊದಲನೆಯ ಮಹಾವ್ಯಕ್ತಿಯೆಂದರೆ ರಾಜಾ ರಾಮಮೋಹನರಾಯ. ಐವತ್ತೊಂಬತ್ತು ವರ್ಷಗಳ (ಕ್ರಿ. ಶ. ೧೭೭೪–೧೮೩೩) ಕಾರ್ಯಮಯ ಜೀವಮಾನದಲ್ಲಿ ಆತನು ಎಸಗಿದ ಸುಧಾರಣೆಗಳಿಂದ ಭರತವರ್ಷದ ಸಾಮಾಜಿಕ ಮತ್ತು ಮಾನಸಿಕ ಜೀವನವೇ ಹೊಸದಾಯಿತು.

ವಂಗದೇಶದ ಶ್ರೀಮಂತ ವಂಶವೊಂದರಲ್ಲಿ ಜನಿಸಿದ ಆತನು ಮೊಗಲ ಚಕ್ರವರ್ತಿಯ ಆಸ್ಥಾನದ ಆವರಣದಲ್ಲಿ ಬೆಳೆದನು. ಅಲ್ಲಿ ಪಾರ್ಸೀ ಅರಬ್ಬೀ ಭಾಷೆಗಳನ್ನು ಕಲಿತು, ಪಾಟ್ನಾದ ವಿದ್ಯಾಶಾಲೆಗಳಲ್ಲಿ, ಅರಬ್ಬೀ ಭಾಷೆಗೆ ಭಾಷಾಂತರಿವಾಗಿದ್ದ ಅರಿಸ್ಟಾಟಲ್ ಮತ್ತು ಯೂಕ್ಲಿಡ್ಡರ ಗ್ರಂಥಗಳನ್ನು ಅಧ್ಯಯನಮಾಡಿದನು. ಸಾಂಪ್ರದಾಯಿಕ ಬ್ರಾಹ್ಮಣರ ಕುಮಾರನಾಗಿದ್ದ ಆತನು ಇಸ್ಲಾಂ ಸಂಸ್ಕೃತಿಯಿಂದ ಪೋಷಿತನಾದನು. ಹದಿನಾಲ್ಕನೆಯ ವರ್ಷದಲ್ಲಿ ಕಾಶಿಯಲ್ಲಿ ಸಂಸ್ಕೃತವನ್ನು ಕಲಿತು ಹಿಂದೂ ಶಾಸ್ತ್ರಗಳನ್ನು ಓದಿದನು. ಅಂದಿನಿಂದ ಆರ್ಯಧರ್ಮದಂತೆ ಧ್ಯಾನಯೋಗಗಳನ್ನು ಅಭ್ಯಾಸಮಾಡತೊಡಗಿದನು. ಚಿಕ್ಕಂದಿನಿಂದಲೂ ಸೂಫಿ ಕವಿಗಳ ಭಕ್ತಿಮತದಲ್ಲಿಯೇ ಬೆಳೆದ ಆತನ ಆತ್ಮವು ವೇದಾಂತ ಜನನಿಯ ಅಮೃತಪಾನದಿಂದ ಪರಿಪುಷ್ಟವಾಯಿತು. ಸ್ವಭಾವತಃ ಯೋದ್ಧನಾಗಿದ್ದ ರಾಯನು ಆರ್ಯಧರ್ಮವು ಬೋಧಿಸುತ್ತಿದ್ದ ಉಚ್ಚ ಧ್ಯೇಯಕ್ಕೂ ಆರ್ಯರು ಅನುಸರಿಸುತ್ತಿದ್ದ ತುಚ್ಛ ಆಚಾರಗಳಿಗೂ ಇದ್ದ ಅಂತರವನ್ನು ನೋಡಿ ಸಹಿಸಲಾರದೆ ಹೋದನು. ಮಲಗಿದ್ದವರನ್ನು ಎಚ್ಚರಮಾಡಲೆಂದು, ಅರಬ್ಬೀ ಭಾಷೆಯ ಒಂದು ಮುನ್ನುಡಿಯೊಡನೆ ಪಾರ್ಸೀ ಭಾಷೆಯಲ್ಲಿ ಆಗಿನ ಸಂಪ್ರದಾಯದ ಹಿಂದೂ ಧರ್ಮವನ್ನು ಕಠಿನವಾಗಿ ವಿಮರ್ಶೆಮಾಡಿ ಒಂದು ಗ್ರಂಥವನ್ನು ಬರೆದು ಪ್ರಚುರಪಡಿಸಿದನು. ಅದರಿಂದ ಕುಪಿತನಾದ ಆತನ ತಂದೆ ರಾಯನನ್ನು ಮನೆಯಿಂದ ಓಡಿಸಿದನು. ಗೃಹಚ್ಯುತನಾದ ರಾಯನು ಭರತಖಂಡದಲ್ಲಿಯೂ ತಿಬೆಟ್ಟಿನಲ್ಲಿಯೂ ಸಂಚಾರಮಾಡಿ ಬೌದ್ಧಮತದ ತತ್ತ್ವಗಳನ್ನು ಚೆನ್ನಾಗಿ ತಿಳಿದುಕೊಂಡು, ಅನೇಕ ಕಷ್ಟಪರಂಪರೆಗಳನ್ನು ಸಹಿಸಿ ಹಿಂದಿರುಗಿದನು. ತಂದೆ ಕಂದನನ್ನು ಕರುಣಿಸಿ ಮನ್ನಿಸಿ ಮನೆಗೆ ಕರೆದು, ತುಂಟ ಕುದುರೆಗೆ ಕಡಿವಾಣ ಹಾಕುವೆನೆಂದು ಬಯಸಿ ರಾಯನಿಗೆ ಮದುವೆ ಮಾಡಿದನು. ಆದರೂ ಕುದುರೆ ಪಳಗಲಿಲ್ಲ.

ಇಪ್ಪತ್ತುನಾಲ್ಕನೆಯ ವಯಸ್ಸಿನಲ್ಲಿ ರಾಯನು ಇಂಗ್ಲೀಷು, ಹೀಬ್ರೂ, ಗ್ರೀಕ್, ಲ್ಯಾಟಿನ್ ಭಾಷೆಗಳನ್ನು ಚೆನ್ನಾಗಿ ಕಲಿತು, ಪಾಶ್ಚಾತ್ಯರ ರಾಜ್ಯಶಾಸನ ಪದ್ಧತಿಗಳಲ್ಲಿ ಪರಿಚಯಹೊಂದಿದನು. ಪಾಶ್ಚಾತ್ಯರಲ್ಲಿ ಅದುವರೆಗೆ ಆತನಿಗಿದ್ದ ತಿರಸ್ಕಾರವು ಮಾಯವಾಗಿ ಗೌರವ ಬುದ್ಧಿ ಉದ್ದೀಪ್ತವಾಯಿತು. ಭರತ

ಖಂಡದ ಕಲ್ಯಾಣವು ಇಂಗ್ಲೀಷರ ಸಹಕಾರದಿಂದಲೇ ಸಾಧ್ಯವೆಂದು ಮನಗಂಡು, ಅವರೊಡನೆ ಸಹಕರಿಸಿ, ಸಹಗಮನ ಮೊದಲಾದ ಅನಾಗರಿಕ ಕ್ರೂರ ಪದ್ಧತಿಗಳ ಮೇಲೆ ಪುನಃ ಖಂಡನೆಯ ಮಳೆಗರೆಯ ತೊಡಗಿ, ಮತ್ತೆ ಸಂಪ್ರದಾಯದ ಬ್ರಾಹ್ಮಣ ವರ್ಗದವರ ಉಗ್ರಕೋಪಕ್ಕೆ ಈಡಾದನು. ಕ್ರಿ. ಶ. ೧೭೯೯ ರಲ್ಲಿ ಮರಳಿ ಗೃಹಚ್ಯುತಿಯಾಯಿತು. ತಾಯಿ, ಹೆಂಡತಿ ಮತ್ತು ಹತ್ತಿರದ ಬಂಧುಗಳೆಲ್ಲ ದೂರವಾದರು. ಪುನಃ ಹನ್ನೆರಡು ವರ್ಷಗಳು ತೊಳಲಿ ಬಳಲಿ ಕಡೆಗೆ ತೆರಿಗೆ ವಸೂಲಿಯ ಅಧಿಕಾರಿಯಾಗಿದ್ದು ಕ್ರಮೇಣ ಜಿಲ್ಲೆಯ ಮುಖ್ಯಸಚಿವನಾದನು.

ತಂದೆಯ ಮರಣಾನಂತರ ರಾಯನು ಪುನಃ ತನ್ನವರನ್ನು ಸೇರಿ ದೊಡ್ಡ ಜಮೀನುದಾರನಾದನು. ದೆಹಲಿಯ ಚಕ್ರವರ್ತಿ ಆತನಿಗೆ "ರಾಜಾ" ಎಂಬ ಬಿರುದನ್ನು ದಯಪಾಲಿಸಿದನು. ತರುವಾಯ ರಾಯನು ಪುಷ್ಪೋದ್ಯಾನ ಪರಿವೃತ ವಾದ ಕಲ್ಕತ್ತೆಯ ದಿವ್ಯಭವನವೊಂದರಲ್ಲಿ ಸುಖಿಯಾಗಿ ನಿಂತನು. ನಿಂತವನು ಪ್ರಚಂಡ ಸುಧಾರಣೆಯ ಕಾರ್ಯಕ್ಕೆ ಕೈಹಾಕಿದನು. ಉಪನಿಷತ್ತುಗಳ ಸ್ವೈಜ ಜ್ಯೋತಿಯನ್ನು ಪುನಃ ಸ್ಥಾಪಿಸಬೇಕೆಂಬುದೇ ಆತನ ಮಹಾಧ್ಯೇಯವಾಯಿತು. ಅವುಗಳನ್ನು ವಂಗಭಾಷೆಗೆ ಭಾಷಾಂತರಮಾಡಿದನು. ಜೊತೆಗೆ ಬೈಬಲ್ಲನ್ನು ಓದಿ ದನು. ಕ್ರಿ. ಶ. ೧೮೨೦ ರಲ್ಲಿ "ಸುಖಶಾಂತಿದಾಯಕ ಯೇಸು ಕ್ರಿಸ್ತನ ಉಪ ದೇಶಾವಳಿ" ಎಂಬ ಗ್ರಂಥವನ್ನು ಪ್ರಕಟಿಸಿದನು. ಅದರಲ್ಲಿ ಹಿಂದೂ ಪುರಾಣಗಳ ಅವತಾರಗಳನ್ನು ಅಲ್ಲಗಳೆದಂತೆಯೇ ಕ್ರಿಸ್ತನ ಅವತಾರವನ್ನೂ ತಿರಸ್ಕರಿಸಿದನು. ರಾಯನಿಗೆ ಯೇಸು ಕ್ರಿಸ್ತನು ನೀತಿವಂತನಾದ ಮಹಾಪುರುಷನಾಗಿದ್ದನೇ ಹೊರತು ಅವತಾರವಾಗಿರಲಿಲ್ಲ. ಇದರ ಪರಿಣಾಮವಾಗಿ ಬ್ರಾಹ್ಮಣರೂ ಪಾದ್ರಿ ಗಳೂ ಎರಡು ವರ್ಗದವರೂ ಸೇರಿ ಆತನ ಮೇಲೆ ಕತ್ತಿಕಟ್ಟಿದರು. ಆದರೆ ವಜ್ರಮನಸ್ಕನಾದ ರಾಯನು ಸ್ವಲ್ಪವೂ ಎದೆಗೆಡದೆ ಏಕವೂ ಅದ್ವಿತೀಯವೂ ಅವಾಙ್ಮನಸಗೋಚರವೂ ಆದ "ಸತ್ಯಸ್ಯ ಸತ್ಯ"ದ, ಬ್ರಹ್ಮದ, ಆರಾಧನೆಗಾಗಿ "ಆತ್ಮೀಯ ಸಭಾ" ಎಂಬೊಂದು ಧಾರ್ಮಿಕ ಸಂಸ್ಥೆಯನ್ನು ೧೮೧೫ ರಲ್ಲಿ ಸ್ಥಾಪಿಸಿದನು. ೧೮೨೭ ನೆಯ ಇಸವಿಯಲ್ಲಿ ಗಾಯತ್ರಿಯ ವಿಚಾರವಾಗಿ ಗ್ರಂಥವೊಂದನ್ನು ಹೊರಡಿಸಿದನು. ಮರುವರ್ಷವೇ ಠಾಕೂರ ವಂಶದವರೇ ಮೊದಲಾದ ಕೆಲವು ಜನ ಸನ್ಮಿತ್ರರೊಡಗೂಡಿ 'ಬ್ರಾಹ್ಮಸಮಾಜ" ಸ್ಥಾಪನ

ಮಾಡಿದನು. ಅಲ್ಲಿ ಸೃಷ್ಟಿಸ್ಥಿತಿಲಯ ಕರ್ತೃವಾದ ಸನಾತನ ಅಸಿರ್ವಚನೀಯ ಬ್ರಹ್ಮತತ್ತ್ವದ ಉಪಾಸನೆಯೊಂದಲ್ಲದೆ ಬೇರೆ ಯಾವುದಕ್ಕೂ ಅವಕಾಶವಿಲ್ಲವೆಂದು ಸಾರಿದನು. ಅಲ್ಲಿ ಯಾವ ಮತದ, ಯಾವ ದೇವರ, ಯಾವ ಕರ್ಮಕ್ರಿಯೆಗಳಿಗೂ ಎಡೆಯಿರಲಿಲ್ಲ. ಮೂರ್ತಿಪೂಜೆ ಸಂಪೂರ್ಣವಾಗಿ ನಿಷಿದ್ಧವಾಯಿತು. ಜಾತಿ, ಮತ, ಜನಾಂಗ, ವರ್ಣ ಈ ಭೇದವಿಲ್ಲದೆ ಎಲ್ಲರಿಗೂ ಆಹ್ವಾನವಿತ್ತು. ಅನ್ಯಮತದ ದ್ವೇಷವಾಗಲಿ, ತಿರಸ್ಕಾರವಾಗಲಿ, ನಿಂದೆಯಾಗಲಿ ಯಾವುದೂ ಅಲ್ಲಿ ಸುಳಿಯ ಕೂಡದೆಂದು ಕಟ್ಟಾಯಿತು. ಜ್ಞಾನಾತ್ಮಕಭಕ್ತಿಯೋಗವೇ ರಾಯನ ಮಹಾ ಮತ. ಶ್ರೀ ಚೈತನ್ಯಪ್ರಣೀತವಾದ ಭಕ್ತಿಮತವು ವಂಗದೇಶದ ಕ್ಲೈಬ್ಯದೌರ್ಬಲ್ಯ ಗಳಿಗೆ ಕಾರಣವೆಂದು ತಿಳಿದ ರಾಯನು ಯಾವ ವಿಧವಾದ ಅಶಕ್ತಿಗೂ ಎಡೆ ಗೊಡದ ವಿಚಾರಮತವನ್ನು ಬೋಧಿಸಿದನು. ಭಾವವು ವಿಚಾರದ ಅಧಿಕಾರ ಪರೀಕ್ಷೆಗಳಿಗೆ ಒಳಪಡದಿದ್ದರೆ ಹುಚ್ಚು ಹೊಳೆಯಾಗಿ ಆತ್ಮನಾಶಕವಾಗುವುದೆಂದು ಆತನು ಅನುಭವದಿಂದ ತಿಳಿದಿದ್ದನು.

ಕಾರ್ಯದ ರಜೋಮಯರಂಗದಲ್ಲಿದ್ದ ರಾಯನು ದೆಹಲಿಯ ಚಕ್ರವರ್ತಿಯ ಇಷ್ಟದಂತೆ ೧೮೩೦ ರಲ್ಲಿ ಹಠಾತ್ತಾಗಿ ಇಂಗ್ಲೆಂಡಿಗೆ ರಾಯಭಾರಿಯಾಗಿ ಹೋಗ ಬೇಕಾಯಿತು. ಅಲ್ಲಿ ಆಂಗ್ಲೇಯರು ಆತನನ್ನು ಪ್ರೀತಿಗೌರವಗಳಿಂದ ಬಹುವಾಗಿ ಸತ್ಕರಿಸಿದರು. ರಾಯನಿಗೆ ಪುನಃ ತನ್ನ ಮಾತೃಭೂಮಿಯ ಮುಖವನ್ನು ನೋಡುವ ಸುಯೋಗ ಲಭಿಸಲಿಲ್ಲ. ಕ್ರಿ. ಶ. ೧೮೩೩ ನೆಯ ಸೆಪ್ಟೆಂಬರ್ ೨೭ ನೆಯ ತೇದಿಯಲ್ಲಿ ಮೆದುಳಿನ ಜ್ವರದಿಂದ ಬ್ರಿಸ್ಟಲ್ ನಗರದಲ್ಲಿ ಕಾಲವಾದನು.

ರಾಯನ ಮರಣಾನಂತರ ಬ್ರಾಹ್ಮಸಮಾಜವು ರವೀಂದ್ರನಾಥ ಠಾಕೂರರ ಪಿತಾಮಹನಾದ ದ್ವಾರಕಾನಾಥ ಠಾಕೂರನ ಆಶ್ರಯದಲ್ಲಿತ್ತು. ತರುವಾಯ ಆತನ ಕುಮಾರ ದೇವೇಂದ್ರನಾಥ ಠಾಕೂರನು (೧೮೧೭—೧೯೦೫) ಬ್ರಾಹ್ಮ ಸಮಾಜಕ್ಕೆ ಅಧ್ಯಕ್ಷನಾದನು. ಆತನ ಪವಿತ್ರಜೀವನಕ್ಕಾಗಿ ಜನಗಳು ಆತನನ್ನು "ಮಹರ್ಷಿ" ಎಂದು ಕರೆದರು.

ಮಹರ್ಷಿ ರಾಯನಂತೆ ಇಸ್ಲಾಂ ಸಂಸ್ಕೃತಿಯಲ್ಲಿ ಬೆಳೆದವನಲ್ಲ. ರಾಯ ನಲ್ಲಿದ್ದ ರಜೋಗುಣಕ್ಕೆ ಬದಲಾಗಿ ಈತನಲ್ಲಿ ಸತ್ತ್ವವೇ ಪ್ರಧಾನವಾಗಿತ್ತು. ಈ ಶ್ರೀಮಂತರ ಕುಮಾರನು ಬಾಲ್ಯಕೌಮಾರಗಳಲ್ಲಿ ಜಗತ್ತಿನ ಪ್ರಲೋಭನಗಳಿಗೆ

ಸಿಕ್ಕಿದ್ದನು. ಆದರೆ ಮನೆಯಲ್ಲಿ ಕೆಲವು ಇಷ್ಟರು ಮೃತರಾಗಲು ಮಹರ್ಷಿ ಚಿಂತಾಮಗ್ನನಾಗಿ ಧರ್ಮಜೀವನದ ಕಡೆಗೆ ತಿರುಗಿದನು. ಉಪನಿಷತ್ತುಗಳೇ ಆತನ ಕಣ್ಣಿನ ಬೆಳಕಾದುವು. ಮಹರ್ಷಿ ಬ್ರಾಹ್ಮಸಮಾಜದಲ್ಲಿ ಪ್ರಚಾರ ಮಾಡಿದ ನಾಲ್ಕು ತತ್ತ್ವಗಳಿವು—

ಆದಿಯಲ್ಲಿ ಏನೂ ಇರಲಿಲ್ಲ. ಪರಮಪುರುಷನೊಬ್ಬನೇ ಇದ್ದನು. ಅವನೇ ವಿಶ್ವಕರ್ತನು.

ಅನಂತಸತ್ಯವೂ ಅನಂತಜ್ಞಾನವೂ ಅನಂತಕಲ್ಯಾಣವೂ ಅನಂತಶಕ್ತಿಯೂ ನಿತ್ಯವೂ ಸರ್ವವ್ಯಾಪಿಯೂ ಏಕಮೇವಾದ್ವಿತೀಯವೂ ಆದ ಆತನೊಬ್ಬನೇ ಪೂಜ್ಯನು.

ಇಹಪರಗಳಲ್ಲಿಯೂ ಆತನಾರಾಧನೆಯೇ ನಮಗೆ ಮೋಕ್ಷದಾಯಕವಾದುದು.

ಅವನನ್ನು ಪೂಜಿಸಿ ಅವನ ಇಚ್ಛೆಯನ್ನು ನೆರವೇರಿಸುವುದೇ ನಿಜವಾದ ಶ್ರದ್ಧೆ.

ರಾಯನಂತೆಯೇ ಮೂರ್ತಿಪೂಜಾವಿರೋಧಿಯೂ ಜಾತಿಪದ್ಧತಿಯ ವಿದ್ವೇಷಿಯೂ ಆದ ಮಹರ್ಷಿಯೂ ಕ್ರೈಸ್ತ ಮತ್ತು ಹಿಂದೂ ಪುರೋಹಿತರ ಖಂಡನೆಗೆ ಒಳಗಾದನು. ಆಜನ್ಮಶ್ರೀಮಂತನೂ ಸ್ವಭಾವತಃ ಧ್ಯಾನಶೀಲನೂ ಆದ ದೇವೇಂದ್ರನಾಥನು ಸಮರರಂಗದ ಕಾರ್ಯಭಾರವನ್ನು ಇತರರಿಗೆ ಬಿಟ್ಟು ೧೮೬೦ ರಲ್ಲಿ ಧ್ಯಾನತಪಸ್ಸುಗಳಿಗಾಗಿ ಪ್ರಶಾಂತ ಮೌನಮುದ್ರಿತ ಹಿಮಾಲಯಗಳ ಬಳಿಯಿರುವ ಸಿಮ್ಲಾ ಗಿರಿಗಳಿಗೆ ಹೊರಟುಹೋದನು. ಅಲ್ಲಿ ಹದಿನೆಂಟು ತಿಂಗಳು ಏಕಾಂತವಾಸದಲ್ಲಿದ್ದು ಅನೇಕ ಧರ್ಮವಚನಗಳನ್ನು ಬರೆದನು. ತರುವಾಯ ಕಲ್ಕತ್ತೆಗೆ ಹಿಂತಿರುಗಿ ಬಂದು ಅನೇಕ ಧರ್ಮೋಪನ್ಯಾಸಗಳನ್ನು ಕೊಟ್ಟು ಜನರನ್ನು ಆಕರ್ಷಿಸಿದನು.

ಇದಾದ ಸ್ವಲ್ಪ ಕಾಲದಲ್ಲಿಯೇ ೧೮೬೨ ರಲ್ಲಿ ಕೇಶವಚಂದ್ರಸೇನನೆಂಬ ಇಪ್ಪತ್ತುಮೂರು ವರ್ಷದ ಯುವಕನೊಬ್ಬನು ಮಹರ್ಷಿಯ ಸಹಕಾರಿಯಾಗಿ ಬ್ರಾಹ್ಮಸಮಾಜಕ್ಕೆ ಸೇರಿದನು. ಕೇಶವನು (೧೮೩೮—೧೮೮೪) ರಾಮಮೋಹನನಂತೆ ಮಹಾಮನೀಷಿಯೂ ಆಗಿರಲಿಲ್ಲ; ದೇವೇಂದ್ರನಾಥನಂತೆ ಮಹರ್ಷಿಯೂ ಆಗಿರಲಿಲ್ಲ. ರಾಯನಿಗೆ ಇಸ್ಲಾಂ ಸಂಸ್ಕೃತಿಯೂ ಮಹರ್ಷಿಗೆ ಆರ್ಯ ಸಂಸ್ಕೃ

ತಿಯೂ ಪೀಠಿಕೆಗಳಾದಂತೆ ಕೇಶವನಿಗೆ ಕ್ರೈಸ್ತ ಸಂಸ್ಕೃತಿ ಪೀಠಿಕೆಯಾಗಿತ್ತು. ಮಹರ್ಷಿ ಮತ್ತು ರಾಯರಂತೆ ಆತನು ಶ್ರೀಮಂತನೂ ಆಗಿರಲಿಲ್ಲ; ಬ್ರಾಹ್ಮಣನೂ ಆಗಿರಲಿಲ್ಲ. ಸಾಧಾರಣ ವೈದ್ಯಜಾತಿಯ ಮನೆತನಕ್ಕೆ ಸೇರಿದವನಾಗಿದ್ದನು. ಆತನಿಗೆ ಸಂಸ್ಕೃತ ಭಾಷೆಯ ಪರಿಚಯವಿರಲಿಲ್ಲ. ಆತನ ಪ್ರಕೃತಿ ಕೋಮಲ ಚಂಚಲವಾಗಿತ್ತು. ಸ್ಫೂರ್ತಿ ಬಹಳವಿತ್ತು. ಮಹಾವಾಗ್ಮಿಯಾಗಿದ್ದನು. ಚಿಕ್ಕಂದಿನಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡ ಆತನು ಒಂದು ಇಂಗ್ಲೀಷ್ ಸ್ಕೂಲಿನಲ್ಲಿ ಬೆಳೆದನು. ಅಲ್ಲಿ ಬೈಬಲ್ಲನ್ನು ಓದಿ ಕ್ರಿಸ್ತನನ್ನು ಒಲಿದನು. ಆತನಲ್ಲಿ ಸಮಾಜ ಸುಧಾರಣೆಯ ಆಸಕ್ತಿ ಬಹಳವಾಗಿತ್ತು. ಆದ್ದರಿಂದಲೇ ಬ್ರಾಹ್ಮಸಮಾಜವನ್ನು ಸೇರಿ ಆರ್ಯಧರ್ಮದ ಪುನರುಜ್ಜೀವನ ಕಾರ್ಯದಲ್ಲಿ ಬದ್ಧಕಂಕಣನಾಗಿ ನಿಂತನು. ಮೊದಮೊದಲು ಆತನು ದೇವೇಂದ್ರನಾಥನ ಕಣ್ಣಾಮಣಿಯಾಗಿದ್ದರೂ ತುದಿಯಲ್ಲಿ ಪ್ರಶಾಂತ ಮಹರ್ಷಿಗೆ ಕೇಶವನ ಚಂಚಲತೆ, ಅತ್ಯುತ್ಸಾಹಗಳು ಸರಿಬೀಳಲಿಲ್ಲ. ಅಲ್ಲದೆ ತನ್ನ ಪ್ರಿಯ ಶಿಷ್ಯನ ಮನಸ್ಸು ಕ್ರಿಸ್ತಪಕ್ಷಪಾತಿಯಾದುದೆಂದು ತಿಳಿಯಲು ಮಹರ್ಷಿಗೆ ಹೆಚ್ಚುಕಾಲ ಹಿಡಿಯಲಿಲ್ಲ. ಈ ಎಲ್ಲ ಕಾರಣಗಳಿಂದ ಬ್ರಾಹ್ಮಸಮಾಜವು ಬಿರುಕುಬಿಟ್ಟಿತು. ೧೮೬೬ ರಲ್ಲಿ ದೇವೇಂದ್ರನು ಆದಿಬ್ರಾಹ್ಮಸಮಾಜಕ್ಕೂ ಕೇಶವನು ಭಾರತವರ್ಷೀಯ ಬ್ರಾಹ್ಮಸಮಾಜಕ್ಕೂ ಅಧ್ಯಕ್ಷರಾದರು. ಇದಾದ ಮೂರು ತಿಂಗಳಲ್ಲಿಯೇ ಸಾರ್ವಜನಿಕ ಉಪನ್ಯಾಸವೊಂದರಲ್ಲಿ ಕೇಶವನು ಯೇಸು ಕ್ರಿಸ್ತನ ಮೇಲೆ ತನಗಿದ್ದ ಪ್ರೇಮವನ್ನು ಸೂಚಿಸಿದನು. ಪಾಶ್ಚಾತ್ಯ ಕ್ರಿಸ್ತನನ್ನಲ್ಲದಿದ್ದರೂ ಪ್ರಾಚ್ಯ ಕ್ರಿಸ್ತನನ್ನು ಆರಾಧಿಸಬೇಕೆಂಬುದೇ ಉಪನ್ಯಾಸದ ಸಾರಾಂಶವಾಗಿತ್ತು. ಕೇಶವನು ಅನಾರ್ಯ, ವಿಧರ್ಮಿ ಎಂಬ ಕೂಗು ಎಲ್ಲೆಲ್ಲಿಯೂ ಹಬ್ಬಿತು. ಆ ದೂರನ್ನು ದೂರಮಾಡುವುದಕ್ಕಾಗಿ ಅವನು "ಮಹಾಪುರುಷರು" ಎಂಬ ಉಪನ್ಯಾಸ ಮಾಡಿದನು. ಆ ಉಪನ್ಯಾಸದಲ್ಲಿ ಕ್ರಿಸ್ತನನ್ನು ಭಗವಂತನ ಅನೇಕ ದೂತರುಗಳಲ್ಲಿ ಒಬ್ಬನನ್ನಾಗಿ ಪರಿಗಣಿಸಿದನು. ಎಲ್ಲ ಮತಗ್ರಂಥಗಳೂ ವಂದನೀಯವೆಂದು, ಅದುವರೆಗೂ ವೇದೋಪನಿಷತ್ತುಗಳ ಮಂತ್ರಗಳಿಂದ ಮಾತ್ರವೇ ತುಂಬಿದ್ದ ಬ್ರಾಹ್ಮಸಮಾಜದ ಪ್ರಾರ್ಥನೆಯ ಕೈಬುಟ್ಟಿಗೆ ಬೈಬಲ್, ಕೊರಾನ್, ಜೆಂದವೆಸ್ತಗಳಿಂದಲೂ ಮಂತ್ರಗಳನ್ನು ಆಯ್ದು ತುಂಬಿದನು. ಪ್ರತಿಭಟನೆಯ ಹಾಹಾಕಾರವು ಮತ್ತೂ

ಪ್ರಬಲವಾಯಿತು. ಕೋಮಲ ಹೃದಯಿಯಾದ ಕೇಶವನು ಬಹಳ ನೊಂದನು; ಆದರೂ ಎದೆಗೆಡಲಿಲ್ಲ. ಜನರು ದೂರಿದರು; ಮಿತ್ರರು ಕೈಬಿಟ್ಟರು; ವ್ಯವಹಾರ ದಲ್ಲಿಯೂ ತೊಂದರೆಗಳುಂಟಾದುವು; ಎಲ್ಲಕ್ಕೂ ಮಿಗಿಲಾಗಿ ತನ್ನ ಸಂದೇಶ ದಲ್ಲಿಯೇ ತನಗೆ ಸಂದೇಹವುಂಟಾಗಿ ಮರುಗಿದನು. ಸುತ್ತಲೂ ಕತ್ತಲೆ ಕವಿ ದಂತಾಯಿತು. ಬೆಳಕಿಗಾಗಿ ಹಗಲಿರುಳೂ ಭಗವಂತನನ್ನು ಬೇಡಿದನು.

ಅನಿರೀಕ್ಷಿತವಾದ ದಿಕ್ಕಿನಿಂದ ಬೆಳಕು ಬಂದಿತು. ೧೮೭೫ರಲ್ಲಿ ಕೇಶವನಿಗೆ ದಕ್ಷಿಣೇಶ್ವರದ ಮಹಾಜ್ಯೋತಿಯ ದರ್ಶನವಾಯಿತು. ಪ್ರಥಮ ದರ್ಶನವು ಅನೇಕಾನೇಕ ಸ್ನೇಹಪೂರ್ಣ ಸಂದರ್ಶನಗಳಿಗೆ ಪೀಠಿಕೆಯಾಯಿತು. ಆ ಕಥೆಯ ವಿವರಣೆಯೂ ಆ ಸಂಬಂಧದ ಮಾಧುರ್ಯ ರಹಸ್ಯಗಳ ವರ್ಣನೆಯೂ ಮುಂದ ಕ್ಕಿರಲಿ.

ಅಂತೂ ಕೇಶವಚಂದ್ರನ ಜೀವನ ಭಾವನೆ ಬೋಧನೆಗಳು ರೂಪಾಂತರ ಹೊಂದಿದುವು. ಖಂಡನೆ ಕೊಂಡಿಮುರಿದು ಸಹಾನುಭೂತಿಯಾಯಿತು. ಬ್ರಾಹ್ಮಸಮಾಜದಲ್ಲಿ ಅಭೂತಪೂರ್ವ ಜೀವಸಂಚಾರವಾಯಿತು. ಆರ್ಯ ಸಂಸ್ಕೃತಿ ಪಾಶ್ಚಾತ್ಯ ಸಂಸ್ಕೃತಿಯನ್ನು ಜೀರ್ಣಿಸಿಕೊಂಡು ಪುನಃ ಜಯ ಶೀಲವಾಗಿ ಆರೋಗ್ಯಶಾಲಿಯಾಯಿತು; ಭಾಗ್ಯಶಾಲಿಯೂ ಆಯಿತು. ಅದು ವರೆಗೆ ಮೂರ್ತಿಪೂಜೆ, ದೇವದೇವತೆಗಳ ಆರಾಧನೆ ಮೊದಲಾದುವನ್ನು ನಿಷ್ಕ ರುಣವಾದ ಅನುದಾರತೆಯಿಂದ ಖಂಡಿಸುತ್ತಿದ್ದ ಕೇಶವನು ಅವುಗಳನ್ನು ವಿವರಿಸಿ ಅವುಗಳ ಪರವಾಗಿ ಮಾಸಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದನು. ಪರತತ್ತ್ವವನ್ನು ಜಗನ್ಮಾತೆಯೆಂದು ಸಂಬೋಧಿಸಲಾರಂಭಿಸಿದನು. ಬ್ರಾಹ್ಮಸಮಾಜದ ಪ್ರಾರ್ಥ ನಾಮಂದಿರವು ಚೈತನ್ಯ ಮೊದಲಾದ ವೈಷ್ಣವ ಭಕ್ತರ ಕೀರ್ತನೆಗಳಿಂದ ಪ್ರತಿ ಧ್ವನಿತವಾಯಿತು! ಅದೇ ವರ್ಷವೇ "ಅದೋ ನೋಡಿ, ಸ್ವರ್ಗದ ಜ್ಯೋತಿ ಭಾರತ ಭೂಮಿಯಲ್ಲಿ ಮೂಡಿದೆ!" ಎಂಬ ಉಪನ್ಯಾಸದಲ್ಲಿ ತನ್ನ ನವ ವಿಧಾನದ ತತ್ತ್ವಗಳನ್ನು ಘಂಟಾಘೋಷವಾಗಿ ಸಾರಿಬಿಟ್ಟನು. ಹೀಗೆ ಮಹಾಪುರುಷ ನಾದರೂ ಚಂಚಲ ಪ್ರಕೃತಿಯ ಕೇಶವನು ಹೂವಿಂದ ಹೂವಿಗೆ ಹಾರುವ ದುಂಬಿ ಯಂತೆ, ಜೀವಮಾನವನ್ನೆಲ್ಲಾ ಸಾಧಕನಾಗಿಯೇ ಕಳೆದನು. ಆತನ ಹೃದಯ ದಲ್ಲಿ ಪ್ರಾಚ್ಯ ಮತ್ತು ಪಾಶ್ಚಾತ್ಯಗಳ ಆದರ್ಶಗಳೂ ಸಂಸ್ಕೃತಿಗಳೂ ಯಾವಾ

ಗಲೂ ಹೋರಾಡುತ್ತಲೇ ಇದ್ದುವು. ಆತನ ಮನಸ್ಸು ತೂಗುಯ್ಯಾಲೆಯಾಗಿತ್ತು. ಈ ಸತ್ಯಶೋಧಕನ ಮರಣಶಯ್ಯೆಯ ಬಳಿ ಎಲ್ಲ ಮತದವರೂ ಸೇರಿದ್ದರು. ಕ್ರಿ. ಶ. ೧೮೮೪ ರಲ್ಲಿ ಆತನ ಜೀವನ ಯಾತ್ರೆ ಕೊನೆಗಂಡಿತು.

ಕೇಶವಚಂದ್ರಸೇನನ ಪ್ರಭಾವವು ವಂಗದೇಶವೊಂದರಲ್ಲಿಯೇ ಅಲ್ಲದೆ ಎಲ್ಲ ಕಡೆಯೂ ಹಬ್ಬಿತ್ತು. ಕ್ರಿ. ಶ. ೧೮೭೦ ರಲ್ಲಿ ಇಂಗ್ಲೆಂಡಿನಲ್ಲಿ ಆತನು ಮಾಡಿದ ಭಾಷಣಪರಂಪರೆಯಲ್ಲ ಒಂದು ಜೈತ್ರಯಾತ್ರೆಯಂತಿತ್ತು. ಅಲ್ಲಿ ಎಲ್ಲರೂ ಆತ ನನ್ನು ಪ್ರಾಚ್ಯದ ಕ್ರೈಸ್ತದೂತನೆಂದು ಹೊಗಳಿದರು. ಅದರಂತೆಯೇ ೧೮೭೯ ರಲ್ಲಿ ಭಾರತವರ್ಷದಲ್ಲೆಲ್ಲಾ ಒಂದು ಪ್ರಚಾರ ಯಾತ್ರೆಮಾಡಿದನು. ಆಗ ಆತನು ಹೊಸದಾಗಿ ದಕ್ಷಿಣೇಶ್ವರದ ಗುರುದೇವನಿಂದ ಕಲಿತ ಸರ್ವಧರ್ಮ ಸಮನ್ವಯದ ಭಾವಗಳನ್ನೇ ಉಪದೇಶಮಾಡಿದನು. ಆದರೆ ಈ ಸ್ವಯಮಾಚಾರ್ಯನ ಮನ ದಲ್ಲಿಯೇ ಸಮನ್ವಯದ ಅಭಾವವಿದ್ದುದರಿಂದಲೂ ಅದಕ್ಕೆ ಬೇಕಾದ ಅನುಭವದ ಆಧಾರವಿಲ್ಲದಿದ್ದುದರಿಂದಲೂ ಜನಗಳಿಗೆ ಆತನ ಚಂಚಲತೆ ಅರ್ಥವಿಲ್ಲದ ಸಮಸ್ಯೆ ಯಾಯಿತು. ಕೇಶವನ ವಾಣಿ ಸಿದ್ಧನ ಅಧಿಕಾರವಾಣಿಯಾಗಿರಲಿಲ್ಲ.

ಹೀಗೆ ಪ್ರಾಚ್ಯಪಾಶ್ಚಾತ್ಯ ಸಂಸ್ಕೃತಿಗಳು ಒಂದನ್ನೊಂದು ನುಂಗಲು ಪ್ರಯತ್ನಿಸುತ್ತಿದ್ದಾಗಲೇ ಭಾರತವರ್ಷದ ಪಶ್ಚಿಮ ಭಾಗದಲ್ಲಿ ಮತ್ತೊಂದು ಭೀಮಮೂರ್ತಿ ಸಿಂಹಸದೃಶವಾಗಿ ಪ್ರತಿಭಟನೆಯ ಗರ್ಜನೆಯನ್ನು ಬೀರುತ್ತ ಮೂಡಿತು. ಆತನೇ ಮಹಾಪುರುಷನಾದ ದಯಾನಂದ ಸರಸ್ವತಿ (೧೮೨೪—೧೮೮೩). ಆತನ ಜನ್ಮಸ್ಥಾನ ಗುಜರಾತು; ತಂದೆತಾಯಿಗಳು ಸಾಮವೇದಿ ಗಳಾದ ಶ್ರೇಷ್ಠ ಬ್ರಾಹ್ಮಣರು. ದಯಾನಂದನು ಸಂಪೂರ್ಣವಾಗಿ ಹಿಂದೂ ಸಂಪ್ರದಾಯದಲ್ಲಿಯೇ ಬೆಳೆದನು. ಹದಿನಾಲ್ಕನೆಯ ವಯಸ್ಸಿನಲ್ಲಿ ತನ್ನ ತಂದೆ ಯೊಡನೆ ಒಂದು ಶಿವದೇವಾಲಯದ ಉತ್ಸವದಲ್ಲಿ ಭಾಗಿಯಾಗಿ ರಾತ್ರಿ ಜಾಗ ರಣೆ ಮಾಡುತ್ತಿರಲು ಇಲಿಯೊಂದು ದೇವರ ಮೇಲೆ ಹರಿದಾಡಿದ್ದಲ್ಲದೆ ನೈವೇದ್ಯ ವನ್ನೂ ತಿನ್ನುತ್ತಿದ್ದುದು ಬಾಲಕನ ಕಣ್ಣಿಗೆ ಬಿತ್ತು. ವಿಗ್ರಹದಲ್ಲಿ ಹುದುಗಿಸಿ ಗಿದ್ದ ನಂಬುಗೆ ಹುಡಿಹುಡಿಯಾಯಿತು. ಕುಮಾರನು ದೇವಾಲಯವನ್ನು ತ್ಯಜಿಸಿ ಕತ್ತಲೆಯಲ್ಲಿಯೇ ಮನೆಗೆ ಹೋದನು. ತರುವಾಯ ಆತನು ಯಾವ ಪೂಜಾ ಕರ್ಮದಲ್ಲಿಯೂ ಭಾಗಿಯಾಗಲಿಲ್ಲ. ತಂದೆಗೂ ಮಗನಿಗೂ ಕದನಕ್ಕಾರಂಭ

ವಾಯಿತು. ತಂದೆಯಂತೆಯೇ ಮಗನದೂ ವಜ್ರಮನಸ್ಸಾದುದರಿಂದ ಇಬ್ಬರ ಲ್ಲೊಬ್ಬನೂ ತಗ್ಗಲಿಲ್ಲ. ಹತ್ತೊಂಬತ್ತನೆಯ ವಯಸ್ಸಿನಲ್ಲಿ ಬಲಾತ್ಕಾರದ ಮದುವೆ ಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ದಯಾನಂದನು ಮನೆ ಬಿಟ್ಟು ಓಡಿದನು. ಹಿಡಿದು ಸೆರೆಯಿಟ್ಟರು. ಪುನಃ ೧೮೪೫ ರಲ್ಲಿ ಹೋದವನು ಮನೆಗೆ ಹಿಂದಿರುಗ ಲಿಲ್ಲ. ತಂದೆಯ ಮುಖವನ್ನು ನೋಡಲಿಲ್ಲ. ಅಲ್ಲಿಂದ ಹದಿನೈದು ಸಂವತ್ಸರಗಳ ವರೆಗೆ ಬಾಲಕನು ಗೈರಿಕವಸನಧಾರಿಯಾಗಿ ಭಿಕ್ಷದಿಂದ ಜೀವನಮಾಡುತ್ತ ವೇದ ಭೂಮಿಯ ಬಹುಭಾಗಗಳಲ್ಲಿ ಸಂಚರಿಸಿದನು. ಆ ನಡುವೆ ಪಂಡಿತ ಸಾಧುಸನ್ಯಾಸಿ ಗಳನ್ನು ಹುಡುಕಿ ಸಂದರ್ಶಿಸಿದನು. ವೇದಗಳನ್ನೂ ದರ್ಶನಗಳನ್ನೂ ಅಧ್ಯಯನ ಮಾಡಿದನು. ಯೋಗಸಿದ್ಧಾಂತವನ್ನು ಚೆನ್ನಾಗಿ ಅರಿತು ಯೋಗಸಾಧನೆಗಳನ್ನು ಅಭ್ಯಾಸಮಾಡಿದನು. ಪವಿತ್ರಕ್ಷೇತ್ರಗಳಿಗೆ ಹೋಗಿ ಅಲ್ಲಿ ವಿದ್ವಾಂಸರ ವಾದಗಳಲ್ಲಿ ಭಾಗಿಯಾದನು. ಕಷ್ಟ, ನಷ್ಟ, ಅಪಾಯ, ಅನ್ಯಾಯ, ಅವಮಾನಗಳೆಲ್ಲವನ್ನೂ ಹೇಸದೆ, ಹೆದರದೆ ಸಹಿಸಿದನು. ಆದರೆ ಪರಿವ್ರಾಜಕನಾದ ದಯಾನಂದನಿಗೆ ಜನ ಸಾಮಾನ್ಯದ ಜೀವನದ ಪರಿಚಯವು ಚೆನ್ನಾಗಿ ದೊರೆಯಲಿಲ್ಲ. ಏಕೆಂದರೆ, ಆತನು ಆ ಕಾಲದಲ್ಲೆಲ್ಲಾ ಗೀರ್ವಾಣ ಭಾಷೆಯನ್ನಲ್ಲದೆ ಮಾತಾಡುತ್ತಿರಲಿಲ್ಲ. ದಯಾ ನಂದನಿಗೆ ಎಲ್ಲಿ ನೋಡಿದರೂ ಮೌಢ್ಯ, ಅಜ್ಞಾನ, ಅನಾಚಾರ, ಹೇಯವಾದ ಮೂರ್ತಿಪೂಜೆಗಳೇ ಕಣ್ಣಿಗೆ ಬಿದ್ದುವು. ಕೃಷ್ಣಪಕ್ಷವನ್ನು ನೋಡಿದ ಆತನು ಶುಕ್ಲ ಪಕ್ಷವನ್ನು ನೋಡಲು ಇಚ್ಛಿಸಲೂ ಇಲ್ಲ. ಕಟ್ಟಕಡೆಗೆ ೧೮೬೦ ರಲ್ಲಿ ಮಥುರಾ ಪುರಿಯಲ್ಲಿ ಹುಟ್ಟುಕುರುಡನಾಗಿಯೂ ಹನ್ನೊಂದನೆಯ ವಯಸ್ಸಿನಿಂದಲೂ ಏಕಾಂತವಾಸಿಯಾಗಿಯೂ ಸರ್ವ ಮೌಢ್ಯ ದೌರ್ಬಲ್ಯ ವಿದ್ವೇಷಿಯಾಗಿಯೂ ತನಗಿಂತಲೂ ಮಹಾಪಂಡಿತನೂ ಧೃಷ್ಣುವೂ ಶಿಲಾಶೈಲೋಪಮ ಭಯಂಕರನೂ ಆಗಿದ್ದ ಸನ್ಯಾಸಿಯೊಬ್ಬನು ದಯಾನಂದನಿಗೆ ಗುರುವಾಗಿ ದೊರಕಿದನು. ಆತನ ಹೆಸರು ಸ್ವಾಮಿ ವಿರಜಾನಂದ ಸರಸ್ವತಿ. ಶಿಷ್ಯನು ಆ ಪರ್ವತಪ್ರಕೃತಿಯ ಸಾಧು ವನ್ನು ಎರಡೂವರೆ ವರ್ಷಗಳ ವರೆಗೆ ಸೇವೆಮಾಡಿ ಅನುಸರಿಸಿದನು. ಶಿಷ್ಯತ್ವವನ್ನು ಪೂರೈಸಿ, ವೇದಧರ್ಮವನ್ನು ಉದ್ಧಾರಮಾಡಬೇಕೆಂಬ ಗುರುವಿನ ಕಠೋರಾಜ್ಞೆ ಯನ್ನು ಶಿರಸಾವಹಿಸಿ ದಯಾನಂದ ಸರಸ್ವತಿ ದೃಢಮನಸ್ಸಿನಿಂದ ಕಾರ್ಯರಂಗಕ್ಕೆ ಧುಮುಕಿದನು.

ದಯಾನಂದನು ಇತರರ ಮತವನ್ನಾಗಲಿ, ಸತ್ಯವನ್ನಾಗಲಿ, ಭಿನ್ನಾಭಿಪ್ರಾಯವನ್ನಾಗಲಿ ಆಲಿಸಿ ವಿಚಾರಮಾಡುವ ಗೋಜಿಗೆ ಹೋಗದೆ ತನ್ನ ಸತ್ಯದ ಗದೆಯನ್ನು ನಿರ್ದಾಕ್ಷಿಣ್ಯವಾಗಿ ಭೀಮನಂತೆ ಬೀಸತೊಡಗಿದನು. ಪೆಟ್ಟಿ ಯಾರಿಗೆ ಬೀಳುತ್ತದೆ, ಎಲ್ಲಿಗೆ ಹೋಗುತ್ತದೆ, ಎಷ್ಟು ದೂರ ಹಬ್ಬುತ್ತದೆ ಎಂಬುದಾವುದನ್ನೂ ಆತನು ಗಣನೆಗೆ ತಂದುಕೊಳ್ಳಲೇ ಇಲ್ಲ. ಈ ಭೀಮ ಸನ್ಯಾಸಿ ಎಷ್ಟರ ಮಟ್ಟಿಗೆ ಜಯಶೀಲನಾದನೆಂದರೆ, ಐದೇ ವರ್ಷಗಳಲ್ಲಿ ಉತ್ತರ ಹಿಂದೂಸ್ಥಾನವೇ ಬದಲಾಯಿಸಿಹೋಯಿತು. ಮತಭ್ರಾಂತರಾದ ದುಷ್ಟರು ಆತನನ್ನು ನಾಲ್ಕೈದು ಸಾರಿ ಕೊಲೆಮಾಡಲು ಯತ್ನಿಸಿದರು; ಕೆಲವು ಸಾರಿ ವಿಷಪ್ರಯೋಗದಿಂದ. ಒಂದು ಸಾರಿ ಒಬ್ಬನು ವಿಷ ಸರ್ಪವೊಂದನ್ನು ಆತನ ಮುಖಕ್ಕೆ ಎಸೆದನು. ದಯಾನಂದನು ಅದನ್ನು ಹಿಸುಕಿ ಬಿಸುಟನು. ಗೀರ್ವಾಣ ಭಾಷೆಯಲ್ಲಿಯೂ ವೇದವಿದ್ಯೆಯಲ್ಲಿಯೂ ಅಸಾಧಾರಣ ಮನೀಷಿಯಾದ ಆತನನ್ನು ಸೋಲಿಸುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ಸಾಂಪ್ರದಾಯಿಕ ಬ್ರಾಹ್ಮಣರು ಕುಪಿತರಾದರು. ಕಾಶಿಯಲ್ಲಿ ಮಹಾಸಭೆಯನ್ನು ಸೇರಿಸಿ ದಯಾನಂದನನ್ನು ವಾದಕ್ಕೆ ಕರೆದರು. ಸಂಪ್ರದಾಯದ ಗುಹೆಯಲ್ಲಿಯೇ ವಾದದ ಕುರುಕ್ಷೇತ್ರ ಯುದ್ಧವು ಜರುಗಿತು. ಶತ್ರುವನ್ನು ಸಂಹರಿಸಲೇ ಬೇಕೆಂದು ದೃಢಮನಸ್ಸಿನಿಂದ ನೆರೆದ ವಾದಿ-ಸಿಂಹ ಪ್ರತಿವಾದಿಭಯಂಕರರಾದ ಸಾವಿರಾರು ಪಂಡಿತರೊಡನೆ ದಯಾನಂದನು ಏಕಾಂಗಿಯಾಗಿ ಮಾರಾಂತು ಆಚಾರದಲ್ಲಿರುವ ವೇದಾಂತವು ವೇದಮತಕ್ಕೆ ಸಂಪೂರ್ಣವಾಗಿ ವಿರೋಧವಾದುದೆಂದು ಸಿಂಹವಾಣಿಯಿಂದ ಘೋಷಿಸಿದನು. ಮೂರ್ತಿಪೂಜೆ, ಜಾತಿಪದ್ಧತಿ ಮೊದಲಾದುವು ವೇದಬಾಹಿರವಾದ ಅನಾಚಾರಗಳೆಂದು ಗುಡುಗಿದನು. ಪಂಡಿತರೆಲ್ಲರಿಗೂ ತಾಳ್ಮೆ ತಪ್ಪಿ, ಮನುಷ್ಯ ಗೌರವವನ್ನು ಕೂಡ ಮರೆತು, ಸುಮ್ಮನೆ ಕೂಗೆಬ್ಬಿಸಿ, ಎದುರಾಳಿಯ ಸದ್ದನ್ನು ತಮ್ಮ ಗದ್ದಲದಿಂದ ಗೆದ್ದುದರಿಂದ ಆತನ ವಾದವನ್ನು ಗೆದ್ದೆವೆಂದು ಸಾರಿ ದಯಾನಂದನಿಗೆ ಬಹಿಷ್ಕಾರ ಹಾಕಿದರು! ಆತನ ಕೀರ್ತಿ ಮತ್ತೂ ಜಾಜ್ವಲ್ಯಮಾನವಾಯಿತು.

ದಯಾನಂದನು ೧೮೭೨ ರಲ್ಲಿ ಕಲ್ಕತ್ತೆಗೆ ಹೋಗಿ ಐದು ತಿಂಗಳು ಅಲ್ಲಿದ್ದನು. ಕೇಶವಚಂದ್ರಸೇನನೂ ಇತರ ಬ್ರಾಹ್ಮಸಮಾಜಿಗಳೂ ಆತನನ್ನು ಸಂಧಿಸಿದರು.

ದಯಾನಂದನು ಆವರ ಪಾಶ್ಚಾತ್ಯ ಭಾವನೆಗಳನ್ನೆಲ್ಲ ನಿರ್ದಾಕ್ಷಿಣ್ಯವಾಗಿ ಖಂಡಿಸಿ ಬಿಟ್ಟನು. ಆದರೂ ಬ್ರಾಹ್ಮಸಮಾಜಿಗಳು ಭಿನ್ನಾಭಿಪ್ರಾಯಗಳಿಗೆ ಕಣ್ಣುಮುಚ್ಚಿದರು. ಏಕೆಂದರೆ, ಅವರಿಗೆ ಯಾರಾದರೇನಂತೆ, ಮೂರ್ತಿಪೂಜೆ ಜಾತಿಪದ್ಧತಿಗಳನ್ನು ವಿರೋಧಿಸಿದರೆ ಸಾಕಾಗಿತ್ತು. ದಯಾನಂದನಿಗೆ ವೇದಪ್ರಾಮಾಣ್ಯವನ್ನೂ ಜನ್ಮಾಂತರವನ್ನೂ ನಂಬದ ಯಾರೂ ವಂದನೀಯರಾಗಿರಲಿಲ್ಲ. ಆದ್ದರಿಂದ ಬ್ರಾಹ್ಮಸಮಾಜಿಗಳಿಂದ ತನಗೆ ಬೇಕಾಗಿದ್ದ ಪ್ರಚಾರವಿಧಾನಗಳನ್ನು ಕಲಿತುಕೊಂಡು ಬೊಂಬಾಯಿಗೆ ಬಂದು ಕೆಲವು ದಿನಗಳಲ್ಲಿಯೇ ೧೮೭೫ ನೆಯ ಏಪ್ರಿಲ್ ೧೦ ರಲ್ಲಿ "ಆರ್ಯಸಮಾಜ"ವನ್ನು ಸ್ಥಾಪಿಸಿದನು. ಅದು ಬಹು ಬೇಗನೆ ಗುಜರಾತು, ಪಂಜಾಬು, ಮಧ್ಯಪ್ರಾಂತ್ಯ, ರಾಜಪುತ್ರಸ್ಥಾನ, ಅಯೋಧ್ಯೆ ಮೊದಲಾದ ಭಾಗಗಳಲ್ಲಿ ಹಬ್ಬಿತು.

ಇನ್ನೂ ಕಾರ್ಯರಂಗದಲ್ಲಿರುವಾಗಲೇ ತಾನು ಸನ್ಮಾರ್ಗಕ್ಕೆಳೆಯಲು ಪ್ರಯತ್ನಿಸಿದ ಒಬ್ಬ ಮಹಾರಾಜನ ಕುಪಿತ ವೇಶ್ಯೆಯ ಘೋರ ವಿಷಪ್ರಯೋಗದಿಂದ ದಯಾನಂದನ ಜೀವಜ್ಯೋತಿ ೧೮೮೩ ನೆಯ ಅಕ್ಟೋಬರ್ ೩೦ ನೆಯ ತಾರೀಖಿನಲ್ಲಿ ಅಜಮೀರು ನಗರದಲ್ಲಿ ನಂದಿಹೋಯಿತು. ಆದರೆ ಆ ಮಹಾಪುರುಷನು ಹೊತ್ತಿಸಿದ ಜೀವನದ ಜ್ಯೋತಿ ಆತನ ರಕ್ತತೈಲದಿಂದಲೇ ಪೋಷಿತವಾಗಿ ಮತ್ತೂ ದೇದೀಪ್ಯಮಾನವಾಯಿತು. ಆರ್ಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಮುಳುಗಿಸಿ ಮಾಯಮಾಡಿಬಿಡುವುದೋ ಎಂಬಂತೆ ರಭಸದಿಂದ ನುಗ್ಗಿ ಬಂದ ಪಾಶ್ಚಾತ್ಯ ಸಂಸ್ಕೃತಿಯ ಪ್ರಚಂಡ ಪ್ರವಾಹವನ್ನು ತಡೆದು ಸುಮುಖವಾಗಿಸಿದ ಮಹನೀಯರಲ್ಲಿ ಸ್ವಾಮಿ ದಯಾನಂದ ಸರಸ್ವತಿಯೂ ಸುಮಾನನೀಯನು. ಆತನಲ್ಲಿ ಸ್ವಮತಾಭಿಮಾನದಿಂದ ಪ್ರೇರಿತವಾದ ಅಸಹನೆ ತೋರಬಹುದು. ಆದರೆ ಅದು ಇತರ ಮತಾಭಿಮಾನಿಗಳ ಅಸಹನೆಯನ್ನು ಪ್ರತಿಭಟಿಸಲು ಆವಶ್ಯಕವಾಗಿತ್ತು. ಆತನು ಮಾಡಿದ ಕ್ರೈಸ್ತಾದಿ ಮತಗಳ ಖಂಡನೆ ಅನ್ಯಾಯವೆಂದೂ ಅಪೂರ್ಣಜ್ಞಾನ ಜನ್ಯವಾದುದೆಂದೂ ತೋರಬಹುದು. ಅಂತೆಯೇ ಇತರ ಮತಸ್ಥರ ಆರ್ಯಮತ ಖಂಡನೆಯೂ ಅನ್ಯಾಯವೂ ಅಜ್ಞಾನಮೂಲವೂ ಆದುದೆಂಬುದನ್ನು ಮರೆಯಬಾರದು. ಕೈಗೆ ಕೈ, ಮೈಗೆ ಮೈ ಎಂದು ಮುಯ್ಯಿಗೆ ಮುಯ್ಯಾಗಿ ನಿಂತ ಯೋಧನು ದಯಾನಂದನು! ಧರ್ಮ ಮತ್ತು

ತತ್ತ್ವಪ್ರಪಂಚಗಳ ಮಾತು ಏನೇ ಇರಲಿ, ಸಾಮಾಜಿಕ ಪ್ರಪಂಚದಲ್ಲಿ ಆತನು ಬೋಧಿಸಿರುವ ಸುಧಾರಣೆಗಳೂ ತತ್ತ್ವಗಳೂ ಎಲ್ಲರೂ ಒಪ್ಪತಕ್ಕುವು.

ಆರ್ಯಾವರ್ತದ ಉತ್ತರಭಾಗದಲ್ಲಿ ವಂಗ, ಪಂಜಾಬು ದೇಶಗಳಲ್ಲಿ ಆಂದೋಲನಗಳು ನಡೆಯುತ್ತಿದ್ದಾಗಲೇ ದಕ್ಷಿಣಭಾರತದಲ್ಲಿಯೂ ಒಂದು ನವೀನ ಸಂಸ್ಥೆ ತಲೆಯೆತ್ತಿತು. ಆರ್ಯಸಮಾಜವು ಸ್ಥಾಪಿತವಾದ ಸಂವತ್ಸರದಲ್ಲಿಯೇ, ಎಂದರೆ ೧೮೭೫ ರಲ್ಲಿ "ಥಿಯಾಸೊಫಿ" ಎಂಬ ಸಂಸ್ಥೆ ಮದರಾಸಿನಲ್ಲಿ ಅಂಕುರಿಸಿತು. ಅದರ ಅನುಯಾಯಿಗಳು ಅದನ್ನು "ಬ್ರಹ್ಮವಿದ್ಯಾಸಮಾಜ" ಎಂದು ಕರದರೂ ಅದು ಇತರ ಸಮಾಜಗಳಂತಲ್ಲದೆ ಸಂಪೂರ್ಣವಾಗಿ ಪಾಶ್ಚಾತ್ಯ ಪ್ರಣೀತವಾದುದು. ರಷ್ಯಾ ದೇಶದ ಮ್ಯಾಡಂ ಬ್ಲಾವಟ್‌ಸ್ಕಿ ಎಂಬ ಮೇಧಾವಿ ನಿಯೂ ಅಮೆರಿಕಾ ದೇಶದ ಕರ್ನಲ್ ಆಲ್ಕಾಟ್ ಎಂಬ ಚತುರನೂ ಅದಕ್ಕೆ ಅಧಿನೇತೃಗಳು. ಅವರ ತತ್ತ್ವಗಳು ಅಂತರಂಗವೂ ಗುಹ್ಯವೂ ಆದುದರಿಂದ ಸಾಮಾನ್ಯರಿಗೆ ತಿಳಿಯಲವಕಾಶವಿಲ್ಲ. ಅದೇನೇ ಇರಲಿ, ಥಿಯೊಸೊಫಿ ಆರ್ಯರ ಧರ್ಮಗ್ರಂಥಗಳನ್ನು ಪ್ರಚುರಪಡಿಸಿ ಜನರಿಗೆ ಅವುಗಳಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿತು. ಮುಟ್ಟುವರು ಮುಟ್ಟದವರೆಂಬ ಭೇದವಿಲ್ಲದೆ ಎಲ್ಲರಿಗೂ ಶಾಲೆಗಳನ್ನು ತೆರೆದು ಶಿಕ್ಷಣ ಪ್ರಚಾರಮಾಡಿತು. ಎಲ್ಲಕ್ಕೂ ವಿಶೇಷವಾಗಿ ಇತರ ಸಮಾಜಗಳಂತಲ್ಲದೆ ರಾಷ್ಟ್ರೀಯ ಮತ್ತು ರಾಜಕೀಯ ಚಲನೆಗಳಲ್ಲಿ ಭಾಗತೆಗೆದು ಕೊಂಡು ಬಹಳ ಉಪಕಾರಮಾಡಿತು.

ಪಾಶ್ಚಾತ್ಯ ವಿದ್ಯೆ ಸಂಸ್ಕೃತಿಗಳು ಭರತಖಂಡಕ್ಕೆ ತಂದ ಕಾರ್ಯೋ ತ್ಸಾಹ ಚೈತನ್ಯಗಳು ಬರಿಯ ಧರ್ಮಜೀವನದಲ್ಲಿಯೇ ಪರ್ಯವಸಾನವಾಗಲಿಲ್ಲ. ಕರ್ಮಜೀವನದಲ್ಲಿಯೂ ಅವುಗಳ ಪ್ರಭೆ ಪ್ರಚಂಡವಾಗಿ ಮಿಂಚತೊಡಗಿತು. ಭಾರತವರ್ಷವನ್ನೆಲ್ಲಾ ಏಕಚಕ್ರಾಧಿಪತ್ಯವನ್ನಾಗಿ ಮಾಡಿದ ಆಂಗ್ಲೇಯರು ಭಾರ ತೀಯರಲ್ಲಿ ಏಕರಾಷ್ಟ್ರಭಾವನೆಯನ್ನು ಉದ್ರೇಕಿಸಿದರು. ತಮ್ಮ ದೇಶದ ಚರಿತ್ರೆ ಯನ್ನೂ ರಾಜಕೀಯ ವಿಚಾರಗಳನ್ನೂ ನಮ್ಮವರಿಗೆ ಬೋಧಿಸಿದರು. ಅವರಲ್ಲಿದ್ದ ಸ್ವಾತಂತ್ರ್ಯಾಭಿಲಾಷೆ ಭಾರತೀಯರಲ್ಲಿಯೂ ಪ್ರಜ್ವಲಿಸಿತು. ಪ್ರತಿಫಲವಾಗಿ ಕ್ರಿ. ಶ. ೧೮೮೫ ನೆಯ ಡಿಸೆಂಬರ್ ೨೮ ನೆಯ ತಾರೀಖಿನ ಮಧ್ಯಾಹ್ನದಲ್ಲಿ

ಬೊಂಬಾಯಿ ನಗರದಲ್ಲಿ ರಾಷ್ಟ್ರೀಯ ಮಹಾಸಭೆಯ ಮೊದಲನೆಯ ಅಧಿವೇಶನವು ಉಮೇಶಚಂದ್ರ ಬಾನರ್ಜಿಯವರ ಅಧ್ಯಕ್ಷತೆಯಲ್ಲಿ ನೆರೆಯಿತು.

• ಹೀಗೆ ದೇಶದಲ್ಲಿ ಸಮಾಜಗಳೂ ಸಂಸ್ಥೆಗಳೂ ಆಂದೋಲನಗಳೂ ಭಿನ್ನಾಭಿಪ್ರಾಯಗಳೂ ತುಮುಲವಾಗುತ್ತಿದ್ದುವು. ಭರತಖಂಡವು ಕುಲುಮೆಯ ಮೇಲಿನ ಮೂಷೆಯಂತಿತ್ತು. ಬ್ರಾಹ್ಮಸಮಾಜದವರು ಮೂರ್ತಿಪೂಜೆ, ದೇವದೇವತೆಯರ ಆರಾಧನೆ, ಅವತಾರವಾದ, ಜನ್ಮಾಂತರ ಮೊದಲಾದುವುಗಳನ್ನು ಖಂಡಿಸಿ ಜನರನ್ನು ದಂಡಿಸಿದ್ದರು. ಆರ್ಯಸಮಾಜವು ವೇದವನ್ನು ಮೇಲೆತ್ತಿ, ವೇದಾಂತವನ್ನು ಹಳಿದು, ಕ್ರೈಸ್ತಾದಿ ಮತಗಳನ್ನು ದೂಷಿಸಿ, ಮೂರ್ತಿಪೂಜೆಯನ್ನು ಧಿಕ್ಕರಿಸಿ, ವರ್ಣಭೇದವನ್ನು ಮೇಲ್ವಾಯ್ದು ವಿರೋಧಿಸಿ ಸಂಪ್ರದಾಯವನ್ನು ನೋಯಿಸಿತ್ತು. ಕ್ರೈಸ್ತಪಾದ್ರಿಗಳು ಹಿಂದೂಮತ ಖಂಡನೆಯಿಂದ ಜನರ ಜುಗುಪ್ಸೆಗೆ ಪಕ್ಕಾಗುತ್ತಿದ್ದರು. ಥಿಯಾಸೊಫಿ ವರ್ಣಮಿಶ್ರಣ ಮಾಡುತ್ತಿದೆ ಎಂಬ ನಿಂದೆಗೆ ಗುರಿಯಾಗಿತ್ತು. ಈ ಸಂಸ್ಥೆಗಳಲ್ಲದೆ ನೂರಾರು ದೊಡ್ಡ ಸಣ್ಣ ಸುಧಾರಕರು ಸ್ವಯಂ ಆಚಾರ್ಯರಾಗಿ ತಮಗೆ ಸೂಕ್ತತೋರಿದಂತೆ ಸಮಾಜದ ರೀತಿನೀತಿ ಧರ್ಮಗಳನ್ನು ವಿರೋಧಿಸಿ ಆರ್ಯಧರ್ಮವೆಂಬ ಅತಿ ಪುರಾತನ ಮಹಾವಟವೃಕ್ಷವನ್ನು ಬೇರು ಸಹಿತವಾಗಿ ಕಿತ್ತು ಹಿಂದುಮುಂದಾಗಿ ನೆಡಲು ಹವಣಿಸುತ್ತಿದ್ದರು. ಎಲ್ಲರೂ ಖಂಡನೆಯ ಖಡ್ಗವನ್ನು ಜಳಿಸಿ ರೋಗಕ್ಕೆ ಶಸ್ತ್ರಚಿಕಿತ್ಸೆ ಮಾಡುವ ಸಾಹಸದಲ್ಲಿದ್ದರೇ ಹೊರತು, ರೋಗವನ್ನು ಪರೀಕ್ಷಿಸಿ ರೋಗಿ ಕಠಿನ ಶಸ್ತ್ರಚಿಕಿತ್ಸೆಯನ್ನು ಹೊಂದಿ ಪಾರಾಗಲು ಶಕ್ತನಾಗಿದ್ದಾನೆಯೋ ಎಂಬುದನ್ನು ಒಬ್ಬರಾದರೂ ಯೋಚಿಸಲಿಲ್ಲ; ವಿಚಾರಿಸಲೂ ಇಲ್ಲ. ಪ್ರತಿಭಟನೆ ಎದುರಾಳಿಯನ್ನು ರೇಗಿಸಿ ಪ್ರತಿಭಟನೆಯನ್ನೇ ತರುತ್ತದೆ; ಸಹಾನುಭೂತಿಯಾದರೋ ಎದುರಾಳಿಯನ್ನು ಸಂಮೋಹಿಸಿ ಕೈವಶಮಾಡಿಕೊಳ್ಳುತ್ತದೆ. ಅದಕ್ಕನುಗುಣವಾಗಿ ಹಿರಿಯ ಸಂಪ್ರದಾಯದಲ್ಲಿ ಬೆಳೆದ ಆರ್ಯರು ಸುಧಾರಕರ ಖಂಡನೆಗೆ ಪ್ರತಿಖಂಡನೆಗಳನ್ನು ತಂದೊಡ್ಡತೊಡಗಿದರು. ಆತ್ಮರಕ್ಷಣೆಯ ಸಲುವಾಗಿ ಅವರೂ ಸಮಾಜಗಳನ್ನೂ ಸಂಸ್ಥೆಗಳನ್ನೂ ಸಭೆಗಳನ್ನೂ ನಿರ್ಮಿಸಿ ಯುದ್ಧಕ್ಕೆ ಸಿದ್ಧರಾದರು. ಇಂತಹ ವಿಷಮ ಸಮಯದಲ್ಲಿ ಇತಿಹಾಸವು ಸಮನ್ವಯಾಚಾರ್ಯನೊಬ್ಬನನ್ನು ನಿರೀಕ್ಷಿಸುತ್ತದೆ. ಆ ಇತಿಹಾಸದ ಪ್ರಾರ್ಥನೆ ವ್ಯರ್ಥವಾಗಲಿಲ್ಲ.

ವಿಶ್ವಗರ್ಭದ ನಿಗೂಢ ಅಂತರಾಳದಲ್ಲಿ ಸರ್ವದಾ ಸುಪ್ತವಾಗಿದ್ದರೂ ಚಿರಜಾಗ್ರತವಾಗಿರುವ ತ್ರೈಲೋಕ್ಯಕಂಪನಕಾರಿಯಾದ ಮಹಾಚೈತನ್ಯಶಕ್ತಿ ಭಾರತವರ್ಷದಲ್ಲಿ ಗಂಗಾ ಪುಣ್ಯಜಲಪ್ಲಾವಿತ ವಂಗದೇಶದಲ್ಲಿ ದ್ವಿರೂಪ ಧಾರಣೆಮಾಡಿ ಅವತರಿಸಿತು. ಆ ಮಹಾಚೈತನ್ಯಶಕ್ತಿಯ ಮೂಲಮೂರ್ತಿಯೇ ಶ್ರೀರಾಮಕೃಷ್ಣ ಪರಮಹಂಸರು ; ಉತ್ಸವಮೂರ್ತಿಯೇ ಸ್ವಾಮಿ ವಿವೇಕಾನಂದರು.

# ೧. ಉದಯ

ಹುಲುಸಾಗಿ ಬೆಳೆದ ಬಿತ್ತರದ ಗದ್ದೆಬಯಲುಗಳ ಹಸುರು ಹಬ್ಬುಗೆ, ತಾಲ ಖರ್ಜೂರ ಮಾವಿನ ತೋಪುಗಳ ಚೆಲುವಾದ ಬನಸಿರಿ, ಕಣ್ಣಿಗೆ ತಣ್ಣಗಿರುವ ತಿಳಿನೀರಿನ ಕೆರೆಕೊಳಗಳ ಸೊಬಗು ಇವುಗಳಿಂದ ಶೋಭಿಸುವ ಕಾಮಾರಪುಕುರವು ಬಂಗಾಲ ಪ್ರಾಂತದ ಹೂಗ್ಲಿ ಜಿಲ್ಲೆಯಲ್ಲಿ ಸಣ್ಣದೊಂದು ಮುದ್ದು ಹಳ್ಳಿ. ಜನ್ಮತಃ ಸರಳಮನಸ್ಕನೂ ಸಜ್ಜನನೂ ಈಶ್ವರಭಕ್ತನೂ ಸತ್ಯನಿಷ್ಠನೂ ಆದ ಖುದಿರಾಮ ಚಟ್ಟೋಪಾಧ್ಯಾಯನು ಸುಳ್ಳುಸಾಕ್ಷಿ ಹೇಳಲಾರದೆ ಶ್ರೀಮಂತನೊಬ್ಬನ ಮುನಿಸಿಗೆ ಒಳಗಾಗಿ ದೇರೆ ಎಂಬ ಗ್ರಾಮದಲ್ಲಿದ್ದ ತನ್ನ ಪೂರ್ವಿಕರ ಭೂಮಿಕಾಣಿಗಳನ್ನು ಕಳೆದುಕೊಂಡು ಮಿತ್ರನೊಬ್ಬನ ಸೌಜನ್ಯದಿಂದ ಕಾಮಾರಪುಕುರಕ್ಕೆ ಬಂದು ತನ್ನ ಬಡಸಂಸಾರವನ್ನು ಹೂಡಿದ್ದನು. ಸಾಂಪ್ರದಾಯಿಕ ಬ್ರಾಹ್ಮಣನಾದ ಆತನು ಶೂದ್ರರಿಂದ ದಾನ ತೆಗೆದುಕೊಳ್ಳದೆ, ಶೂದ್ರರ ಮನೆಯಲ್ಲಿ ಪೂಜೆ ಪೌರೋಹಿತ್ಯಗಳನ್ನು ಮಾಡಿಸುತ್ತಿದ್ದ ಬ್ರಾಹ್ಮಣರ ಮನೆಗಳಿಗೆ ಊಟಕ್ಕೆ ಹೋಗದೆ, ತನ್ನ ಮನೆದೇವರಾದ ಶ್ರೀರಾಮಚಂದ್ರನನ್ನು ಭಕ್ತಿನಿಷ್ಠೆಗಳಿಂದ ಶಾಸ್ತ್ರೋಕ್ತವಾಗಿ ಆರಾಧಿಸುತ್ತ ಹಳ್ಳಿಗರ ಪ್ರೀತಿಭಕ್ತಿಗೌರವಗಳಿಗೆ ಪಾತ್ರನಾಗಿದ್ದನು. ಆತನ ಧರ್ಮಪತ್ನಿಯಾದ ಶ್ರೀಮತಿ ಚಂದ್ರಮಣಿದೇವಿಯೂ ತನ್ನ ಪತಿಯಂತೆಯೇ ಪವಿತ್ರ ಚರಿತ್ರೆಯಾಗಿದ್ದಳು. ದರಿದ್ರರಿಗೂ ದೀನರಿಗೂ ಅನಾಥರಿಗೂ ಸಾಧುಸನ್ಯಾಸಿಗಳಿಗೂ ಆಕೆ ತಾಯಿಯಾಗಿದ್ದಳು. ಇಂತಿದ್ದ ಗಂಡಹೆಂಡಿರ ಬಡಮನೆ ಸಣ್ಣ ಗುಡಿಯೊಂದರಂತೆ ಶಾಂತಿಮಯವಾಗಿತ್ತು. ನೆಮ್ಮದಿ ಎಂಬುದು ಬಹಿರ್ಭೂತ ವಸ್ತುವಲ್ಲ, ಅಂತರ್ನಿಹಿತ ಸಂಪತ್ತು.

ಖುದಿರಾಮನಿಗೆ ರಾಮಕುಮಾರ, ರಾಮೇಶ್ವರ ಎಂಬಿಬ್ಬರು ಗಂಡು ಮಕ್ಕಳೂ ಕಾತ್ಯಾಯಿನಿ ಎಂಬೊಬ್ಬ ಹೆಣ್ಣುಮಗಳೂ ಇದ್ದರು. ಅವರಲ್ಲಿ ಹಿರಿಯವನಾದ ರಾಮಕುಮಾರನು ಮೇಧಾವಿಯಾಗಿದ್ದುದರಿಂದ ಸಾಹಿತ್ಯ, ವ್ಯಾಕರಣ, ಸ್ಮೃತಿ, ಶಾಸ್ತ್ರಗಳನ್ನು ಅಧ್ಯಯನಮಾಡಿ, ಸಂಸ್ಕೃತದಲ್ಲಿ ಒಳ್ಳೆಯ

ಪಾಂಡಿತ್ಯ ಸಂಪಾದನೆಮಾಡಿ ಪ್ರಾಪ್ತವಯಸ್ಕನಾಗಿ ಸಂಸಾರವನ್ನು ಸಾಗಿಸಲು ಸಮರ್ಥನಾದನು. ಮೊದಲಿನಿಂದಲೂ ತೀರ್ಥಯಾತ್ರಾಪ್ರೇಮಿಯಾಗಿದ್ದ ಖುದಿ ರಾಮನು ಮನೆವಾರ್ತೆಯನ್ನು ಮಗನ ಮೇಲೆ ಹೊರಿಸಿ ಈಶ್ವರ ಚಿಂತನೆಯಲ್ಲಿ ಮಗ್ನನಾಗಿ, ನಿಶ್ಚಿಂತನಾಗಿ ಕ್ರಿ. ಶ. ೧೮೩೫ ರಲ್ಲಿ ಗಯಾಕ್ಷೇತ್ರಕ್ಕೆ ಯಾತ್ರೆ ಹೋದನು. ಅಲ್ಲಿ ಅವನಿಗೊಂದು ಅಲೌಕಿಕವಾದ ಅನುಭವವುಂಟಾಯಿತು. ಇರುಳು ಕನಸಿನಲ್ಲಿ ತೇಜೋಮೂರ್ತಿಯೊಂದು ಕಾಣಿಸಿಕೊಂಡು ಖುದಿರಾಮು ನನ್ನು ಸಂಬೋಧಿಸಿ "ಮರಳಿ ನಾನು ಲೋಕಕಲ್ಯಾಣಾರ್ಥವಾಗಿ ನಿನ್ನ ಮನೆಯಲ್ಲಿ ಅವತಾರಮಾಡುವೆನು" ಎಂದಂತಾಯಿತು. ಭಕ್ತನು ಮನದಲ್ಲಿಯೇ ಹಿಗ್ಗಿ ಕನಸು ನಿಜವಾಗುವವರೆಗೂ ಯಾರೊಡನೆಯೂ ಅದನ್ನು ಹೇಳಬಾರದೆಂದು ನಿಶ್ಚಯಿಸಿ ಊರಿಗೆ ಹಿಂದಿರುಗಿದನು.

ಅದೇ ಕಾಲದಲ್ಲಿ ಚಂದ್ರಮಣಿದೇವಿಯೂ ಒಂದು ವಿಚಿತ್ರ ಸ್ವಪ್ನವನ್ನು ಕಂಡಳು. ಆ ಸ್ವಪ್ನದಲ್ಲಿ ಸಹಸ್ರ ಸೂರ್ಯಪ್ರಭೆಯ ಜ್ಯೋತಿಃಪುಂಜವೊಂದು ತನ್ನನ್ನು ಆಲಿಂಗಿಸಿದಂತೆ ಭಾಸವಾಯಿತು. ಅಂತೆಯೇ ಮತ್ತೊಂದು ದಿನ ಶಿವಮಂದಿರದಲ್ಲಿ ಕಾಂತಿಮಂಡಲವೊಂದು ಪೂಜಾವಿಗ್ರಹದಿಂದ ಮಿಂಚಿ ಬಂದು ತನ್ನ ಶರೀರದಲ್ಲಿ ಐಕ್ಯವಾದಂತಾಯಿತು. ಪತಿ ಮನೆಗೆ ಬಂದ ಮೇಲೆ ಆತನೊಡನೆ ನಡೆದ ಸಂಗತಿಗಳೆಲ್ಲವನ್ನೂ ಹೇಳಿದಳು. ಖುದಿರಾಮನು ಅದೆಲ್ಲವೂ ಈಶ್ವರ ಕೃಪೆಯ ಚಿಹ್ನೆ ಎಂದು ಹೇಳಿ ಸತಿಯನ್ನು ಸಂತೈಸಿ ಸುಮ್ಮನಿರುವಂತೆ ಹೇಳಿದನು. ಕೆಲವು ದಿನಗಳಲ್ಲಿ ಚಂದ್ರಾದೇವಿ ಪೂರ್ಣಗರ್ಭಿಣಿಯಾದಳು.

ಮಹಾಪುರುಷರ ಅವತರಣ ಸಮಯದಲ್ಲಿ ಅವರ ತಂದೆತಾಯಿಗಳಿಗೆ ಅಪೂರ್ವ ಅನುಭವಗಳಾಗುವುದು ಆಶ್ಚರ್ಯಕರವಾದರೂ ಅಸಂಭವವಾದುದಲ್ಲ. ಮಹಾಕಾರ್ಯಕ್ಕೆ ಮಹಾಕಾರಣಗಳಿರಬೇಕು. ಮಹಾಪುರುಷರು ಸೃಷ್ಟಿಶಕ್ತಿಯ ಮಹಾಕಾರ್ಯಗಳು. ಅವರ ಜೀವನದಲ್ಲಿ ಜನಸಾಮಾನ್ಯರಿಗೆ ಅಸಾಧ್ಯವೆಂದು ತೋರುವ ಎಷ್ಟೋ ಘಟನೆಗಳೊದಗುವುವು. ಹೀಗಿರಲು ಅವರ ಜನನದಲ್ಲಿಯೂ ಅಂತಹ ಅಸಾಧಾರಣ ಘಟನೆಗಳಾಗುವುದು ಅಷ್ಟೇನೂ ಅಸಂಭವವಾದು ದಲ್ಲ. ಸಾಧಾರಣ ಮಾನವರಲ್ಲಿರುವ ಅಲೌಕಿಕತಾಪ್ರೇಮವೂ ಕಲ್ಪನಾಶಕ್ತಿಯೂ ಮಹಾಪುರುಷರ ಜನ್ಮಕಥೆಗಳನ್ನು ಬಣ್ಣದ ಬಲೆಗಳಿಂದ ನೆಯ್ದಿದ್ದರೂ ಇರ



ಕಾಮಾರಪುಕುರ (ಪರಮಹಂಸರ ಜನ್ಮಸ್ಥಳ)

ಬಹುದು. ಆದರೂ ಅವುಗಳನ್ನು ಸಂಪೂರ್ಣವಾಗಿ ಸುಳ್ಳೆಂದು ಅಲ್ಲಗಳೆಯುವುದು ಅಷ್ಟೇನೂ ವೈಜ್ಞಾನಿಕವಾದುದಲ್ಲ. ಅಂತಹ ವಿಷಯಗಳಲ್ಲಿ ಸಂದೇಹವು ನಿರ್ಣಯಕ್ಕಿಂತ ಹೆಚ್ಚು ಶ್ರೇಯಸ್ಕರವಾದುದು. ಎಲ್ಲ ಸೃಷ್ಟಿನಿಯಮಗಳೂ ನಮಗಿನ್ನೂ ವೇದ್ಯವಾಗಿಲ್ಲ. ತಿಳಿದ ಕೆಲವು ನಿಯಮಗಳಿಗೆ ವಿರೋಧವೆಂದು ತೋರಿಬರುವ ಘಟನೆಗಳು ಬಹುಶಃ ಮುಂದೆ ತಿಳಿಯಲಿರುವ ನಿಯಮಗಳಿಂದ ವಿಶದವಾಗಬಹುದು. ಅದೇನೇ ಇರಲಿ, ಇತಿಹಾಸವು ಅವತಾರಪುರುಷರ ಆವಿರ್ಭಾವವನ್ನು ಅಲೌಕಿಕತೆಯಿಂದ ಆವರಿಸಿಬಿಟ್ಟಿದೆ. ವಿವರಣೆಯ ಭಾರವು ಮನಃಶಾಸ್ತ್ರದ್ದು. ನೂತನ ಜ್ಞಾನವು ತನಗೆ ಅವೇದ್ಯವಾದುದರಿಂದ ಅಸತ್ಯವೆಂದು ಶಿಶು ಹಳಿದರೆ ಅವಿವೇಕವಾಗುವುದು.

ಮುಂದೆ ಯಾರ ಮಹಾಸಮನ್ವಯಸಂದೇಶದಿಂದ ಜಗತ್ತು ಜಾಗೃತವಾಗಲಿದ್ದಿತೋ ಯಾರು ಶ್ರೀರಾಮಕೃಷ್ಣ ಪರಮಹಂಸದೇವ ಎಂಬ ಹೆಸರಿನಿಂದ ಲೋಕಪೂಜ್ಯನಾದನೋ ಆ ಯುಗಾವತಾರನು ಕ್ರಿ. ಶ. ೧೮೩೬ ನೆಯ ಫೆಬ್ರವರಿ ೧೮ ನೆಯ ತೇದಿಯ ದಿನ ಫಾಲ್ಗುಣ ಮಾಸದ ಸುಪ್ರಭಾತವು ಪೂರ್ವ ದಿಗಂತದಲ್ಲಿ ಮೊಳೆದೋರುತ್ತಿರಲು ಕಾಮಾರಪುಕುರದ ಹುಲ್ಲುಜೋಪಡಿಯ ಬಡ ಹೆರಿಗೆಯ ಮನೆಯಲ್ಲಿ ಜನ್ಮವೆತ್ತಿದನು. ಶುಭ ಶಂಖಧ್ವನಿ ಶಿಶುವಿನ ಆಗಮನವನ್ನು ಜಗತ್ತಿಗೆ ಸಾರಲೆಂಬಂತೆ ಪ್ರಾತಃಸಮಯದ ಪವಿತ್ರ ಮೌನವನ್ನು ಮಥಿಸಿ ದಿಗ್ದಿಗಂತಗಳಲ್ಲಿ ಅನುರಣಿತವಾಯಿತು. ಎಚ್ಚತ್ತ ವಿಹಂಗಮಗಳು ಸಾಮಗಾನವನ್ನು ತಾನತಾನವಾಗಿ ಹಾಡಿದುವು. ಸೃಷ್ಟಿಯ ಮಹಾಶರೀರವು ನವಚೇತನ ಸಂಚಾರದಿಂದ ವಿಕಂಪಿಸಿತು. ನೆರೆಹೊರೆಯ ಹೆಂಗಸರೆಲ್ಲರೂ ಒಂದು ಶಿಶು ಶಿರೋಮಣಿಯ ಶುಭಗಾತ್ರವನ್ನು ನೋಡಿ ಕೊಂಡಾಡಿದರು. ಅವರಲ್ಲಿ ಒಬ್ಬಳಾದ ಧನಿಯೆಂಬವಳು ಶಿಶುಮಾತೆಯರಿಗೆ ಸಡಗರದಿಂದ ಶುಶ್ರೂಷೆಮಾಡಿದಳು. ತರುವಾಯ ಜೋಯಿಸರು ಒಂದು ಜನ್ಮಕುಂಡಲಿಯನ್ನು ಬರೆದು "ಇಂಥವನು ಧರ್ಮವೇತ್ತನೂ ಮಹನೀಯನೂ ಆಗುವನು. ಯಾವಾಗಲೂ ಪುಣ್ಯಕರ್ಮಾನುಷ್ಠಾನದಲ್ಲಿ ನಿರತನಾಗಿರುವನು. ಬಹು ಶಿಷ್ಯ ಪರಿವೃತನಾಗಿ ದೇವಮಂದಿರದಲ್ಲಿ ವಾಸ ಮಾಡುವನು. ನಾರಾಯಣಾಂಶಸಂಭೂತನಾದ ಮಹಾಪುರುಷನೆಂದು ಜಗತ್ತಿನಲ್ಲಿ ಪ್ರಸಿದ್ಧಿ ಪಡೆದು ಸರ್ವತ್ರ ಸರ್ವಜನರಿಂದಲೂ ಪೂಜಿತನಾಗುವನು." ಎಂದು

ಭವಿಷ್ಯ ಹೇಳಿದರು. ಖುದಿರಾಮನಿಗೆ ತನ್ನ ಕನಸು ನಿಜವಾಗುವಂತೆ ತೋರಿತು. ಅನಂತರ ಜಾತಕರ್ಮವನ್ನು ನೆರವೇರಿಸಿ ಶಿಶುವಿಗೆ ಗದಾಧರನೆಂದು ನಾಮಕರಣ ಮಾಡಿದರು.

ಗದಾಧರನು ಮನೆಯವರ ಮುದ್ದಾಗಿ, ನೆರೆಯವರ ಕಣ್ಣಾಗಿ, ಮಗುಗಳ ಮಾಣಿಕವಾಗಿ, ಚೆಲುವು ನಲುಮೆಗಳ ಚೈತ್ರದ ಚೆಲುಮೆಯಾಗಿ ಬೆಳೆದನು. ಶಿಶುವಿನಲ್ಲಿದ್ದ ಅಪ್ರಾಕೃತ ಅಸಾಧಾರಣತೆ ಹಳ್ಳಿಗರ ಸರಳ ದೃಷ್ಟಿಗೆ ಸ್ವಲ್ಪ ಸ್ವಲ್ಪವಾಗಿಯಾದರೂ ಗೋಚರವಾಗದಿರಲಿಲ್ಲ. ತಾಯಿಯಾದ ಚಂದ್ರಾದೇವಿ ಯಂತೂ ಕೆಲವು ಸಾರಿ ಭಯವಿಸ್ಮಯಗಳಿಂದ ತಲ್ಲಣಿಸುತ್ತಿದ್ದಳು. ಒಮ್ಮೆ ಪುಟ್ಟ ಶಿಶುವು ಬಹು ಭಾರವಾಗಿರಲು ಆಕೆ ಎತ್ತಿಕೊಳ್ಳಲಾರದೆ ಹೋಗಿ ಗಂಡನನ್ನು ಕರೆದಳು. ಆದರೆ ಒಂದು ನೋಡುವಲ್ಲಿ ಅದು ಹೂವಿನಂತೆ ಹಗುರವಾಗಿತ್ತು. ಇನ್ನೊಂದು ಸಾರಿ ಗದಾಧರನು ಎಂಟು ತಿಂಗಳ ಕೂಸಾಗಿದ್ದಾಗ ತಾಯಿ ಆತನನ್ನು ಸೊಳ್ಳೆಪರದೆಯೊಳಗೆ ಮಲಗಿಸಿ ತನ್ನ ಕೆಲಸದ ಮೇಲೆ ಹೋದಳು. ಬಂದು ನೋಡಿದರೆ, ಹಾಸಿಗೆಯ ಮೇಲೆ ಕಂದನಿಗೆ ಬದಲಾಗಿ ತೇಜಸ್ವಿಯಾದ ದೊಡ್ಡ ಮನುಷ್ಯನೊಬ್ಬನಿದ್ದುದನ್ನು ಕಂಡು ಕಿಟ್ಟನೆ ಕಿರಿಚಿಕೊಂಡಳು. ಕೂಗನ್ನು ಕೇಳಿ ಖುದಿರಾಮನು ಓಡಿಬಂದನು. ಮಗುವು ಮೊದಲಿನಂತೆಯೇ ಮುದ್ದಾಗಿ ಮಲಗಿತ್ತು. ಇದನ್ನೆಲ್ಲ ಕಂಡು ಚಂದ್ರಮಣಿದೇವಿಯ ಮಾತೃಹೃದಯವು ಕಂದನ ಕ್ಷೇಮಕ್ಕಾಗಿ ಕಾತರವಾಯಿತು. ಯಾವುದೋ ದುಷ್ಟಪಿಶಾಚಿಯ ಚೇಷ್ಟೆಯಾ ಗಿರಬೇಕೆಂದು ಗಂಡನೊಡನೆ ಹೇಳಿದಳು. ಖುದಿರಾಮನು ಶಿಶು ಗರ್ಭದಲ್ಲಿ ದ್ದಾಗಲೇ ತನಗೂ ಆಕೆಗೂ ಆದ ದಿವ್ಯಾನುಭವಗಳನ್ನು ನೆನಪಿಗೆ ತಂದುಕೊಟ್ಟು ದೇವಾಂಶ ಶಿಶುವಿನ ವಿಚಾರದಲ್ಲಿ ಹೀಗೆಲ್ಲ ಆಗುವುದು ಸಹಜವಾದುದರಿಂದ ಭಯಕ್ಕೇನೂ ಕಾರಣವಿಲ್ಲ ಎಂದು ಸತಿಯನ್ನು ಸಂತೈಸಿದನು.

ಐದು ವರ್ಷಗಳುರುಳಿಹೋದುವು. ಜನರು ಗದಾಧರನ ಜಾಣ್ಮೆಗೆ ಬೆರಗಾ ದರು. ಮುದ್ದಿನಿಂದ ನೆರೆಹೊರೆಯವರು ಹೇಳಿಕೊಡುತ್ತಿದ್ದ ಪುರಾಣ ಕಥೆಗಳನ್ನೂ ಸ್ತೋತ್ರಪಾಠಗಳನ್ನೂ ಆತನು ಬಹು ಬೇಗ ಕಲಿತುಕೊಂಡನು. ಅಲ್ಲದೆ ತನ್ನ ಓರಗೆ ಯವರಿಗೆ ಅವುಗಳನ್ನೆಲ್ಲಾ ನೀರುಕುಡಿದಂತೆ ಹೇಳಿಕೊಡುತ್ತಿದ್ದನು. ಲೋಕಪದ್ಧತಿ ಯಂತೆ ಗದಾಧರನನ್ನು ಪಾಠಶಾಲೆಗೆ ಹಾಕಿದರು. ಓದುಬರಹಗಳು ಬೇಗನೆ

ಒಂದುವು; ಗಣಿತವು ಬರಲಿಲ್ಲ. ಉಪಾಧ್ಯಾಯರಿಗೆ ಹುಡುಗನು ಅಚ್ಚುಮೆಚ್ಚಾ ದಂತೆಯೇ ಇತರ ಬಾಲಕರಿಗೆ ಮುಖಂಡನಾದನು. ಅವರಿಗೆಲ್ಲಾ ಸೆರೆಯಂತಿದ್ದ ಶಾಲೆಯ ಜೀವನವು ಗದಾಧರನ ಪ್ರಭಾವದಿಂದ ಹೆಚ್ಚು ರುಚಿಕರವಾಯಿತು. ಏಕೆಂದರೆ, ಅಭಿನಯಕಲೆಯಲ್ಲಿಯೂ ಶಿಲ್ಪಕಲೆಯಲ್ಲಿಯೂ ಸ್ವಲ್ಪ ಪರಿಶ್ರಮವಿದ್ದ ಗದಾಧರನು ಮಾವಿನ ತೋಪಿನಲ್ಲಿ ಬಯಲಾಟಗಳನ್ನಾಡುವುದು, ದೇವದೇವಿಯರ ಮಣ್ಣುಗೊಂಬೆಗಳನ್ನು ಮಾಡುವುದು ಇವೇ ಮೊದಲಾದ ಶಿಶುಲೀಲೆಗಳಿಂದ ಮಿತ್ರರಿಗೆಲ್ಲ ಉತ್ಸಾಹದಾಯಕನಾದನು. ಆತನ ಎದೆಗೆಚ್ಚಂತೂ ಹುಡುಗರಿಗೆ ಆಶ್ಚರ್ಯಕರವಾಗಿತ್ತು. ಹಿರಿಯರು ಯಾವ ಯಾವ ಸ್ಥಳಗಳಲ್ಲಿ ದುರುಳ ಪಿಶಾಚಿಗಳಿವೆಯೆಂದು ಹೇಳುತ್ತಿದ್ದರೋ ಅಲ್ಲಿಗೆಲ್ಲ ಗದಾಧರನು ತಾನೊಬ್ಬನೇ ನಿರ್ಭೀತಿಯಿಂದ ಹೋಗಿ ಅವುಗಳನ್ನು ಕಾಣದೆ ಹತಾಶನಾಗಿ ಹಿಂದಿರುಗುತ್ತಿದ್ದನು.

ವಯಸ್ಸಾದಂತೆಲ್ಲಾ ಶಿಶುವಿನ ಶೀಲವು ಪರಿವರ್ತನೆ ಹೊಂದಿತು. ಸೃಜನಪ್ರಿಯತೆಯೂ ಧ್ಯಾನಾಸಕ್ತಿಯೂ ಸೃಷ್ಟಿಸೌಂದರ್ಯದಲ್ಲಿ ಪ್ರೇಮವೂ ಅತಿಶಯವಾದುವು. ಬಾಲಕನಲ್ಲಿ ಮಲಗಿದ್ದ ಮಹಾ ಕಲೌಪಾಸಕನು ಮೆಲ್ಲಮೆಲ್ಲಗೆ ಕಣ್ದೆರೆದನು. ತಂಗಾಳಿಗೆ ತೆರೆತೆರೆಯಾಗಿ ತಲೆದೂಗುವ ಬಾನ ಕರೆಯವರೆಗೂ ಹಬ್ಬಿದ ಹಸುರುಗದ್ದೆಗಳು, ಹೊಳೆತೊರೆಗಳ ಕಲನಾದಮಯವಾದ ಅವಿರಳ ಅನಂತ ಸಲಿಲಯಾತ್ರೆ, ಸಹಸ್ರ ಪಕ್ಷಿಕೂಜನದ ರಹಸ್ಯಮಯ ಸುಮಧುರ ಗಂಧರ್ವಗಾನ, ಜಗನ್ಮಾತೆಯ ಮಹಾನೀಲನಯನದಂತೆ ಮೇರೆಯಿಲ್ಲದೆ ಹಸರಿಸಿರುವ ಸುನೀಲ ಅಂತರಿಕ್ಷ, ಕ್ಷಣಕ್ಷಣಕ್ಕೂ ವಿವಿಧ ವೇಷಧಾರಿಗಳಾಗಿ ವಿಧವಿಧ ವರ್ಣಶೋಭಿಗಳಾಗಿ ಸುತ್ತುವ ಮುತ್ತುವ ಚಲಿಸುವ ನಲಿಯುವ ಮುಗಿಲುಗಳ ಮೋಹನದ ಮಾಯಾರಾಜ್ಯ, ನಿಶಾಗಗನದಲ್ಲಿ ನಿರಂತರವೂ ಕಣ್ಣುಮಿಟುಕಿಸುವ ಅಗಣಿತ ತಾರೆಗಳ ನಿಗೂಢಾಸ್ಪಷ್ಟ ಆಹ್ವಾನ, ಬೇಸಗೆಯ ಮಧ್ಯಾಹ್ನದ ಲಕ್ಷಲಕ್ಷ ಸ್ವಪ್ನಗರ್ಭಿತ ಸುಷುಪ್ತಿ, ದಿವಾನಿಶೆಗಳ ಆಲಿಂಗನ ಸಮಯದ ಮೌನಪೂರ್ಣ ವಾಙ್ಮಯ ಸಮಾಧಿ ಮೊದಲಾದ ಪ್ರಕೃತಿ ಸೌಂದರ್ಯದ ಕವನಚಿತ್ರಗಳು—ಇವೆಲ್ಲವೂ ಬಾಲಕನನ್ನು ಭಾವರಾಜ್ಯದ ಅನಿರ್ವಚನೀಯ ಅನುಭವ ಸಮುದ್ರದಲ್ಲಿ ಮುಳುಗಿಸಿಬಿಡುತ್ತಿದ್ದುವು. ಕಲೆ ಸನ್ನಿಯ ನೆಲೆಗೆ ಹೆಬ್ಬಾಗಿಲು.

ಒಂದು ದಿನ ಆಷಾಢ ಮಾಸದಲ್ಲಿ ಆರು ವರ್ಷ ವಯಸ್ಸಿನ ಗದಾಧರನು

ಹುರಿಗಡಲೆ ಮೆಲ್ಲುತ್ತಾ ಹುಲುಸಾಗಿ ಬೆಳೆದು ಹಬ್ಬಿದ ಗದ್ದೆಗಳ ನಡುವೆ ಕಾಲು ದಾರಿಯಲ್ಲಿ ಹೋಗುತ್ತಿರಲು ಒಂದು ಅಲೌಕಿಕ ಅನುಭವವಾಯಿತು. ಅದನ್ನು ಕುರಿತು ಶ್ರೀರಾಮಕೃಷ್ಣರು ಹೀಗೆಂದು ಹೇಳಿದ್ದಾರೆ—

"ಬತ್ತದ ಗದ್ದೆಗಳ ನಡುವೆ ಇದ್ದ ಒಂದು ಕಾಲುದಾರಿಯಲ್ಲಿ ಹೋಗುತ್ತಿದ್ದೆ. ಹುರಿಗಡಲೆ ತಿನ್ನುತ್ತಲೇ ತಲೆಯೆತ್ತಿ ಆಕಾಶದ ಕಡೆ ನೋಡಿದೆ. ದೂರದ ದಿಗಂತದಲ್ಲಿ ಭೀಮಾಕಾರವಾಗಿದ್ದ ಒಂದು ಸಜಲ ಸುನೀಲ ಮೇಘವು ಮೂಡುತ್ತಿದ್ದುದು ನನ್ನ ಕಣ್ಣಿಗೆ ಬಿತ್ತು. ನೋಡುತ್ತ ನೋಡುತ್ತ ಆ ಕರ್ಮುಗಿಲು ಹಬ್ಬಿ ಗಗನ ಮಂಡಲವನ್ನೆಲ್ಲ ಕವಿದುಬಿಟ್ಟಿತು. ಒಡನೆಯೇ ಹಠಾತ್ತಾಗಿ ಪಕ್ಕದ ಗದ್ದೆಯಿಂದ ಬೆಳ್ಳಕ್ಕಿಗಳ ಗುಂಪೊಂದು ಮೇಲೆ ಹಾರಿತು. ಕಪ್ಪುಮೋಡಗಳ ಹಿನ್ನೆಲೆಗೆದುರಾಗಿ ಮಂಜಿನಂತೆ ಬಿಳುಪಾದ ಆ ಬಲಾಕ ಪಂಕ್ತಿ ಋಜುಕುಟಿಲ ನಾನಾ ರೇಖೆಯ ವಿನ್ಯಾಸದಿಂದ ನನ್ನೆದುರು ರಂಜಿಸಿತು. ಆ ಸುಂದರ ವರ್ಣತಾರತಮ್ಯದ ಧೀರ ವೈಖರಿಯನ್ನು ಕಂಡು ಸುದೂರಗಾಮಿಯಾದ ನನ್ನಾತ್ಮವು ಅನಂತತೆಯಲ್ಲಿ ಲೀನವಾಗಲು ಪ್ರಜ್ಞೆತಪ್ಪಿ ಕೆಳಗುರುಳಿ ಬಿದ್ದೆ. ನೆರಗಿನಲ್ಲಿದ್ದ ಹುರಿಗಡಲೆಯೆಲ್ಲ ಚೆಲ್ಲಾಪಿಲ್ಲಿಯಾಯಿತು! ದಾರಿಯಲ್ಲಿ ಹೋಗುತ್ತಿದ್ದ ಯಾರೋ ಪುಣ್ಯಾತ್ಮನೊಬ್ಬನು ನನ್ನನ್ನು ಎತ್ತಿ ತಂದು ಮನೆಯಲ್ಲಿ ಬಿಟ್ಟನು. ಮೈಗೆತಿಳಿದ ಮೇಲೆಯೂ ನನ್ನೆದೆಯಲ್ಲಿ ಯಾವುದೋ ಒಂದು ಅನಿರ್ವಚನೀಯ ಆನಂದ ಸಮುದ್ರವು ತುಳುಕಾಡುತ್ತಿತ್ತು. . . . . . ಅದೇ ನನಗುಂಟಾದ ಮೊದಲನೆಯ ಭಾವ ಸಮಾಧಿ."

ಶ್ರೀರಾಮಕೃಷ್ಣರಿಗೆ ಮೊತ್ತಮೊದಲು ಸತ್ಯಸಾಕ್ಷಾತ್ಕಾರಕ್ಕೆ ಮುನ್ನುಡಿಯಾದುದು ಸೌಂದರ್ಯದ ಸಾನ್ನಿಧ್ಯದಲ್ಲಿ. ಅವ್ಯಕ್ತವೂ ನಿರ್ಗುಣ ನಿರಾಕಾರವೂ ಆಗಿರುವ ಪರತತ್ತ್ವವು ಪ್ರಕಾಶವಾಗಬೇಕಾದರೆ ವ್ಯಕ್ತವೂ ಸಗುಣ ಸಾಕಾರವೂ ಆಗಿರುವ ಸೌಂದರ್ಯವಾಗಬೇಕು. ಏಕವೂ ಅಖಂಡವೂ ಆಗಿರುವ ಬ್ರಹ್ಮವು ಬುದ್ಧಿಯ ದೃಷ್ಟಿಗೆ ಸತ್ಯದಂತೆಯೂ ಭಾವದ ದೃಷ್ಟಿಗೆ ಸೌಂದರ್ಯದಂತೆಯೂ ತೋರುತ್ತದೆ. ಸತ್ಯಸೌಂದರ್ಯಗಳ ಸಂಗಮವೇ ಪರಮ ಸಿದ್ಧಿ. ಆ ಅನುಭವದಲ್ಲಿ ಸತ್ಯವೇ ಸೌಂದರ್ಯ; ಸೌಂದರ್ಯವೇ ಸತ್ಯ.[1] ಕ್ರಿಯಾಶಕ್ತಿ, ಬುದ್ಧಿಶಕ್ತಿ,

---

[1] ಭಕ್ತಿಜ್ಞಾನಗಳೆರಡೂ ಪರಿಣಾಮದಲ್ಲಿ ಎಂದರೆ, ಕೊನೆಗೆ ಒಂದೇ. ಶುದ್ಧಜ್ಞಾನಕ್ಕೂ ಶುದ್ಧಭಕ್ತಿಗೂ ಭೇದವಾವುದೂ ಇಲ್ಲ. —ಉಪದೇಶ ವಾಕ್ಯಾವಳಿ

ಭಾವಶಕ್ತಿಗಳಿಂದ ಕೂಡಿದ ಮನುಷ್ಯನು ಅವುಗಳಲ್ಲಿ ಯಾವುದಾದರೂ ಒಂದ ರಿಂದ ಸಚ್ಚಿದಾನಂದವನ್ನು ಸಂಪೂರ್ಣವಾಗಿ ಅನುಭವಿಸಲಾರನು. ಕ್ರಿಯೆಯಿಂದ ಸದಂಶವನ್ನೂ ಬುದ್ಧಿಯಿಂದ ಚಿದಂಶವನ್ನೂ ಭಾವದಿಂದ ಆನಂದಾಂಶವನ್ನೂ ತಾತ್ಕಾಲಿಕವಾಗಿ ಮತ್ತು ಆಂಶಿಕವಾಗಿ ಗ್ರಹಿಸಬಲ್ಲನು. ಆದರೆ ಪರತತ್ತ್ವವು ಸತ್, ಚಿತ್ ಮತ್ತು ಆನಂದಗಳ ರಾಶಿಯಲ್ಲ. ಅದು ಅಖಂಡವೂ ಅದ್ವೈತವೂ ಆದ ಸಚ್ಚಿದಾನಂದ. ಹೀಗಿರಲು ಅದನ್ನು ಆಂಶಿಕವಾಗಿ ಆಕ್ರಮಿಸುವುದು ಅಸಾಧ್ಯ. ಪೂರ್ಣವು ಪೂರ್ಣದಿಂದಲೇ ಗೃಹೀತ. ಮನುಷ್ಯನ ಆತ್ಮವೂ ಕ್ರಿಯೆ ಬುದ್ಧಿ ಭಾವಗಳ ಬರಿಯ ರಾಶಿಯಲ್ಲ; ಬ್ರಹ್ಮದಂತೆಯೇ ಅಖಂಡವಾದುದು. ಆದ್ದರಿಂದ ಅರಿವು ಇರವಾಗುವುದೇ ಸಾಕ್ಷಾತ್ಕಾರ.[1] ಇದು ಭಾವಮಯವಾದ ಕಲೆಗೆ ಸುಲಭಸಾಧ್ಯ. ಆದ್ದರಿಂದಲೇ ಯುಕ್ತಿ ತುದಿಯಲ್ಲಿ ಭಕ್ತಿಯಾಗುವುದು.[2] ಯುಕ್ತಿಯಾನದಲ್ಲಿ ತೊಳತೊಳಲಿ ಸೋತ ಆತ್ಮವು ಭಕ್ತಿವಿಮಾನವನ್ನೇರುವುದು. ಇಂತಹ ಪರಾಜಯವೇ ಯುಕ್ತಿಗೆ ಪರಮ ಜಯ. ಪರಾಭಕ್ತಿ ಯುಕ್ತಿಗೆ ಅಪಕಾರಿಯಲ್ಲ, ಸಹಕಾರಿ ಮತ್ತು ಉಪಕಾರಿ. ಕಲೆ ಸನ್ನಿಯ ನೆಲೆಗೆ ಹೆದ್ದಾರಿ. ಶ್ರೀರಾಮಕೃಷ್ಣರು ಬ್ರಹ್ಮದ ಭವನಕ್ಕೆ ಅನೇಕ ಮಾರ್ಗಗಳಿವೆ ಎಂಬುದನ್ನು ತರುವಾಯ ತಮ್ಮ ಜೀವನದಲ್ಲಿ ಕಂಡು ತಿಳಿದರು. ಆದರೆ ಮೊತ್ತಮೊದಲು ಅವ ರನ್ನು ಅಲ್ಲಿಗೆ ಕೊಂಡೊಯ್ದುದು ಸೌಂದರ್ಯದ ದಾರಿ. ಮಾಯೆಯ ಕೃಪೆಯಿಲ್ಲದೆ ಬ್ರಹ್ಮಸಾಕ್ಷಾತ್ಕಾರವಾಗದು ಎಂದು ಅವರು ತಮ್ಮ ಶಿಷ್ಯರಿಗೆ ಮತ್ತೆ ಮತ್ತೆ ಒತ್ತಿ ಹೇಳುತ್ತಿದ್ದರು.[3] ಯಾವುದು ಕಲಾಕೋವಿದರ ಸೌಂದರ್ಯವೋ ತತ್ತ್ವ ವೇತ್ತರ ಮಾಯೆಯೋ ಅದು ಪರಮಹಂಸರಿಗೆ ಜಗನ್ಮಾತೆಯಾಗಿತ್ತು.[4]

---

[1] ಬ್ರಹ್ಮವಿತ್ ಬ್ರಹ್ಮೈವ ಭವತಿ —ಮುಂಡಕೋಪನಿಷತ್ತು, ೩.೨.೯.

[2] ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ |
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ || —ಗೀತೆ, ೧೨.೫

[3] ಮಾಯೆಯೂ ಅದರ ಶಕ್ತಿಸ್ಫೂರ್ತಿಯೂ ಇಲ್ಲದ ಪಕ್ಷಕ್ಕೆ ಯಾವನಿಗಾದರೂ ಬ್ರಹ್ಮ ಸಾಕ್ಷಾತ್ಕಾರಮಾಡಿಕೊಳ್ಳುವುದಕ್ಕೆ ಆಗುತ್ತಿತ್ತೇನು? —ಉಪದೇಶ ವಾಕ್ಯಾವಳಿ

[4] ಅನಿತ್ಯವಾದುದರ ಮೂಲಕ ನಿತ್ಯವಾದುದನ್ನೂ, ಅಸತ್ತಿನ ಮುಖೇನ ಸತ್ತನ್ನೂ, ವ್ಯಕ್ತ ವಾದುದರ ದ್ವಾರಾ ಅವ್ಯಕ್ತವನ್ನೂ ಉಪದೇಶಮಾಡಬೇಕು.
—ಉಪದೇಶ ವಾಕ್ಯಾವಳಿ.

ಸುಖಸಂತೋಷಪೂರ್ಣವಾಗಿದ್ದ ಗದಾಧರನ ಬಾಲ್ಯಜೀವನವು ಹಠಾತ್ತಾಗಿ ಒಂದು ಮಹಾದುಃಖ ತರಂಗದಿಂದ ತಾಡಿತವಾಯಿತು. ಸೋದರಳಿಯನ ಊರಿಗೆ ನವರಾತ್ರಿಯ ದುರ್ಗೋತ್ಸವಕ್ಕೆಂದು ಹೋಗಿದ್ದ ಖುದಿರಾಮನು ಪ್ರಬಲ ರೋಗಗ್ರಸ್ತನಾಗಿ ರಘುವೀರನ ನಾಮಸ್ಮರಣೆ ಮಾಡುತ್ತ ದಿವಂಗತನಾದನು. ಏಳು ವರ್ಷ ವಯಸ್ಸಿನ ಗದಾಧರನು ತಂದೆಯ ಮರಣಕ್ಕಿಂತಲೂ ತಾಯಿಯ ರೋದನದಿಂದ ಬಹಳ ನೊಂದುಕೊಂಡನು. ಆಕೆಯ ದುಃಖಾಗ್ನಿಯನ್ನು ಶಮನಮಾಡಲು ತನ್ನ ಕೈಯಲ್ಲಾದ ಮಟ್ಟಿಗೆ ಪ್ರಯತ್ನಮಾಡತೊಡಗಿದನು. ಮೇಲೆ ಮೇಲೆ ನಗುಮೊಗನಾಗಿದ್ದರೂ ಎದೆಯಲ್ಲಿ ಚಿಂತೆ ತುಂಬಿದ್ದಿತು. ಜನನ, ಜೀವನ, ದುಃಖ, ಮರಣಗಳ ಸಮಸ್ಯೆ ಆತನನ್ನು ಬಹುವಾಗಿ ಪೀಡಿಸಿತು. ಶ್ಮಶಾನ ಮೊದಲಾದ ನಿರ್ಜನ ಪ್ರದೇಶಗಳಲ್ಲಿ ತಿರುಗುತ್ತಾ ಧ್ಯಾನಶೀಲನಾದನು. ಜೀವನವು ನಶ್ವರವೆಂದು ಹಿರಿಯರಿಂದ ಕೇಳಿದ್ದ ವಿಷಯವು ಆತನಿಗೆ ಮತ್ತಷ್ಟು ಮನದಟ್ಟಾಯಿತು. ಮೊದಲಿಂದಲೂ ಉರಿಯುತ್ತಲೇ ಇದ್ದ ಭಕ್ತಿಪ್ರದೀಪವು ಮತ್ತೂ ಪ್ರಕಾಶಮಾನವಾಗಿ ಉರಿಯ ತೊಡಗಿತು. ಸ್ವಾಭಾವಿಕವಾಗಿಯೇ ಇದ್ದ ಅಪ್ರಾಪಂಚಿಕತೆ, ಔದಾಸೀನ್ಯಗಳು ಗುರುತರವಾದುವು. ಉರಿಯುವ ಬೆಂಕಿಗೆ ಎಣ್ಣೆ ಹೊಯ್ದಂತೆ ಆತನಿಗೆ ಸನ್ಯಾಸಿಗಳ ಸಂಗವೂ ಲಭಿಸಿತು. ಜಗನ್ನಾಥಕ್ಕೆ ಹೋಗುವ ಹೆದ್ದಾರಿ ಹಳ್ಳಿಗೆ ಸಮೀಪದಲ್ಲಿತ್ತು. ಅಲ್ಲಿದ್ದ ಒಂದು ಸತ್ರದಲ್ಲಿ ಸಾಧುಗಳು ಬಂದಿಳಿದುಕೊಳ್ಳುವ ವಾಡಿಕೆಯಿತ್ತು. ಸಾಧುಸಂಗವು ಜೀವನದ ದುರ್ಲಭ ವಸ್ತುಗಳಲ್ಲಿ ಒಂದು ಎಂದು ಹರಿಕಥೆಗಳಲ್ಲಿ ಕೇಳಿ ತಿಳಿದಿದ್ದ ಬಾಲಕನು ಸತ್ಸಂಗಾಪೇಕ್ಷೆಯಿಂದ ಸತ್ರಕ್ಕೆ ಹೋಗಿ ಬರತೊಡಗಿದನು. ಸಾಧುಗಳ ನಿರ್ಲಿಪ್ತಜೀವನವೂ ಜ್ಞಾನ, ಭಕ್ತಿ, ವೈರಾಗ್ಯಗಳೂ ವಂದನೀಯವಾಗಿ ತೋರಿದುವು. ಅವರೂ ಬಾಲಕನ ಸರಳತೆಯನ್ನೂ ಸೌಜನ್ಯವನ್ನೂ ಕಂಡು ಆತನಿಗೆ ತಾವು ಅಡುಗೆ ಮಾಡಿದ ಭಕ್ಷ್ಯಭೋಜ್ಯಗಳನ್ನು ಕೊಡುತ್ತಿದ್ದರು. ಆತನೊಡನೆ ಈಶ್ವರನ ಮಹಿಮೆಯ ವಿಚಾರವಾಗಿ ಮಾತಾಡುತ್ತಿದ್ದರು. ಮೊದಲು ಮೊದಲು ಪ್ರಶಂಸನೀಯವಾಗಿದ್ದುದು ಕ್ರಮೇಣ ಅನುಕರಣೀಯವಾಯಿತು. ಒಂದು ದಿನ ಗದಾಧರನು ಸಾಧುಗಳಂತೆ ಮೈತುಂಬ ಬೂದಿ ಬಳಿದುಕೊಂಡು ನಾಮಹಾಕಿಕೊಂಡು ಉಟ್ಟ ಪಂಚೆಯನ್ನು ಹರಿದು ಕೌಪೀನ ಕಟ್ಟಿ

ಕೊಂಡು ತಾಯಿಯೆಡೆಗೆ ಒಂದು "ನೋಡಮ್ಮಾ, ನಾನು ಸಾಧುವಾಗಿದ್ದೇನೆ" ಎಂದನು. ಅದನ್ನು ನೋಡಿ ಚಂದ್ರಾದೇವಿ ಕಾತರೆಯಾದಳು. ಸಾಧುಗಳೆಲ್ಲಿ ಯಾದರೂ ತನ್ನ ಮುದ್ದು ಕಂದನನ್ನು ಎತ್ತಿಕೊಂಡು ಹೋಗಿಬಿಟ್ಟಾರು ಎಂದು ಮಗನಿಗೆ ಅವರ ಸಂಗವನ್ನು ತ್ಯಜಿಸುವಂತೆ ಬುದ್ಧಿ ಹೇಳಿದಳು. ಗದಾಧರನು ಆಕೆಯ ಸಂಶಯ ಭಯಗಳು ನಿರಾಧಾರವಾದುವೆಂದು ವಾದಿಸಿದನು. ಆದರೂ ತಾಯಿ ಒಪ್ಪಲಿಲ್ಲ. ಆಕೆಗೆ ನೋವಾಗಬಾರದೆಂದು ಬಾಲಕನು ಸತ್ರಕ್ಕೆ ಹೋಗುವು ದನ್ನು ಬಿಟ್ಟುಬಿಟ್ಟನು. ಇದನ್ನೆಲ್ಲಾ ಕೇಳಿ ತಿಳಿದ ಸಾಧುಗಳು ಚಂದ್ರಾದೇವಿಯ ಹತ್ತಿರ ಬಂದು ಬಾಲಕನ ಕ್ಷೇಮಕ್ಕೆ ಭರವಸೆ ಕೊಟ್ಟರು. ತರುವಾಯ ಗದಾ ಧರನು ಮುನ್ನಿನಂತೆ ಸಾಧುಸಂಗ ನಿರತನಾದನು.

ಒಂಬತ್ತನೆಯ ವಯಸ್ಸಿನಲ್ಲಿ ಗದಾಧರನಿಗೆ ಉಪನಯನವಾಯಿತು. ಆಗ ನಡೆದ ಒಂದು ಸಂಗತಿ ಗಮನಾರ್ಹವಾದುದು. ಅದರಿಂದ ಗದಾಧರನ ಬಾಲಶರೀರದಲ್ಲಿ ಪತಿತಪಾವನ ಯುಗಾವತಾರ ಶ್ರೀರಾಮಕೃಷ್ಣರು ಮಲಗಿ ದ್ದುದು ಗೊತ್ತಾಗುತ್ತದೆ. ಮಗುವಿನಿಂದಲೂ ಗದಾಧರನನ್ನು ಎತ್ತಿ ಆಡಿಸಿ ಸಲಹಿದ ಧನಿ ಆತನ ಉಪನಯನ ಕಾಲದಲ್ಲಿ ತಾನೇ ಪ್ರಥಮ ಭಿಕ್ಷಾಮಾತೆ ಯಾಗಬೇಕೆಂದು ಕೇಳಿಕೊಂಡಿದ್ದಳು. ಹುಡುಗನು ಮಾತು ಕೊಟ್ಟಿದ್ದನು. ಬಡವಳಾದ ಧನಿ ಬಹು ಪ್ರಯತ್ನದಿಂದ ಕಾಸಿಗೆ ಕಾಸು ಗುಂಟುಹಾಕಿ ತನ ಗೊದಗುವ ಆ ಪುಣ್ಯ ಮುಹೂರ್ತವನ್ನೇ ನಿರೀಕ್ಷಿಸುತ್ತಿದ್ದಳು. ಗದಾಧರನು ಈ ವಿಷಯವನ್ನು ರಾಮಕುಮಾರನಿಗೆ ತಿಳಿಸಿ ತಾನು ಧನಿಯಿಂದಲ್ಲದೆ ಇತರ ರಿಂದ ಮೊದಲು ಭಿಕ್ಷೆಯನ್ನು ಸ್ವೀಕರಿಸೆನೆಂದು ಹೇಳಿಬಿಟ್ಟನು. ಧನಿ ಶೂದ್ರ ಸ್ತ್ರೀಯಾದುದರಿಂದ ಅಣ್ಣನು ಅದಕ್ಕೆ ಸಮ್ಮತಿಸಲಿಲ್ಲ. ಕೊಟ್ಟ ಮಾತಿಗೆ ತಪ್ಪಲಾರೆನೆಂದೂ ಮಿಥ್ಯಾವಾದಿ ಉಪನಯನಕ್ಕೆ ಅರ್ಹನಲ್ಲವೆಂದೂ ತಮ್ಮನು ಹಟಹಿಡಿದನು. ಕಡೆಗೆ ಗದಾಧರನ ಹಟವೇ ಗೆದ್ದಿತು. ಧನಿಯಾದರೋ ಭಿಕ್ಷಾ ಮಾತೆಯಾಗಿ ಹೆಮ್ಮೆಯಿಂದ ಹಿಗ್ಗಿ ಸುಖದ ಕಣ್ಣೀರು ಕರೆದಳು. ಪ್ರೀತಿ ಯೊಂದಿದ್ದರೆ ಜಾತಿಯಿಂದೇನು? ಸಮಾಜದ ರೀತಿನೀತಿಗಳೂ ಸಂಪ್ರದಾಯದ ಕಟ್ಟುನಿಟ್ಟುಗಳೂ ಎದೆಯ ಸರಳತೆಗೆ ಶರಣಾಗಲೇ ಬೇಕು. ಮುಖ್ಯವಾದುದು ಆವೇಶವಲ್ಲದೆ ವೇಷವಲ್ಲ.

ಉಪನಯನವಾದ ಸ್ವಲ್ಪ ಕಾಲದಲ್ಲಿಯೇ ಬಾಲಕನ ಅಸಾಧಾರಣ ಮೇಧಾ ಶಕ್ತಿಯನ್ನು ಪ್ರದರ್ಶಿಸುವ ಮತ್ತೊಂದು ಘಟನೆ ಸಂಭವಿಸಿತು. ಗ್ರಾಮದ ಶ್ರೀಮಂತನೊಬ್ಬನ ಮನೆಯಲ್ಲಿ ಯಾವುದೋ ಒಂದು ವಿಶೇಷ ದಿವಸ ಪಂಡಿತ ರನೇಕರು ಸೇರಿದ್ದರು. ಊಟವಾದ ಮೇಲೆ ರೂಢಿಯಂತೆ ಶಾಸ್ತ್ರ ವಿಷಯವಾದ ಚರ್ಚೆಗಾರಂಭವಾಯಿತು. ಉಬ್ಬರದಲ್ಲಿ ವಾಗ್ವಾದದ ಗದ್ದಲವು ಸಮೀಪದಲ್ಲಿ ಆಟವಾಡುತ್ತಿದ್ದ ಬಾಲಕರನ್ನು ತನ್ನೆಡೆಗೆ ಸೆಳೆಯಿತು. ಇತರ ಬಾಲಕರು ಅಣಕ ಹಾಸ್ಯಪರಿಹಾಸ್ಯಗಳಲ್ಲಿ ತೊಡಗಿದರು. ಗದಾಧರನು ಪಂಡಿತರ ವಾಗ್ವಾದದ ವಿಷಯದಲ್ಲಿ ಮಗ್ನನಾದನು. ಚರ್ಚೆ ಕೊನೆಮುಟ್ಟುವಂತೆ ತೋರಲಿಲ್ಲ ; ನಿರ್ಣಯ ವಂತೂ ಬಹುದೂರವಾಗಿತ್ತು. ಇದನ್ನೆಲ್ಲಾ ಮನಸ್ಸಿಟ್ಟು ಆಲಿಸುತ್ತ ನಿಂತಿದ್ದ ಗದಾಧರನು ತನ್ನ ಬಳಿಯಿದ್ದ ಭಟ್ಟಾಚಾರ್ಯನೊಬ್ಬನ ಕಿವಿಯಲ್ಲಿ ಏನನ್ನೋ ಉಸುರಿದನು. ಆತನು ಹುಡುಗನ ಪ್ರತಿಭೆಯನ್ನು ಕಂಡು ಅಪ್ರತಿಭನಾದನು. ಗದಾಧರನು ಸೂಚಿಸಿದ ನಿರ್ಣಯವು ಸರ್ವಾನುಮೋದಿತವಾಗಿ ಚರ್ಚೆ ಕೊನೆ ಗಂಡಿತು. ಎಲ್ಲರೂ ಬಾಲಕನನ್ನು ಹೊಗಳಿ ಆಶೀರ್ವಾದಮಾಡಿದರು.

ಇನ್ನೊಂದು ದಿನ ಶಿವರಾತ್ರಿಯಲ್ಲಿ ಹಳ್ಳಿಯವರು ಜಾಗರಣೆಗಾಗಿ ಬಯ ಲಾಟ ಹೂಡಿದರು. ಆಟದಲ್ಲಿ ವೇಷಹಾಕುವ ಭಕ್ತರೆಲ್ಲ ಪೂಜೆ ಉಪವಾಸಗಳಲ್ಲಿ ಹಗಲು ಕಳೆಯುವುದು ವಾಡಿಕೆಯಾಗಿತ್ತು. ಗದಾಧರನು ಪಾತ್ರಧಾರಿಯಲ್ಲ ದಿದ್ದರೂ ನಿಯಮನಿಷ್ಠೆಗಳಿಂದ ಉಪವಾಸಮಾಡಿ ರಾತ್ರಿ ಶಿವಪೂಜೆಯಲ್ಲಿ ನಿರತ ನಾಗಿದ್ದನು. ಗೆಳೆಯನೊಬ್ಬನು ಓಡಿಬಂದು "ಸೀತಾನಾಥನ ಮನೆಗೆ ಕೂಡಲೇ ಬರಬೇಕು. ನಿನಗಾಗಿ ಎಲ್ಲರೂ ಕಾದುಕೊಂಡಿದ್ದಾರೆ" ಎಂದನು.

ಮಿತ್ರನ ಉದ್ವಿಗ್ನಭಾವವನ್ನು ಕಂಡು ಗದಾಧರನು ಗಾಬರಿಯಿಂದ "ಏಕೆ? ಏನಾಯ್ತು?" ಎಂದು ಕೇಳಿದನು.

"ಆಟದಲ್ಲಿ ಶಿವನ ಪಾತ್ರವಹಿಸುವವನು ಹಠಾತ್ತಾಗಿ ಅಸ್ವಸ್ಥನಾಗಿಬಿಟ್ಟಿ ದ್ದಾನೆ. ಆಟವೇ ನಿಂತು ಹೋಗುವಂತಿದೆ. ಅದಕ್ಕಾಗಿ ಊರಿನ ದೊಡ್ಡವರೆಲ್ಲರೂ ನಿನ್ನನ್ನು ಶಿವನ ಪಾತ್ರವಹಿಸುವಂತೆ ಕೇಳಿಕೊಳ್ಳುತ್ತಿದ್ದಾರೆ. ನಿನ್ನನ್ನು ಬಿಟ್ಟರೆ ಮತ್ತಾರೂ ಯೋಗ್ಯರಲ್ಲ."

"ನಾನು ಶಿವಪೂಜೆ ಬಿಟ್ಟು ಬರಲಾರೆ."

" ಶಿವನ ಪಾತ್ರವಹಿಸುವುದು ಶಿವಪೂಜೆಯಂತೆಯೇ ಪುಣ್ಯಕರವಲ್ಲವೇ? ಯಾವಾಗಲೂ ಶಿವನನ್ನೇ ಧ್ಯಾನಮಾಡಬೇಕಾಗುತ್ತದೆ. ನಾವೂ ಕೂಡ ಶಿವರಾತ್ರಿಗಾಗಿಯೇ ಆಟವಾಡುತ್ತಿದ್ದೇವೆ."

ಗದಾಧರನು ಒಪ್ಪಿದನು. ನೇಪಥ್ಯಮಂದಿರದಲ್ಲಿ ಸಿಂಗಾರವಾಯಿತು. ಜಟಾಭಸ್ಮತ್ರಿಶೂಲಧಾರಿಯೂ ರುದ್ರಾಕ್ಷಮಾಲಾಮಂಡಿತನೂ ಸರ್ಪಧರನೂ ಚರ್ಮಾಂಬರನೂ ಆದ ಬಾಲಕನು ಶಿವನಂತೆ ಶೋಭಿಸಿದನು. ಮಿತ್ರರ ಸಹಾಯದಿಂದ ಮೆಲ್ಲಮೆಲ್ಲನೆ ಹಜ್ಜೆಯಿಡುತ್ತ ಗಂಭೀರಮೂರ್ತಿ ರಂಗಪ್ರವೇಶಮಾಡಿತು. ಪ್ರೇಕ್ಷಕರು ಪ್ರತ್ಯಕ್ಷ ಮಹಾದೇವನನ್ನೇ ಕಂಡಂತೆ ಸ್ತಬ್ಧರಾದರು. ಶಿವಮೂರ್ತಿ ಕಂಡರಿಸಿದ ಪ್ರತಿಮೆಯಂತೆ ಅಲುಗಾಡದೆ ನಿಂತಿತು. ಗದಾಧರನು ಸಮಾಧಿಸ್ಥನಾಗಿದ್ದನು. ಮುಖದಲ್ಲಿ ಜ್ಯೋತಿ ಹೊಮ್ಮುತ್ತಿತ್ತು. ಎಡೆಬಿಡದೆ ಕಣ್ಣೀರು ಹರಿಯುತ್ತಿತ್ತು. ಜನಗಳು ಬೆಚ್ಚಿದರು. ಶಿಶಿರೋಪಚಾರಮಾಡಿದರು. ಶಿವನ ಧ್ಯಾನದಲ್ಲಿ ತನ್ಮಯನಾಗಿದ್ದ ಬಾಲಕನಿಗೆ ಬಾಹ್ಯಪ್ರಜ್ಞೆ ಇರಲಿಲ್ಲ. ಆಟವು ನಿಂತು ಹೋಯಿತು. ಜನಗಳು ಗದಾಧರನ ಮಹಿಮೆಯನ್ನು ಕುರಿತು ಮಾತನಾಡುತ್ತ ಪ್ರಸನ್ನಚಿತ್ತರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಶ್ರೀಯುತ ಕೇಶವಚಂದ್ರಸೇನ, ಸ್ವಾಮಿ ವಿವೇಕಾನಂದ ಮೊದಲಾದ ಪ್ರಖ್ಯಾತರಾದ ಮಹಾವ್ಯಕ್ತಿಗಳು ಕಾಲಾನಂತರದಲ್ಲಿ ಶ್ರೀರಾಮಕೃಷ್ಣರನ್ನು ಅವತಾರಪುರುಷರೆಂದು ಕಂಡುಹಿಡಿದು ಆರಾಧಿಸಿದ ಸಂಗತಿ ಜಗತ್ತಿಗೆ ಗೊತ್ತಾಗಿದೆ. ಆದರೆ ಅದಕ್ಕೆ ಬಹು ಪೂರ್ವದಲ್ಲಿಯೇ ಕಾಮಾರಪುಕುರ ಗ್ರಾಮದಲ್ಲಿ ದರಿದ್ರನೂ ವೃದ್ಧನೂ ಅಜ್ಞಾತನಾಮನೂ ಆಗಿದ್ದ ಶ್ರೀನಿವಾಸ ಶಾಂಖಾರಿ ಗದಾಧರನನ್ನು ದೇವರೆಂದು ಪೂಜಿಸಿದ್ದುದು ಮಾತ್ರ ಆಡಂಬರ ಅಟ್ಟಹಾಸ ಪ್ರೇಮಿಯಾಗಿರುವ ಲೋಕದ ಗಮನಕ್ಕೆ ಬಾರದಿರಬಹುದು. ಆದರೂ ಆ ಘಟನೆ ವರ್ಣನೀಯವಾದುದು. ಕೀರ್ತಿ ಮಹತ್ತಿಗೆ ಸಾಕ್ಷಿಯಲ್ಲ. ಎಲ್ಲರ ಕಣ್ಣಿಗೂ ದಿನದಿನವೂ ಹೊಳೆಯುವ ಸೂರ್ಯನು ಕಣ್ಣಿಗೆ ಕಾಣದ ಬಹು ದೂರದ ನೀಹಾರಿಕೆಗಿಂತ ದೊಡ್ಡವನಲ್ಲ.

ಗದಾಧರನು ದೇವರ ಅವತಾರವೆಂದು ನಿಶ್ಚಯಿಸಿ ಶ್ರೀನಿವಾಸನು ಯಾರಿಗೂ ತಿಳಿಯದಂತೆ ಪೂಜೆಗೆ ಅಣಿಮಾಡಿದನು. ಒಂದು ದಿನ ವೃಕ್ಷಪರಿವೃತವಾಗಿದ್ದ

ನಿರ್ಜನ ಪ್ರದೇಶಕ್ಕೆ ಬಾಲಕನನ್ನು ಕರೆದೊಯ್ದು, ದರ್ಭೆಯ ಪೀಠದ ಮೇಲೆ ಕುಳ್ಳಿರಿಸಿ, ಮಿಠಾಯಿ ಮೊದಲಾದ ಮಧುರ ನೈವೇದ್ಯಗಳನ್ನು ಮುಂದಿಟ್ಟು, ಆತನನ್ನು ಹೂಮಾಲೆಗಳಿಂದ ಅಲಂಕರಿಸಿ, ಸುಗಂಧದ್ರವ್ಯಗಳನ್ನು ಹಚ್ಚಿ ಪೂಜಿಸಿದನು. ತರುವಾಯ ಧ್ಯಾನಮೂರ್ತಿ ತರುಣ ಗದಾಧರನ ಮುಂದೆ ಭಕ್ತಿಮೂರ್ತಿ ವೃದ್ಧ ಶ್ರೀನಿವಾಸನು ಕೈಮುಗಿದು ನಿಂತುಕೊಂಡು ಕಂಬನಿಗರೆಯುತ್ತ "ಹೇ ದೇವದೇವ, ನಾನು ಮುದುಕನಾದೆ. ನನಗೆ ಅಂತ್ಯವು ಸಮೀಪಿಸುತ್ತಿದೆ. ನೀನು ಜಗತ್ತಿನಲ್ಲಿ ಮುಂದೆ ಮಾಡುವ ಮಹಾಕಾರ್ಯಗಳನ್ನು ಕಣ್ಣಾರೆ ನೋಡುವ ಪುಣ್ಯ ನನಗಿಲ್ಲ. ಆದರೂ ನನ್ನದು ಇದೊಂದೇ ಪ್ರಾರ್ಥನೆ—ಈ ನಿನ್ನ ದರಿದ್ರ ಕಿಂಕರನ ಮೇಲೆ ನಿನ್ನ ಕೃಪಾಕಟಾಕ್ಷವು ಯಾವಾಗಲೂ ತಪ್ಪದಿರಲಿ!" ಎಂದು ಪ್ರಾರ್ಥಿಸಿದನು. ಸತ್ಯಮಿಥ್ಯಗಳೇನೇ ಇರಲಿ, ಎಂತಹ ದೃಶ್ಯ!

ದಿನ ಕಳೆದ ಹಾಗೆಲ್ಲ ಬಾಲಕನ ಧರ್ಮಪ್ರಜ್ಞೆ ವಿಕಾಸವಾಯಿತು. ಐಹಿಕ ವಿಷಯಗಳಲ್ಲಿ ಔದಾಸೀನ್ಯವೂ ಹೆಚ್ಚಿತು. ಶಾಲೆಗೆ ಹೋಗುವುದು ವಿರಳವಾಯಿತು. ಹೊಟ್ಟೆ ಹೊರೆಯುವ ಅಕ್ಷರ ವಿದ್ಯೆಯಲ್ಲಿ ತಿರಸ್ಕಾರ ಹುಟ್ಟಿತು. ಅದಕ್ಕೆ ಬದಲಾಗಿ ಪುರಾಣಶ್ರವಣ, ಈಶ್ವರಾರಾಧನೆ, ದೇವದೇವಿಯರ ಮೂರ್ತಿ ರಚನೆ, ಭಗವತ್ ಸಂಕೀರ್ತನೆ ಮೊದಲಾದುವುಗಳಲ್ಲಿ ಆಸಕ್ತಿ ಹೆಚ್ಚಿತು. ಹಳ್ಳಿಯವರೆಲ್ಲ ಆತನಿಂದ ಪುರಾಣ ಕಥೆಗಳನ್ನು ಕೇಳಿ ಆನಂದಪಡುತ್ತಿದ್ದರು. ರಾಮಕುಮಾರನು ತಮ್ಮನಿಗೆ ಆಗಾಗ ಬರುತ್ತಿದ್ದ ಭಾವಸಮಾಧಿಯನ್ನು ಯಾವುದೋ ಒಂದು ವಿಧವಾದ ಮೂರ್ಛೆಯ ಚಿಹ್ನೆ ಎಂದು ತಿಳಿದು ಅವನನ್ನು ಯಾವ ಕಠಿನ ನಿಯಮಗಳಿಗೂ ಗುರಿಮಾಡದೆ ಸುಮ್ಮನಾದನು. ಮಧ್ಯೆ ಮನೆಯಲ್ಲಿ ಕೆಲವು ವಿಶೇಷ ಸಂಗತಿಗಳೊದಗಿದುವು. ಕಿರಿಯಣ್ಣನಾದ ರಾಮೇಶ್ವರನಿಗೂ ತಂಗಿಯಾದ ಸರ್ವಮಂಗಳೆಗೂ ವಿವಾಹಗಳಾದುವು. ರಾಮಕುಮಾರನ ಪತ್ನಿ ಒಂದು ಮಗುವನ್ನು ಹೆತ್ತು ತೀರಿಕೊಂಡಳು. ಹೆಚ್ಚಿದ ಸಂಸಾರಕ್ಕೆ ಆದಾಯವು ಸಾಕಾಗುತ್ತಿರಲಿಲ್ಲ. ಆದ್ದರಿಂದ ಸ್ವಲ್ಪ ಸಾಲವೂ ಆಯಿತು. ಇವೆಲ್ಲ ಕಾರಣಗಳಿಂದ ರಾಮಕುಮಾರನು ಬೇರೊಂದು ಸಂಪಾದನೆಯ ಮಾರ್ಗವನ್ನು ಆಲೋಚಿಸಿ, ಕೆಲವು ಮಿತ್ರರ ಸಲಹೆಯಂತೆ ಕಲ್ಕತ್ತೆಗೆ ಹೋಗಿ ಒಂದು ಸಣ್ಣ ಪಾಠಶಾಲೆ

ಯನ್ನು ತೆರೆದನು. ಗದಾಧರನು ಎಂದಿನಂತೆ ಬಯಲಾಟ, ಭಜನೆ, ಕೀರ್ತನೆ, ಧ್ಯಾನಗಳಲ್ಲಿ ನಿರತನಾಗಿದ್ದನು.

ಅತ್ತ ಕಲ್ಕತ್ತೆಯಲ್ಲಿ ರಾಮಕುಮಾರನ ಪಾಠಶಾಲೆ ಅಭಿವೃದ್ಧಿ ಹೊಂದಿತು. ವರ್ಷ ವರ್ಷಕ್ಕೂ ಹುಡುಗರ ಸಂಖ್ಯೆ ಹೆಚ್ಚಿತು. ತಾನೊಬ್ಬನೇ ಎಲ್ಲ ಕೆಲಸ ಗಳನ್ನು ನಿರ್ವಹಿಸುವುದು ಕಷ್ಟವಾಯಿತು. ಸಹಾಯಕನೊಬ್ಬನು ಆವಶ್ಯಕ ವಾದುದರಿಂದಲೂ ತಮ್ಮನಿಗೆ ಅಕ್ಷರ ವಿದ್ಯೆಯಲ್ಲಿ ಆದರ ಹುಟ್ಟಿಸುವ ಆಕಾಂಕ್ಷೆ ಯಿಂದಲೂ ಗದಾಧರನನ್ನು ಕಳುಹಿಸುವಂತೆ ಮನೆಗೆ ಕಾಗದ ಬರೆದನು. ಗದಾ ಧರನೂ ಅಣ್ಣನ ಇಚ್ಛೆಗೆ ಸಂತೋಷದಿಂದ ತಲೆಬಾಗಿದನು. ಗೊತ್ತಾದ ಶುಭ ದಿವಸದಲ್ಲಿ ಮನೆದೇವರಾದ ರಘುವೀರನಿಗೆ ಅಡ್ಡಬಿದ್ದು, ಮಾತೆಯ ಆಶೀರ್ವಾದ ವನ್ನು ಪಡೆದು, ಹದಿನಾರು ವರ್ಷ ತನ್ನ ಜೀವನವನ್ನು ಸುಖಮಯವಾಗಿ ಮಾಡಿದ್ದ ಆಬಾಲವೃದ್ಧ ಬಂಧುಮಿತ್ರರನ್ನು ಕಂಬನಿತುಂಬಿ ಬೀಳ್ಕೊಂಡು, ವಿಧಿಯ ಗುಪ್ತಗಾಮಿಯಾದ ಸಂವಿಧಾನಕ್ಕೆ ಅನುಸಾರವಾಗಿ ಗದಾಧರನು ಮುದ್ದುಹಳ್ಳಿಯಾಗಿದ್ದ ಕಾಮಾರಪುಕುರವನ್ನು ಬಿಟ್ಟು ಮಹಾನಗರವಾದ ಕಲ್ಕತ್ತೆಗೆ ಹೊರಟುಹೋದನು. ಹಳ್ಳಿಗೆ ಕತ್ತಲೆ ಬಿದ್ದಂತಾಯಿತು.

ರಾಮಕುಮಾರನಿಗೆ ಗದಾಧರನ ಆಗಮನದಿಂದ ಮಹೋಪಕಾರವಾಯಿತು. ಆದರೆ ತಮ್ಮನಿಗೆ ಅಕ್ಷರ ವಿದ್ಯೆಯ ಮೇಲಿದ್ದ ಜುಗುಪ್ಸೆ ಮುನ್ನಿನಂತೆಯೇ ನಿಶ್ಚಲವಾಗಿತ್ತು. ಏನುಮಾಡುವುದಕ್ಕೂ ತೋರದೆ ಹತಾಶನಾದ ರಾಮಕು ಮಾರನು ಒಂದು ದಿನ ಗದಾಧರನನ್ನು ಬಳಿಗೆ ಕರೆದು "ತಮ್ಮಾ, ನೀನು ಹೀಗೆ ವಿದ್ಯೆ ಕಲಿಯದೆ ಉದಾಸೀನಮಾಡಿದರೆ ಮುಂದೆ ನಿನ್ನ ಗತಿ ಏನಾಗುವುದು? ಸಂಸಾರದ ಗತಿಯೇನು?" ಎಂದು ಮೊದಲಾಗಿ ಗದರಿಸಿ ಬುದ್ಧಿ ಹೇಳಿದನು. ಪ್ರತ್ಯುತ್ತರವು ಸಿಡಿಲಿನಂತೆ ಬಂದೆರಗಿತು. "ಮೂರುಕಾಸಿನ ರೊಟ್ಟಿ ಕೊಟ್ಟು ಹೊಟ್ಟೆಹೊರೆಯುವ ವಿದ್ಯೆಯಿಂದ ನನಗಾಗಬೇಕಾದುದೇನು? ನನಗೆ ಬೇಕಾ ದುದು ಎದೆಗೆ ಕಾಂತಿಯನ್ನೂ ಬಗೆಗೆ ಶಾಂತಿಯನ್ನೂ ಕೊಡುವ ಬ್ರಹ್ಮವಿದ್ಯೆ." ತಮ್ಮನ ನುಡಿಗೆ ಅಪ್ರತಿಭನಾದ ಅಣ್ಣನು ಏನೊಂದುತ್ತರವನ್ನೂ ಕೊಡ ಲಾರದೆ ಸುಮ್ಮನಾಗಿಬಿಟ್ಟನು.

ಕಲ್ಕತ್ತೆಗೆ ಬಂದ ಮೇಲೆ ಗದಾಧರನ ಧರ್ಮಭಾವನೆಗಳು ಇನ್ನೂ ಪರಿಪುಷ್ಟಿ

ಹೊಂದಿದುವು. ಹಳ್ಳಿಯಲ್ಲಿದ್ದಾಗಲೇ ಸಾಮಾನ್ಯಜನರ ಜೀವನವು ಸಂಪೂರ್ಣವಾಗಿ ವಿಷಯೇಂದ್ರಿಯ ಮುದ್ರಿತವಾದುದೆಂದು ಆತನಿಗೆ ತಿಳಿದುಬಂದಿತ್ತು. ನಗರಕ್ಕೆ ಬಂದ ಮೇಲೆ ಆ ಅಭಿಪ್ರಾಯವು ಪ್ರಬಲತರವಾಯಿತು. ಮಂದಿಯ ಆಶೆ, ಅಭಿಲಾಷೆ, ಆಕಾಂಕ್ಷೆ, ಸ್ವಭಾವ, ಮನೋರಥ, ಚಿತ್ತವೃತ್ತಿಗಳೆಲ್ಲವೂ ನಶ್ವರವಾದ ಐಹಿಕಭೋಗಗಳ ಬೆಂಕಿಯೆಡೆಗೆ ನುಗ್ಗುತ್ತಿದ್ದುದನ್ನೂ ಜನರು ಯಶಸ್ಸು ಐಶ್ವರ್ಯಗಳಿಗಾಗಿ ಪ್ರಾಣಪಡುತ್ತಿದ್ದುದನ್ನೂ ಬಲಿಷ್ಠಧೂರ್ತರು ದುರ್ಬಲ ನಮ್ರರಾದವರನ್ನು ಮೂಲೆಗೊತ್ತುತ್ತಿದ್ದುದನ್ನೂ ಈಶ್ವರ, ಧರ್ಮ, ಸದಾಚಾರಗಳೆಂಬುವು ಮರೆತ ಮಾತಾಗಿ, ಪವಿತ್ರಗ್ರಂಥಗಳೆಲ್ಲ 'ಮೌಢ್ಯನಿಧಿ'ಗಳಾಗಿದ್ದುದನ್ನೂ ಪ್ರತ್ಯಕ್ಷವಾಗಿ ನೋಡಿದ ಬಾಲಕನಲ್ಲಿ ಐಹಿಕ ಅನಾಸಕ್ತಿಯೂ ಪಾರಲೌಕಿಕ ಭಕ್ತಿಯೂ ವಿಷಯ ವಿರಕ್ತಿಯೂ ಒಡನೊಡನೆ ಮೂಡಿ ಬೆಳೆದುವು. ಜೀವನದ ಧ್ಯೇಯೋದ್ದೇಶಗಳು ಅಶಾಶ್ವತಭೋಗಲಾಲಸೆಗಳಿಗಿಂತಲೂ ಮಹತ್ತರವೂ ಅಗಾಧತರವೂ ಗಹನತರವೂ ಆದುವೆಂಬುದು ಆತನಿಗೆ ದಿನದಿನವೂ ಹೆಚ್ಚು ಹೆಚ್ಚಾಗಿ ವೇದ್ಯವಾಯಿತು. ಅಲ್ಲದೆ ಹೃದಯದ ಅಂತರಾಳದಲ್ಲಿ ತನ್ನ ಜೀವನದ ಮಹೋದ್ದೇಶವೂ ಮೆಲ್ಲಮೆಲ್ಲನೆ ಮೊರೆಯ ತೊಡಗಿತು. ಒಟ್ಟಿಗೆಟ್ಟ ಮಾನವರಿಗೆ ತಾನು ಮಾರ್ಗದರ್ಶಕ ಜ್ಯೋತಿಯಾಗಿ ಅವರಿಗೆ ಚಿರಕಲ್ಯಾಣಮಯವೂ ಪರಮಾನಂದಮಯವೂ ಆಗಿರುವ ಸರ್ವೋತ್ತಮ ಆದರ್ಶವನ್ನು ತೋರಿ ಸೇವೆಮಾಡಬೇಕೆಂದು ನಿರ್ಧರಿಸಿದನು. ತನಗೆ ತಾನೇ ಪ್ರಶ್ನೆ ಹಾಕಿಕೊಂಡನು: ಅಕ್ಷರ ವಿದ್ಯೆಯಿಂದ ದಿವ್ಯಭಾವಭಕ್ತಿಗಳು ಅಭಿವೃದ್ಧಿಹೊಂದುವುವೇ ? ಅದರಿಂದ ಧರ್ಮಜೀವನವು ಹೆಚ್ಚು ಪ್ರಕಾಶಮಾನವಾಗುವುದೇ ? ಸತ್ಯಪಕ್ಷಪಾತಿಯಾಗುವೆನೇ ? ಇಂದ್ರಿಯ ಬಂಧನವನ್ನೂ ಅವಿದ್ಯೆಯನ್ನೂ ದಾಟುವೆನೇ ? ಬ್ರಹ್ಮಸಾಕ್ಷಾತ್ಕಾರವಾಗುವುದೇ ? "ಇಲ್ಲ; ಆವಶ್ಯಕವಿಲ್ಲ" ಎಂಬ ಮಾರುತ್ತರವು ಹೃದಯದಲ್ಲಿ ವಜ್ರನಾದದಂತೆ ಕೇಳಿಸಿತು. ಹಾಗಾದರೆ ನಾನು ನಿರಕ್ಷರಕುಕ್ಷಿಯಾಗಿಯಾದರೂ ಇರುವೆನೇ ಹೊರತು ಮಹಾದರ್ಶ ಸಾಧನೆಯನ್ನು ಎಂದಿಗೂ ತ್ಯಜಿಸಲಾರೆನು ಎಂದು ದೃಢನಿಶ್ಚಯಮಾಡಿಕೊಂಡನು. ಮನುಷ್ಯನ ಬಾಳಿನ ಕಡೆಯ ಗುರಿ ಬರಿಯ ಅನ್ನಚಿನ್ನಗಳ ಸಂಪಾದನೆಯಲ್ಲ; ಅವುಗಳಿಂದ ಮಾನವನು ಜರಾಮರಣಗಳನ್ನು ದಾಟಲಾರನು. ಪೊನ್ನಿನ ಪೂಜೆಯಿಂದಲೇ ಮಾನವನು ದೇವರಿಂದ ದೂರನಾಗಿದ್ದಾನೆ.

ಇಂತೆಲ್ಲ ಚಿಂತಿಸಿದ ಬಾಲಕನು ಜನನ ಮರಣ ತರಂಗ ಕ್ಷುಬ್ಧವಾದ ಸಂಸಾರ ಸಾಗರವನ್ನು ದಾಟಿಸುವ ಬ್ರಹ್ಮವಿದ್ಯೆಯ ಕಡೆಗೆ ತಿರುಗಿದನು.

ಎರಡು ವರ್ಷಗಳುರುಳಿದುವು. ರಾಮಕುಮಾರನ ಆರ್ಥಿಕಸ್ಥಿತಿ ಬರ ಬರುತ್ತ ಹೀನತರವಾಯಿತು. ಮುಂದುಗಾಣದೆ ರಘುವೀರನು ಮಾಡಿಸಿದಂತಾಗಲಿ ಎಂದು ಸಾಗತೊಡಗಿದನು. ಅಂತಹ ವಿಷಮಾವಸ್ಥೆಯಲ್ಲಿದ್ದಾಗಲೇ ಅನಿರೀಕ್ಷಿತ ವಾದ ದಿಕ್ಕಿನಿಂದ ಸಹಾಯ ಬಂದಿತು. ಈಶ್ವರಹಸ್ತವು ರಾಮಕುಮಾರನನ್ನು ಎಳೆಯುವ ನೆವದಿಂದ ಗದಾಧರನನ್ನು ಎಳೆಯುತ್ತಿತ್ತು. ಆಗತಾನೇ ದಕ್ಷಿಣೇಶ್ವರದ ಕಾಳಿಕಾದೇವಾಲಯವನ್ನು ಕಟ್ಟಿ ಪೂರೈಸಿದ್ದ ಶ್ರೀಮತಿ ರಾಣಿ ರಾಸಮಣಿ ತನಗೆ ಬಂದೊದಗಿದ ಕಷ್ಟವನ್ನು ನಿವಾರಿಸಬೇಕೆಂದು ರಾಮಕುಮಾರನನ್ನು ಪ್ರಾರ್ಥಿಸಿದಳು.

ರಾಯಾ ರಾಜಚಂದ್ರದಾಸನು ಸ್ವರ್ಗಸ್ಥನಾಗಲು ಆತನ ದೊಡ್ಡ ಜಮೀನು ದಾರಿಯ ಆಡಳಿತವೆಲ್ಲ ಆತನ ಧರ್ಮಪತ್ನಿಯಾದ ರಾಸಮಣಿಯ ಕೈಸೇರಿತು. ಬೆಸ್ತರವಳಾದರೂ ಆಕೆಯ ಸೌಜನ್ಯಔದಾರ್ಯಗಳಿಂದ ಆಕೆಗೆ "ರಾಣಿ" ಎಂಬ ಬಿರುದು ಬಂದಿತ್ತು. ವೈಧವ್ಯಪ್ರಾಪ್ತಿಯಾಗಲು ಆಕೆಯಲ್ಲಿದ್ದ ಈಶ್ವರಭಕ್ತಿ ಇಮ್ಮಡಿಯಾಯಿತು. ಆದ್ದರಿಂದ ಕಾಶಿಯಾತ್ರೆ ಮಾಡಬೇಕೆಂದು ನಿಶ್ಚಯಿಸಿ ದಳು. ಆದರೆ ಕನಸಿನಲ್ಲಿ ಇಷ್ಟದೇವತೆಯಾದ ಕಾಳಿಕಾಮೂರ್ತಿ ಪ್ರತ್ಯಕ್ಷಳಾಗಿ ಆಜ್ಞಾಪಿಸಿದಂತೆ ರಾಣಿ ಕಾಶಿಯಾತ್ರೆಯನ್ನು ನಿಲ್ಲಿಸಿ, ಕಲ್ಕತ್ತೆಗೆ ಸ್ವಲ್ಪ ದೂರ ದಲ್ಲಿ ಭಾಗೀರಥಿಯ ತೀರದಲ್ಲಿ ಒಂದು ಮಹಾದೇವಾಲಯವನ್ನು ನಿರ್ಮಿಸ ತೊಡಗಿದಳು. ಬಹು ಧನವ್ಯಯದ ಆ ಪವಿತ್ರ ನಿರ್ಮಾಣಕಾರ್ಯವು ಕ್ರಿ. ಶ. ೧೮೫೫ರಲ್ಲಿ ತುದಿಮುಟ್ಟಿತು. ಆದರೆ ಶೂದ್ರಳ ದೇವಾಲಯಕ್ಕೆ ಬ್ರಾಹ್ಮಣ ಪೂಜಾರಿ ದೊರಕುವುದು ದುರ್ಲಭವಾಯಿತು. ಅನೇಕ ಶಾಸ್ತ್ರಜ್ಞರ ಸಲಹೆ ಗಳನ್ನು ಕೇಳಿದಳು. ಏನೂ ಬಗೆಹರಿಯಲಿಲ್ಲ. ಕಡೆಗೆ ರಾಮಕುಮಾರನಿಗೆ ಕಾಗದ ಬರೆದಳು. ಆತನು ದೇವಾಲಯವನ್ನು ಬ್ರಾಹ್ಮಣರಿಗೆ ದಾನಮಾಡಿ ದೇವಿಯ ಪ್ರತಿಷ್ಠೆಮಾಡಿಸಿದರೆ ಶಾಸ್ತ್ರಸಮ್ಮತವಾಗುವುದೆಂದೂ ಆಮೇಲೆ ಉಚ್ಚವರ್ಣ ದವರು ಪೂಜಾರಿಗಳಾಗಿ ಪ್ರಸಾದ ಸ್ವೀಕಾರಮಾಡಬಹುದೆಂದೂ ಉತ್ತರ ಬರೆದನು. ರಾಣಿ ತನ್ನ ಕುಲಪುರೋಹಿತರಿಗೆ ದೇವಾಲಯವನ್ನು ದಾನಮಾಡಿ

ಮೂರ್ತಿಸ್ಥಾಪನೆಯ ಕಾರ್ಯವನ್ನು ನೆರವೇರಿಸಿದಳು. ಆದರೆ ಜಗನ್ಮಾತೆಯ ಪೂಜೆಗೆ ಅರ್ಚಕನು ದೊರೆಯಲಿಲ್ಲ. ಪುನಃ ರಾಮಕುಮಾರನ ಸಹಾಯವನ್ನು ಬೇಡಿದಳು. ತಾಂತ್ರಿಕಸಾಧಕನೂ ಶಕ್ತಿಮಂತ್ರೋಪದಿಷ್ಟನೂ ದೇವಿಯ ಪರಳು ಭಕ್ತನೂ ಆಗಿದ್ದ ಆತನು ಪ್ರತಿಷ್ಠಾಪನೆಯ ಪುಣ್ಯಕಾರ್ಯಕ್ಕೆ ಸಮ್ಮತಿಸಿದನು. ಆ ಮಹೋತ್ಸವದ ದಿನ ಗದಾಧರನೂ ಅಣ್ಣನೊಂದಿಗೆ ಹೋದನು. ಆದರೆ ಪ್ರಸಾದ ಸ್ವೀಕಾರಮಾಡಲಿಲ್ಲ. ಕಲ್ಕತ್ತೆಗೆ ಹೋಗಿ ಮನೆಯಲ್ಲಿಯೇ ಊಟ ಮಾಡಿದನು. ಮರುದಿನವೂ ಹಾಗೆಯೇ ಆಯಿತು. ಅಣ್ಣನು ವಿಗ್ರಹ ಪ್ರತಿಷ್ಠೆ ಮಾಡಿ ಹಿಂದಿರುಗುವನೆಂದು ತಿಳಿದಿದ್ದ ಗದಾಧರನು ಮೋಸಹೋದನು. ರಾಮ ಕುಮಾರನು ಅಲ್ಲಿಯೇ ಅರ್ಚಕನಾಗಿ ನಿಂತುಬಿಟ್ಟನು. ತಮ್ಮನು ಅಣ್ಣನನ್ನು ಹಿಂದಿರುಗಿಸಲು ಬಹಳ ಸಾಹಸಮಾಡಿದನು. ನಿಷ್ಠಾವಂತರಾದ ಬ್ರಾಹ್ಮಣರಿಗೆ ಶೂದ್ರಳು ಕಟ್ಟಿಸಿದ ದೇವಾಲಯದಲ್ಲಿ ಪೂಜಾರಿಯಾಗಿರುವುದು ಅಯೋಗ್ಯ ವೆಂದು ವಾದಿಸಿದನು. ಶಾಸ್ತ್ರಯುಕ್ತಿಗಳ ಸಹಾಯದಿಂದ ರಾಮಕುಮಾರನೂ ವಾದಿಸಿದನು. ಕಡೆಗೆ ಯಾವ ನಿರ್ಣಯಕ್ಕೂ ಬರಲಾರದೆ ಚೀಟಿಹಾಕಿ ನೋಡಿ ದರು. ಚೀಟಿಯೂ ರಾಮಕುಮಾರನಂತೆಯೇ ವಾದಿಸಿಬಿಟ್ಟಿತು. ಮುಂದೇನೂ ತೋರದೆ ತಮ್ಮನು ಅಣ್ಣನೊಡನೆ ದಕ್ಷಿಣೇಶ್ವರದಲ್ಲಿಯೇ ನಿಲ್ಲಬೇಕಾಯಿತು. ಆದರೆ ಗದಾಧರನು ದೇವಸ್ಥಾನದ ಪ್ರಸಾದವನ್ನು ಸ್ವೀಕರಿಸಲು ಏನು ಹೇಳಿದರೂ ಸಮ್ಮತಿಸಲಿಲ್ಲ. ಗಂಗಾತೀರದಲ್ಲಿ ಸ್ವಯಂಪಾಕ ಮಾಡಿಕೊಂಡೇ ಊಟಮಾಡ ತೊಡಗಿದನು.

ಗದಾಧರನನ್ನು ದಕ್ಷಿಣೇಶ್ವರಕ್ಕೆ ಉಪಾಯಾಂತರದಿಂದ ಸಾಗಿಸಿದ ಜಗನ್ನಿ ಯಂತೃವಾದ ವಿಧಿ ತನ್ನ ಮಹಾಖನಿಯ ಅನರ್ಘ್ಯರತ್ನವನ್ನು ಕಡೆಯಲು ತೊಡಗಿತು. ರತ್ನವು ಮಣ್ಣಿನ ಹೊದಿಕೆಯಲ್ಲಿ ತನ್ನ ಮಹಾಕಾಂತಿಯನ್ನು ಹುದು ಗಿಸಿಕೊಂಡು ಅಜ್ಞಾತವಾಗಿರಲು ಎಷ್ಟು ಪ್ರಯತ್ನಪಟ್ಟರೂ ಫಲಕಾರಿಯಾಗ ಲಿಲ್ಲ. ಆ ಪ್ರಯತ್ನವೇ ಅದರ ಭಾಗಕ್ಕೆ ಶತ್ರುವಾಗಿ ಅಂತರ್ನಿಹಿತ ತೇಜಸ್ಸನ್ನು ಪ್ರದರ್ಶಿಸತೊಡಗಿತು. ಭಾಗೀರಥಿಯ ತೀರದಲ್ಲಿ ದಿನದಿನವೂ ಜರುಗುತ್ತಿದ್ದ ಸ್ವಯಂಪಾಕದ ನೀಲಧೂಮವು ತನಗೆ ಕಾರಣಕರ್ತನಾದ ದೇವಕುಮಾರನೆಡೆಗೆ ಎಲ್ಲರ ಕಣ್ಣುಗಳನ್ನೂ ಸೆಳೆಯಿತು. ರಾಣಿ ರಾಸಮಣಿಯ ಅಳಿಯನಾದ ಮಥುರ

ನಾಥನು ಸಿಸ್ಪೃಯಿಂದ ಬೆಳಗುತ್ತಿದ್ದ ಗದಾಧರನ ತರುಣ ಮೂರ್ತಿಯನ್ನು ಕಂಡು ಆಕರ್ಷಿತನಾದನು. ಆತನ ದೇಹದ ಸೌಂದರ್ಯ, ವಾಣಿಯ ಮಾಧುರ್ಯ, ಮಖಗುಳ್ಳಗೆಯ ಗಾಂಭೀರ್ಯ, ಆಚಾರವ್ಯವಹಾರಗಳ ಸಭ್ಯತೆ—ಇವುಗಳನ್ನು ನೋಡಿ ಮೊದಮೊದಲು ಕುತೂಹಲ ಮಾತ್ರವಾಗಿದ್ದ ಮಥುರನ ಚಿತ್ತ ವೃತ್ತಿ ಬರಬರುತ್ತ ಪ್ರಶಂಸಾಪೂರ್ಣವಾಯಿತು. ತರುಣನು ತಮ್ಮ ದೇವಾಲಯದ ಪ್ರಧಾನಾರ್ಚಕನ ತಮ್ಮನೆಂದು ತಿಳಿದ ಮೇಲಂತೂ ಆತನ ಸಂತಸವು ಇಮ್ಮಡಿಯಾಯಿತು. ದೇವಸ್ಥಾನದಲ್ಲಿ ಅವನಿಗೆ ಏನಾದರೊಂದು ಕೆಲಸಕೊಡ ಬೇಕೆಂದು ನಿಶ್ಚಯಿಸಿ ರಾಮಕುಮಾರನೊಡನೆ ಪ್ರಸ್ತಾಪಿಸಿದನು. ಶ್ರೀಮಂತನ ಅಭಿಮಾನಪೂರ್ವಕವಾದ ಉತ್ಸಾಹಕ್ಕೆ ಮಾಗಿಮುಟ್ಟಿದಂತಾಯ್ತು. ರಾಮ ಕುಮಾರನು ತನ್ನ ಸೋದರನ ಮನೋವೈಚಿತ್ರ್ಯವನ್ನೂ ಸ್ವಾತಂತ್ರ್ಯಪ್ರಿಯತೆಯನ್ನೂ ಲೌಕಿಕ ಪರವಾದ ಔದಾಸೀನ್ಯವನ್ನೂ ವಿವರಿಸಿ ಹೇಳಿ ಶ್ರೀಮಂತನ ನಾಹಸವು ನಿರರ್ಥಕವಾಗುವುದೆಂದೇ ಸೂಚಿಸಿದನು. ಸದ್ಯಕ್ಕೆ ಆಶಾಭಂಗವಾದರೂ ಸರಿಯಾದ ಸನ್ನಿವೇಶವೊದಗಿದಾಗ ತನ್ನ ಆಕಾಂಕ್ಷೆಯನ್ನು ಸಾಧಿಸಬೇಕೆಂದು ಮಥುರನಾಥನು ಸುಮ್ಮನಾದನು. ಈ ವಿಷಯವು ಗದಾಧರನ ಕಿವಿಗೆ ಬಿತ್ತು. ಸ್ವಲ್ಪ ಗಾಬರಿಯೂ ಆಯಿತು. ಎಲ್ಲಿಯಾದರೂ ಆ ಸಾಹುಕಾರನು ತನ್ನೊಡನೆಯೇ ಪ್ರಸ್ತಾಪ ತೆಗೆದರೆ ಏನು ಮಾಡುವುದೆಂದು ಚಿಂತಿಸಿ ಮಥುರನ ಕಣ್ಣಿಗೆ ಬೀಳದಂತೆ ಇರತೊಡಗಿದನು.

ಈ ಮಧ್ಯೆ ಶ್ರೀರಾಮಕೃಷ್ಣರ ಜೀವನ ಲೀಲೆಯಲ್ಲಿ ಬಹು ಮುಖ್ಯಪಾತ್ರವನ್ನು ವಹಿಸಲಿರುವ ಒಂದು ವ್ಯಕ್ತಿ ದಕ್ಷಿಣೇಶ್ವರಕ್ಕೆ ಬಂದಿತು. ಆತನೇ ಗದಾಧರನ ನಿಕಟಬಂಧುವೂ ಬಾಲ್ಯಸ್ನೇಹಿತನೂ ಆದ ಹೃದಯರಾಮ ಚಟ್ಟೋಪಾಧ್ಯಾಯ. ಹೃದಯನಿಗೆ ಆಗ ಹದಿನಾರು ವರ್ಷವಾಗಿತ್ತು. ಚಿಕ್ಕಂದಿನಿಂದಲೂ ತನ್ನ ಸೋದರಮಾವನ ವಿಚಿತ್ರಮಾನಸಿಕ ವ್ಯಾಪಾರಗಳನ್ನು ಕಂಡು ತಿಳಿದಿದ್ದನು. ಮಾವನ ಮಹಾದೈವಿಕ ವ್ಯಕ್ತಿತ್ವದಲ್ಲಿ ಅಸಾಧಾರಣ ಪೂಜ್ಯಬುದ್ಧಿಯನ್ನಿಟ್ಟಿದ್ದ ಆತನು ಶ್ರೀರಾಮಕೃಷ್ಣರನ್ನು ಯಾವಾಗಲೂ ನೆರಳಿನಂತೆ ಅನುಸರಿಸಿ ಸೇವಿಸಿದನು. ಆತನ ಪ್ರೇಮಮಯ ಶುಶ್ರೂಷೆಯಿಲ್ಲದಿದ್ದರೆ ಶ್ರೀರಾಮಕೃಷ್ಣರ ದೇಹವು ಕಠಿನಸಾಧನೆಗಳಿಂದ ಪಾರಾಗುವುದು ಬಹು ಕಷ್ಟವಾಗುತ್ತಿತ್ತು.

ದಿನ ಕಳೆದ ಹಾಗೆಲ್ಲ ಮಧುರಬಾಬುವಿಗೆ ಗದಾಧರನಲ್ಲಿ ಆಸಕ್ತಿಯೂ ಪೂಜ್ಯ ಬುದ್ಧಿಯೂ ಹೆಚ್ಚಿದುವು. ಹಣಸಂಪಾದನೆಯ ಹಾದಿ ತೋರಿಸಿದರೆ ಒಲ್ಲೆನೆನ್ನು ವಂತಹವನು ಮಹಾಪುರುಷನಾಗಿರಬೇಕೆಂದು ಆತನು ನಿರ್ಧರಿಸಿದನು. ಒಂದು ದಿನ ಗದಾಧರನು ತಾನೇ ತಯಾರಿಸಿ ಪೂಜಿಸಿದ ಶಿವಮೂರ್ತಿಯ ಸೌಂದರ್ಯ ದಿವ್ಯಭಾವಗಳನ್ನು ನೋಡಿ ಅದನ್ನು ಹೃದಯನಿಂದ ಕಾಣಿಕೆಯಾಗಿ ಪಡೆದು ರಾಸಮಣಿಗೆ ತೋರಿಸಿದನು. ಆಕೆಯೂ ಬಹುವಾಗಿ ಮೆಚ್ಚಿದಳು. ಹೇಗಾದರೂ ಮಾಡಿ ತೇಜಸ್ವಿಯಾದ ತರುಣನನ್ನು ಜಗನ್ಮಾತೆಯ ಪೂಜೆಗೆ ನಿಯಮಿಸಿದರೆ ತನಗೆ ಮಂಗಳವೆಂದು ಬಗೆದು ಅವಕಾಶವನ್ನೇ ಎದುರುನೋಡುತ್ತಿದ್ದನು. ಆದರೆ ಗದಾಧರನು ಅವನ ಕಣ್ಣಿಗೆ ಬೀಳದಂತೆ ನುಸುಳಿಕೊಂಡಿದ್ದನು. ಒಂದು ದಿನ ದೇವಮಂದಿರದ ಅಂಗಣದಲ್ಲಿ ಹೃದಯ ಗದಾಧರರು ಮಾತಾಡುತ್ತಿದ್ದಾಗ ಮಧುರನಾಥನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಗದಾಧರನಿಗೆ ಹೇಳಿ ಕಳುಹಿಸಿ ದನು. ಗದಾಧರನಿಗೆ ಎಂದಿನಂತೆ ಕಣ್ಮರೆಯಾಗುವುದಕ್ಕೆ ಅವಕಾಶ ದೊರಕಲಿಲ್ಲ. ಏನು ಮಾತಾಡಬೇಕೆಂದು ತಿಳಿಯದೆ ಅತ್ತಿತ್ತ ನೋಡತೊಡಗಿದನು.

ಜೊತೆಯಲ್ಲಿದ್ದ ಹೃದಯನು "ಇದೇನು, ಮಾವ! ಹಿಂದೆ ಮುಂದೆ ನೋಡು ತ್ತಿದ್ದೀಯೆ?" ಎಂದು ಕೇಳಿದನು.

"ಅವನಲ್ಲಿಗೆ ಹೋದಕೂಡಲೆ ಪೂಜಾರಿಕೆಲಸ ಮಾಡು ಅನ್ನುತ್ತಾನೆ" ಎಂದನು ಗದಾಧರನು.

"ಅದರಿಂದ ನಷ್ಟವೇನು? ಆತನೂ ಈಶ್ವರಭಕ್ತನು. ಭಕ್ತನ ಕೈಕೆಳಗೆ ಕೆಲಸಮಾಡಲು ದೋಷವೇ?"

"ಹಾಗಲ್ಲ; ನನಗೆ ಯಾರ ಹಂಗಿಗೂ ಯಾವ ಬಂಧನಕ್ಕೂ ಸಿಕ್ಕಿಕೊಳ್ಳುವ ಮನಸ್ಸಿಲ್ಲ. ಅಲ್ಲದೆ ಪೂಜಾರಿಯಾದರೆ ಒಡವೆವಸ್ತುಗಳನ್ನು ನೋಡಿಕೊಳ್ಳಬೇಕಾ ಗುತ್ತದೆ. ಆ ಕೆಲಸ ನನ್ನಿಂದ ಅಸಾಧ್ಯ. ನೀನದಕ್ಕೆ ಹೊಣೆಯಾಗುವುದಾದರೆ ಮಧುರಬಾಬುವಿನ ಬಳಿಗೆ ಹೋಗುತ್ತೇನೆ."

ಹೃದಯನಿಗೆ ಅಷ್ಟೇ ಬೇಕಾಗಿತ್ತು. ಒಡನೆಯೇ ಸಮ್ಮತಿಸಿದನು. ಗದಾ ಧರನೂ ಹೋದನು. ಮಧುರನಾಥನು ಬಹಳ ನಮ್ರತೆಯಿಂದ ಬೇಡಿಕೊಂಡು ದರ ಮೇರೆಗೆ ಗದಾಧರನು ದೇವಿಯ ಮೂರ್ತಿಯನ್ನು ಅಲಂಕರಿಸುವ ಸೇವೆಗೆ

ಒಪ್ಪಿಕೊಂಡನು. ಹೃದಯನು ಮಾವನಿಗೆ ಸಹಾಯಕನಾದನು. ಅವರಿಬ್ಬರೂ ಮುಂಜಾನೆಯಲ್ಲಿ ಎದ್ದು ನದಿಯಲ್ಲಿ ಸ್ನಾನಮಾಡಿ ತಮ್ಮ ತಮ್ಮ ಕರ್ತವ್ಯಗಳಲ್ಲಿ ಸುಖದಿಂದ ತನ್ಮಯರಾಗುವರು. ಯಾವಾಗಲೂ ಜೊತೆಯಾಗಲುತ್ತಿದ್ದಿಲ್ಲ. ಆದರೆ ಸಂಧ್ಯಾಸಮಯದಲ್ಲಿ ಗದಾಧರನು ಎಲ್ಲಿಯೋ ಮಾಯವಾಗಿ ಬಿಡುತ್ತಿದ್ದನು. "ಎಲ್ಲಿಗೆ ಹೋಗಿದ್ದೆ?" ಎಂದು ಕೇಳಿದರೆ, "ಎಲ್ಲಿಗೂ ಇಲ್ಲ; ಇಲ್ಲೇ ಇದ್ದೆ" ಎನ್ನುತ್ತಿದ್ದನು. ಮಾವನ ಮಾರ್ಗವನ್ನರಿತಿದ್ದ ಹೃದಯನು ಸುಮ್ಮನಾಗಿ ಬಿಡುತ್ತಿದ್ದನು.

ಒಂದು ದಿನ ಪೂಜಾರಿಯೊಬ್ಬನು ರಾಧಾಗೋವಿಂದ ಮಂದಿರದ ಶ್ರೀ ಕೃಷ್ಣವಿಗ್ರಹವನ್ನು ಗಂಗೆಯಲ್ಲಿ ಸ್ನಾನಮಾಡಿಸುತ್ತಿದ್ದಾಗ ಅದು ಕೈತಪ್ಪಿ ಕೆಳಗೆ ಬಿದ್ದು ಕಾಲುಮುರಿದು ಊನವಾಯಿತು. ಮುಂದೆ ಆ ವಿಗ್ರಹವು ಪೂಜೆಗೆ ಅರ್ಹವೋ ಅಲ್ಲವೋ ಎಂಬುದು ದೊಡ್ಡ ಸಮಸ್ಯೆಯಾಯಿತು. ರಾಸಮಣಿ ಮಥುರನಾಥರು ಶಾಸ್ತ್ರಿಗಳನ್ನು ವಿಚಾರಿಸಿದರು. ಅವರು ಶಾಸ್ತ್ರರೀತಿಯಾಗಿ ವಿಗ್ರಹವು ಪೂಜೆಗೆ ಅರ್ಹವಲ್ಲ ಎಂದು ನಿರ್ಣಯಮಾಡಿದರು. ಆದರೆ ಭಕ್ತಳಾದ ರಾಣಿಗೆ ಅನೇಕ ದಿನಗಳಿಂದ ಪೂಜಿಸಿದ ವಿಗ್ರಹವನ್ನು ಹೊಳೆಗೆ ಹಾಕಲು ಮನಸ್ಸೊಪ್ಪಲಿಲ್ಲ. ಕಡೆಗೆ ಗದಾಧರನ ಭಾವಸಮಾಧಿಗಳನ್ನು ಆಗಾಗ ಕಂಡು ಆತನು ದೈವಿಕಪುರುಷನೆಂದು ಗೊತ್ತುಮಾಡಿದ್ದ ಮಥುರನು ಆತನ ಅಭಿಪ್ರಾಯ ದಂತೆ ನಡೆಯುವುದು ಮಂಗಳವೆಂದು ಸೂಚಿಸಿದನು. ರಾಣಿಯೂ ಒಪ್ಪಿದಳು. ಗದಾಧರನು ಕಥೆಯೆಲ್ಲವನ್ನೂ ಆಲಿಸಿ "ಶಾಸ್ತ್ರಿಗಳ ನಿರ್ಣಯವು ಹಾಸ್ಯಾಸ್ಪದ ವಾದುದು. ರಾಣಿಯ ಅಳಿಯನು ಅಕಸ್ಮಾತ್ತಾಗಿ ಬಿದ್ದು ಕಾಲು ಮುರಿದುಕೊಂಡರೆ ರಾಣಿ ಮೊದಲಿನ ಅಳಿಯನನ್ನು ಹೊಳೆಗೆಸೆದು ಮತ್ತೊಬ್ಬನನ್ನು ಬದಲಿಗೆ ತರುವಳೇನು? ಕಾಲುಮುರಿದವನ ಶುಶ್ರೂಷೆಯೇ ಮುಖ್ಯ ಕರ್ತವ್ಯ, ಅವನನ್ನು ತಿರಸ್ಕರಿಸುವುದಲ್ಲ. ಅದರಂತೆಯೇ ವಿಗ್ರಹವನ್ನು ಸರಿಮಾಡಿಸಿ ಪೂಜಿಸಿದರಾಯ್ತು" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟನು. ಎಲ್ಲರೂ ಈ ತರ್ಕಕ್ಕೆ ಮಾರುಹೋಗಿ ನಿರ್ಣಯಕ್ಕೆ ಒಪ್ಪಿದರು. ಗದಾಧರನೇ ಸ್ವಲ್ಪವೂ ಊನತೋರದಂತೆ ಮೂರ್ತಿ ಯನ್ನು ಸರಿಮಾಡಿದನು. ರಾಣಿಯ ಆನಂದಕ್ಕೂ ಮಥುರನ ಹೆಮ್ಮೆಗೂ ಪಾರವೇ ಇರಲಿಲ್ಲ. ವಿಗ್ರಹವನ್ನು ಒಡೆದ ಪೂಜಾರಿ ಕೆಲಸದಿಂದ ನಿವೃತ್ತನಾದನು.

ಪೂಜೆಯ ಭಾರವು ಗದಾಧರನ ಮೇಲೆ ಬಿತ್ತು. ಜಗನ್ಮಾತೆಯನ್ನು ಅಲಂಕರಿಸುವ ಕೆಲಸವು ಹೃದಯನಿಗಾಯಿತು.

ಗದಾಧರನ ಪೂಜೆಯ ವಿಧಾನವೇ ಬೇರೊಂದು ಪರಿಯಾಗಿದ್ದುದು ಮಥುರ ಬಾಬುಗೆ ಬಹುಬೇಗನೆ ತಿಳಿಯಿತು. ಇತರ ಅರ್ಚಕರಿಗೆ ಯಾವುದು ಶಿಲಾ ವಿಗ್ರಹ ಮಾತ್ರವಾಗಿದ್ದಿತೋ ಅದು ಗದಾಧರನ ಭಾವಮಯ ದೃಷ್ಟಿಗೆ ಘನೀ ಭೂತವಾದ ಚೈತನ್ಯವಾಗಿತ್ತು. ಆತನು ಪೂಜೆಗೆ ಕುಳಿತನೆಂದರೆ ಬಾಹ್ಯಜಗತ್ತಿನ ಪ್ರಜ್ಞೆಯಿರುತ್ತಿರಲಿಲ್ಲ. ಕೆಲವುಸಾರಿ ನಿಷ್ಪಂದನಾಗಿ ಕುಳಿತನೆಂದರೆ ಯಾರು ಎಷ್ಟು ಕರೆದರೂ ಪ್ರತಿಳಿಯುತ್ತಿರಲಿಲ್ಲ ; ಮಂತ್ರಗಳನ್ನು ಉಚ್ಚರಿಸುವಾಗ ಮಂತ್ರೋಕ್ತ ದಿವ್ಯಭಾವಗಳು ಆತನಿಗೆ ಸಾಕಾರವಾಗಿ ಕಾಣುತ್ತಿದ್ದುವಂತೆ. ಅಂತಹ ಸಮಯ ಗಳಲ್ಲಿ ಅಗ್ನಿಭಿತ್ತಿಯೊಂದು ತನ್ನನ್ನೂ ದೇವಮಂದಿರವನ್ನೂ ಸುತ್ತುವರಿದಹಾಗೆ ತೋರುತ್ತಿತ್ತಂತೆ. ಅಲ್ಲದೆ ಕುಂಡಲಿನಿ ಸುಷುಮ್ನಾ ನಾಡಿಯ ಮಾರ್ಗವಾಗಿ ಸಹಸ್ರಾರಕ್ಕೆ ಏರುವುದು ಚೆನ್ನಾಗಿ ಅನುಭವವಾಗುತ್ತಿತ್ತಂತೆ. ಪೂಜಾಸಮಯ ದಲ್ಲಿ ಆತನ ದೇಹ ಸಮಸ್ತವೂ ತಪ್ತಕಾಂಚನವರ್ಣವಾಗಿ ಮುಖವು ತೇಜಸ್ಸಿನಿಂದ ರಂಜಿಸುತ್ತಿತ್ತು. ಅಲೌಕಿಕ ಅರ್ಚಕನ ಮಹಿಮಾಮಯ ಸಾನ್ನಿಧ್ಯದಲ್ಲಿ ನೆರೆದ ಭಕ್ತರ ಹೃದಯಕಮಲಗಳಲ್ಲಿ ನವಚೇತನ ಸಂಚಾರವಾಗುತ್ತಿತ್ತು.

ತಮ್ಮನು ಪೂಜಾರಿಯ ಕೆಲಸಕ್ಕೆ ಒಪ್ಪಿಕೊಂಡುದರಿಂದ ರಾಮಕುಮಾರನು ಬಲು ಹಿಗ್ಗಿದನು. ತನ್ನ ಸಂಸಾರಕ್ಕೆ ಆದಾಯ ಹೆಚ್ಚುವುದೆಂದು ಸಮಾಧಾನ ವಾಯಿತು. ಆದರೆ ತಮ್ಮನು ಎಂದಿಗಿಂತಲೂ ಹೆಚ್ಚಾಗಿ ನಿರ್ಜನತಾಪ್ರೇಮಿ ಯಾದುದೂ ವ್ಯಾವಹಾರಿಕ ವಿಚಾರಗಳಲ್ಲಿ ಉದಾಸೀನನಾದುದೂ ಆತನಿಗೆ ಗೊತ್ತಾಗದೆ ಇರಲಿಲ್ಲ. ಜನರೆಲ್ಲ ಭಜನೆ ಉತ್ಸವಗಳಲ್ಲಿ ನೆರೆದರೆ ಗದಾಧರನು ಒಂಟಿಯಾಗಿ ಚಿಂತಾಮಗ್ನನಾಗಿ ಗಂಗೆಯ ತೀರದಲ್ಲಿ ತಿರುಗಾಡುತ್ತಿರುವನು. ಪ್ರಾತಃಕಾಲ ಸಂಧ್ಯಾಕಾಲಗಳಲ್ಲಿ ದೇವಾಲಯದ ಆರಾಧನೆಗಳಲ್ಲಿ ಭಾಗಿಯಾಗದೆ ಸಮೀಪದ ತೋಟದಲ್ಲಿ ಮರಗಳ ಬುಡದಲ್ಲಿ ಕುಳಿತು ಬಾಹ್ಯವಿಸ್ಮೃತನಾಗಿ ಏನನ್ನೋ ಧ್ಯಾನಮಾಡುವನು. ಕಾಮಾರಪುಕುರದ ಬಾಲಕನಲ್ಲಿದ್ದ ವಿನೋದ ಲೀಲೆಗಳು ಮಾಯವಾಗಿ ಧಾರ್ಮಿಕ ಗಾಂಭೀರ್ಯವು ಮೈದೋರಿತ್ತು. ಇವುಗಳನ್ನೆಲ್ಲಾ ನೋಡಿದ ರಾಮಕುಮಾರನಿಗೆ ತಮ್ಮನು ಸದ್ಯಕ್ಕೆ ಕೈಕೊಂಡ

ಕೆಲಸದಲ್ಲಿ ಶಾಶ್ವತವಾಗಿರುವನೆಂಬ ನಿಚ್ಚಿಕೆ ಇರಲಿಲ್ಲ. ಆದ್ದರಿಂದ ಹೇಗಾದರೂ ಮಾಡಿ ಏನಾದರೊಂದು ಹವ್ಯಾಸವನ್ನು ಹಚ್ಚಿ ಆತನ ಮನಸ್ಸನ್ನು ಲೌಕಿಕದ ಕಡೆಗೆ ಎಳೆಯಬೇಕೆಂದು ಹವಣಿಸಿ ಆತನಿಗೆ ಕಾಳೀಪೂಜೆಯ ವಿಧಾನವನ್ನು ಕಲಿಸಲು ನಿಶ್ಚಯಿಸಿದನು. ಎಲ್ಲಕ್ಕೂ ಮೊದಲು ಶಕ್ತಿಮಂತ್ರೋಪದೇಶವಾಗಬೇಕಾಗಿತ್ತು. ಆ ಕಾಲದಲ್ಲಿ ಶಕ್ತಿಸಾಧಕನೆಂದು ವಂಗದೇಶದಲ್ಲೆಲ್ಲ ಪ್ರಸಿದ್ಧನಾಗಿದ್ದ ಕೇನರಾಮ ಭಟ್ಟಾಚಾರ್ಯನಿಂದ ಗದಾಧರನಿಗೆ ಮಂತ್ರೋಪದೇಶ ಮಾಡಿಸಿದನು. ತರು ವಾಯ ರಾಮಕುಮಾರನು ಆಗಾಗ್ಗೆ ಜಗನ್ಮಾತೆಯ ಪೂಜೆಯನ್ನು ತಮ್ಮನಿಗೆ ವಹಿಸಿ ತಾನು ರಾಧಾಗೋವಿಂದನ ಪೂಜೆಗೆ ಹೋಗುತ್ತಿದ್ದನು. ಇದು ಮಥುರ ನಾಥನ ಕಣ್ಣಿಗೂ ಒಂದೆರಡು ಸಾರಿ ಬಿತ್ತು. ಆತನು ಗದಾಧರನನ್ನು ಜಗನ್ಮಾತೆಯ ಅರ್ಚಕನಾಗುವಂತೆ ಕೇಳಿಕೊಂಡನು. ಅದಕ್ಕೆ ಗದಾಧರನು "ಮಹಾಶಯ, ನನಗೆ ಪೂಜೆಯ ವಿಧಾನವೇ ಸರಿಯಾಗಿ ಬರುವುದಿಲ್ಲ. ಹೀಗಿರಲು ಶಾಸ್ತ್ರೀಯ ವಾಗಿ ಮಾಡಬೇಕಾದ ಪವಿತ್ರಕಾರ್ಯವು ನನ್ನಿಂದ ಹೇಗೆ ತಾನೇ ಸಾಗು ವುದು?" ಎಂದನು. ಅದಕ್ಕೆ ಮಥುರನು "ತಮಗೆ ಯಾವ ಶಾಸ್ತ್ರವಿಧಿಯೂ ಅವಶ್ಯವಿಲ್ಲ. ತಮ್ಮ ಮಹಾಭಕ್ತಿಯೊಂದೇ ಸಾಕು ದೇವಿಯ ತೃಪ್ತಿಗೆ. ತಾವು ಏನನ್ನು ಹೇಗೆ ನಿವೇದಿಸಿದರೂ ಜಗದಂಬೆ ಸಂತೋಷದಿಂದ ಸ್ವೀಕರಿಸುತ್ತಾಳೆ. ತಮ್ಮ ಪೂಜೆಯಿಂದ ಸಂತೃಪ್ತಳಾದ ಮಹೇಶ್ವರಿ ಈ ವಿಗ್ರಹದಲ್ಲಿ ಆನಂದದಿಂದ ಆವಿರ್ಭವಿಸುವಳು" ಎಂದನು. ಶ್ರೀಮಂತನ ಅಕೃತ್ರಿಮವಾದ ಉತ್ತರವು ಗದಾಧರನ ಮನಸ್ಸನ್ನು ಸೂರೆಗೊಂಡಿತು. ಆದ್ದರಿಂದ ಸಮ್ಮತಿಸಿದನು. ರಾಮ ಕುಮಾರನಿಗೆ ರಾಧಾಗೋವಿಂದನ ಮಂದಿರಕ್ಕೆ ವರ್ಗವಾಯಿತು. ಅದರಿಂದ ಆತನಿಗೆ ಮಹಾನಂದವೂ ಆಯಿತು.

ಆದರೆ ರಾಮಕುಮಾರನಿಗೆ ರಾಧಾಗೋವಿಂದನ ಪೂಜೆ ಮಾಡುವ ಪುಣ್ಯವು ಬಹುಕಾಲ ಲಭಿಸಲಿಲ್ಲ. ವಯಸ್ಸಾಗಿದ್ದ ಆತನ ಮೈಯಲ್ಲಿ ಅಸ್ವಸ್ಥತೆ ಅಂಕು ರಿಸಿತು. ಹವ ಬದಲಾವಣೆಗಾಗಿಯೂ ಸ್ವಲ್ಪ ದಿನಗಳ ವಿಶ್ರಾಂತಿಗಾಗಿಯೂ ಆತನು ತನ್ನ ಬಾಲ್ಯದ ಬೀಡಾದ ಕಾಮಾರಪುಕುರಕ್ಕೆ ಹೊರಟುಹೋದನು. ಹೋದವನು ಹಿಂದಿರುಗಲಿಲ್ಲ ; ಕಾಲವಾದನು.

ಅಣ್ಣನ ನಿಧನವಾರ್ತೆ ಗದಾಧರನ ಎದೆಯಲ್ಲಿ ಸಿಡಿಲಿನಂತೆ ಎರಗಿತು.

ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಆತನಿಗೆ ಅಣ್ಣನೇ ಸರ್ವಸ್ವವಾಗಿದ್ದನು. ಆದ್ದರಿಂದ ಪ್ರೀತಿಯ ಸಹೋದರನ ಸಾವು ತಮ್ಮನ ಕಣ್ಣಿನಲ್ಲಿ ಹೊಳೆ ಹರಿಸಿಬಿಟ್ಟಿತು. ಲೋಕದ ನಶ್ವರತೆಯಲ್ಲಿದ್ದ ನಂಬುಗೆ ಮತ್ತೂ ದೃಢತರವಾಯಿತು. ಜನನಮರಣ ಸುಖದುಃಖಗಳನ್ನು ಉತ್ತರಿಸಿ ಆನಂದಾಮೃತವನ್ನು ಸವಿಯದಿದ್ದರೆ ಮಾನವ ಜನ್ಮವು ವ್ಯರ್ಥವೆಂದು ತೋರಿತು. ಈಶ್ವರ ಪರವಾದ ವ್ಯಾಕುಲತೆ ನೂರ್ಮಡಿಯಾಯಿತು. ಚಿಂತೆ ಅಗಾಧವಾಯಿತು. ಸಾಹಸವು ಕಂಕಣಧಾರಿಯಾಯಿತು. ಮಹಾಹಂಸವು ಸರ್ವತೋಪಮಭೀಷಣ ತರಂಗಮಯವಾದ ಅನಂತವಾದ ಸರ್ವದಾವಿಕ್ಷುಬ್ಧ ಸಂಸಾರಸಮುದ್ರವನ್ನು ಹಾರಿ ದಾಟಲೆಂದು ತನ್ನ ಶ್ವೇತವಿಶಾಲ ಪಕ್ಷವಿಸ್ಫಾಲನೆಗೈದು ಮಹಾ ಯಾತ್ರೆಗೆ ಸಿದ್ಧವಾಯಿತು.

---



ದಕ್ಷಿಣೇಶ್ವರ

# ೩ ಚೈತ್ರಯಾತ್ರೆ

ಯಾವಾಗಲೂ ತುಂಬುಹೊನಲಾಗಿ ಹರಿಯುವ ಗಂಗೆಯ ಎಡದಡದಲ್ಲಿ, ಕಲ್ಕತ್ತೆಗೆ ನಾಲ್ಕುಮೈಲಿ ದೂರ ಉತ್ತರ ದಿಕ್ಕಿನಲ್ಲಿ, ನಾಗರಿಕತೆಯ ಅಶ್ಲೀಲ ಅಟ್ಟಹಾಸದ ಗಲಿಬಿಲಿ ತಟ್ಟದ ಪವಿತ್ರಮೌನಮುದ್ರಿತ ರಮ್ಯಪ್ರದೇಶದಲ್ಲಿ, ಉನ್ನತ ನಿಬಿಡವಾಗಿ ಬೆಳೆದ ವಿವಿಧ ತರುಸಮೂಹದ ಮಧ್ಯೆ ದಕ್ಷಿಣೇಶ್ವರದ ಮಹಾ ಕಾಳಿಕಾದೇವಾಲಯವು ಧರ್ಮದ ವೈಜಯಂತಿಯಂತೆ ಧೀರಗಂಭೀರವಾಗಿ ನಿಂತಿದೆ. ಯಾತ್ರಿಕನು ನೌಕೆಯಿಂದಿಳಿದು ಹೊಳೆಗೆ ಕಾಲುಚಾಚಿಕೊಂಡಂತಿರುವ ಸುವಿಸ್ತೀರ್ಣ ಸೋಪಾನಶ್ರೇಣಿಯನ್ನು ಏರಿ ಪೂರ್ವಮುಖವಾಗಿ ಹೋದರೆ ದೇವಾಲಯಕ್ಕೆ ಹೆಬ್ಬಾಗಿಲಂತಿರುವ ಚಂದ್ರಶಾಲೆಗೆ ಮುಟ್ಟುತ್ತಾನೆ. ಚಂದ್ರ ಶಾಲೆಯ ಇಕ್ಕೆಲದಲ್ಲಿಯೂ ಆರಾರು ಶಿವಮಂದಿರಗಳು ಸಾಲಾಗಿ ಎದ್ದಿವೆ. ಚಂದ್ರಶಾಲೆಯನ್ನು ದಾಟಿದರೆ ಇಟ್ಟಿಗೆ ಹಾಸಿದ ವಿಸ್ತಾರವಾದ ಅಂಗಣವು ಸಿಕ್ಕುತ್ತದೆ. ಅಂಗಣದ ನಡುವೆ ಪಕ್ಕಪಕ್ಕದಲ್ಲಿ ಪಂಚ ಕಲಶಗಳಿಂದ ಕೂಡಿರುವ ಎರಡು ದೇವಮಂದಿರಗಳಿವೆ. ಉತ್ತರ ದಿಕ್ಕಿನಲ್ಲಿರುವುದು ರಾಧಾಕಾಂತನ ಗುಡಿ; ದಕ್ಷಿಣಕ್ಕಿರುವುದು ಜಗನ್ಮಾತೆಯಾದ ಕಾಳಿಯ ಗುಡಿ. ಕಾಳಿಯ ಗುಡಿ ಸುಂದರ ವಾಗಿದೆ. ಶ್ವೇತ ಕೃಷ್ಣ ಮರ್ಮರಪ್ರಸ್ತರಾವೃತವಾದ ಮಂದಿರತಲ ; ಸೋಪಾನ ಯುಕ್ತವಾದ ಉಚ್ಚ ವೇದಿಕೆ ; ವೇದಿಕೆಯ ಮೇಲೆ ಬೆಳ್ಳಿಯಿಂದ ಮಾಡಿದ ಸಾವಿರ ಎಲೆಯ ತಾವರೆ. ಆ ರೌಪ್ಯಮಯ ಸಹಸ್ರದಳ ಮಹಾಪದ್ಮದ ಮೇಲೆ ತೆಂಕಲಿಗೆ ತಲೆಯಾಗಿಯೂ ಬಡಗಲಿಗೆ ಕಾಲಾಗಿಯೂ ಬಿಳಿಯ ಹಾಲುಗಲ್ಲಿನ ಮಹಾ ಶಿವಮೂರ್ತಿ ಅವ್ಯಕ್ತವೂ ನಿರ್ಗುಣವೂ ಅಕರ್ಮವೂ ನಿಷ್ಕಲಂಕವೂ ಚಿರ ಸುಪ್ತವೂ ಚಿರಶಾಂತವೂ ಸತ್ತ್ವಪೂರ್ಣವೂ ಆಗಿರುವ ಪರಬ್ರಹ್ಮದ ಪ್ರತಿಕೃತಿ ಯಾಗಿ ಶವದಂತೆ ಬಿದ್ದಿದೆ. ಆ ಶವಶಿವಮೂರ್ತಿಯ ಎದೆಯ ಮೇಲೆ ವ್ಯಕ್ತವೂ ಗುಣಮಯವೂ ಕರ್ಮಮಯವೂ ಚಿರಜಾಗ್ರತವೂ ರಜೋಗುಣಪೂರ್ಣವೂ ಆಗಿರುವ ಮಾಯೆಯ ಪ್ರತಿನಿಧಿಯಾಗಿ ನೀಲಪ್ರಸ್ತರ ನಿರ್ಮಿತ ತ್ರಿನಯನಿಯಾದ

ಸುಂದರ ಭವತಾರಿಣಿ ವಿವಿಧ ವಸ್ತ್ರಭೂಷಣ ಭೂಷಿತೆಯಾಗಿ ಸ್ವರ್ಣನಿರ್ಮಿತ ರುಂಡಮಾಲಿನಿಯಾಗಿ ನರಕರಮಾಲಾಕಟಿಬಂಧನ ರಂಜಿತೆಯಾಗಿ ಅಭಯಹಸ್ತೆಯಾಗಿ ನಾಟ್ಯಭಂಗಿಯಿಂದ ನಿಂತಿದ್ದಾಳೆ. ಆಕೆಯೇ ಜಗದ್ವಂದ್ಯ ಶ್ರೀರಾಮಕೃಷ್ಣರು ಆರಾಧಿಸಿದ ಜಗನ್ಮಾತೆ.

ದೇವಾಲಯದ ನಾಲ್ಕು ದಿಕ್ಕುಗಳಲ್ಲಿಯೂ ಮಹಾಪ್ರಾಕಾರಗಳಿವೆ. ಅವುಗಳೆಲ್ಲ ವಾಸಯೋಗ್ಯವಾದ ಕೊಟಡಿಗಳಿಂದ ಕೂಡಿವೆ. ಅಂಗಣದ ಒಂದು ಪಾರ್ಶ್ವದಲ್ಲಿ ನಾಟ್ಯಮಂದಿರವೂ ಬಲಿಸ್ಥಾನವೂ ಇವೆ. ಗುಡಿಯ ಉತ್ತರ ದಿಕ್ಕಿನ ಪ್ರಾಕಾರದ ಪಶ್ಚಿಮ ಮೂಲೆಯಲ್ಲಿ ಒಂದು ಪ್ರಶಸ್ತವಾದ ಕೋಣೆಯಿದೆ. ಅದೇ ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಸಾಧನ ಮತ್ತು ಸಾಧನೋತ್ತರ ಜೀವಮಾನದಲ್ಲಿ ವಾಸಮಾಡಿದ ಕೋಣೆ.

ಗುಡಿಗೆ ಬಡಗಲಲ್ಲಿ ವನಸದೃಶವಾದ ಒಂದು ಉದ್ಯಾನವಿದೆ. ಇದಕ್ಕೆ ಪಂಚವಟಿ ಎಂದು ಹೆಸರು. ಅಲ್ಲಿ ಜನಜೀವನದ ಗಡಿಬಿಡಿಯಿಲ್ಲ. ವನ್ಯಶಾಂತಿ ತುಂಬಿದೆ. ಆಲ, ಅರಳಿ, ಬೇವು, ನೆಲ್ಲಿ, ಬಿಲ್ವ ಮೊದಲಾದ ಮರಗಳು ಒಂದರೊಡನೆ ಒಂದು ಹೆಣೆದುಕೊಂಡು ನಿಬಿಡಪರ್ಣವಿತಾನವಾಗಿ ಒಂದು ಎಲೆವನೆಯಂತಿದೆ. ಆ ಮರಗಳ ಬುಡದಲ್ಲಿ ಸೋಪಾನಯುಕ್ತವಾದ ವೇದಿಕೆಯೊಂದು ಸುತ್ತಲೂ ಹಬ್ಬಿದೆ. ಅದು ಪರಮಹಂಸರ ಸಾಧನೆಗೆ ಮಂಗಳರಂಗವಾಗಿತ್ತು. ಅಂತೂ ದಕ್ಷಿಣೇಶ್ವರವು ಸ್ವಾಭಾವಿಕ ಸನ್ನಿವೇಶದಿಂದಲೂ ತರುಲತೆಗಳ ಸಹವಾಸದಿಂದಲೂ ಪುಣ್ಯಮಯಿಯಾದ ಭಾಗೀರಥಿಯ ಪಾವನ ಸಾನ್ನಿಧ್ಯದಿಂದಲೂ ಲೋಕಪೂಜಿತರೂ ಸರ್ವಧರ್ಮ ಸಮನ್ವಯಾಚಾರ್ಯರೂ ಯುಗಾವತಾರರೂ ಆದ ಶ್ರೀರಾಮಕೃಷ್ಣ ಪರಮಹಂಸರ ಜೀವನ ಮಹಾಲೀಲೆಯ ಸ್ಮೃತಿಸಂಗದಿಂದಲೂ ಯಾತ್ರಿಕರಿಗೆ ಒಂದು ಮಹಾ ಆನಂದ ನಿಕೇತನವಾಗಿದೆ.

ಪರಮಹಂಸರ ಆಧ್ಯಾತ್ಮಿಕ ಜೈತ್ರಯಾತ್ರೆಯನ್ನು ವರ್ಣಿಸುವ ಮೊದಲು ಸಾಧನೆಯ ವಿಚಾರವಾಗಿ ಒಂದೆರಡು ವಿಷಯಗಳನ್ನು ತಿಳಿದುಕೊಳ್ಳುವುದು ಲೇಸು. ವ್ಯಕ್ತಿ ಆದರ್ಶಸಿದ್ಧಿಗಾಗಿ ಮಾಡುವ ಸಾಹಸಪ್ರಯತ್ನಗಳಿಗೆ ಸಾಧನ ಎನ್ನಬಹುದು. ಆಧ್ಯಾತ್ಮಿಕ ಜೀವನಕ್ಕೆ ತುತ್ತತುದಿಯ ಗಂತವ್ಯಲಕ್ಷ್ಯವೆಂದರೆ ಪರಮ ಸತ್ಯ. ಆ ಸತ್ಯಸಾಕ್ಷಾತ್ಕಾರಕ್ಕಾಗಿ ಸಾಧಕನು ಕೈಕೊಳ್ಳುವ ಯಾತ್ರೆಯೇ

ಸಾಧನೆ. ಶ್ರೀರಾಮಕೃಷ್ಣರ ವಚನದಂತೆ ಸರ್ವಭೂತಗಳಲ್ಲಿಯೂ ಬ್ರಹ್ಮದರ್ಶನ ಮಾಡುವುದೇ ಸಾಧನೆಯ ಪರಮಾವಧಿ. ಶಾಸ್ತ್ರಗಳು ಹೇಳುತ್ತವೆ: ಎಲ್ಲವೂ ಬ್ರಹ್ಮ. ಸ್ಥೂಲ, ಸೂಕ್ಷ್ಮ, ಚೇತನ, ಅಚೇತನ—ಕಲ್ಲುಮಣ್ಣುಗಳಿಂದ ಹಿಡಿದು ದೇವದೇವತೆಗಳವರೆಗೆ ಎಲ್ಲವೂ ಅದ್ವಯ ಬ್ರಹ್ಮವಸ್ತು. ಇಂದ್ರಿಯಗಳಿಗೆ ತೋರುವ ಭೇದವೆಲ್ಲ ಅಜ್ಞಾನಜನ್ಯವಾದುದು. ಜ್ಞಾನೋದಯವಾದರೆ ನಿಜವು ಗೊತ್ತಾಗುತ್ತದೆ. ಅವಿದ್ಯೆಯ ಯವನಿಕೆ ಜಗತ್ತನ್ನು ಆವರಿಸಿದೆ. ಆ ಅವಿದ್ಯೆ ಅನಾದಿಯಾದುದು. ಎಂದರೆ ಕಾಲಭಾವವೇ ಅವಿದ್ಯೆಯ ಶಿಶುವಾಗಿರುವುದರಿಂದ ಅವಿದ್ಯೆ ಕಾಲಾತೀತವಾದುದು. ಅದು ಹೇಗೆ ಯಾವಾಗ ಪ್ರಾರಂಭವಾಯಿತೆಂದು ಯಾರೂ ಹೇಳಲಾರರು. ಮಾಯೆಯ ಸ್ವರೂಪವು ನಮ್ಮ ಈ ಚತುರ್ಮುಖ ಜಗತ್ತಿನ ಜ್ಞಾನ ಸೂತ್ರಗಳಿಗೆ ಸಿಲುಕುವುದಿಲ್ಲ. ಆದ್ದರಿಂದ ಅದು ಅಪ್ರಮೇಯವಾದುದು; ಅನಿರ್ವಚನೀಯವಾದುದು. ಕನಸು ನನಸಿನಲ್ಲಿ ಅಳಿಸಿ ಹೋಗಿ ಮಿಥ್ಯೆಯೆಂದು ತೋರುವಂತೆ ಈ ಮಾಯಾಮುದ್ರಿತ ಮಹಾವಿಶ್ವವು ಜಾಗ್ರದತೀತವಾದ ತುರೀಯಾವಸ್ಥೆಯಲ್ಲಿ ಅಥವಾ ನಿರ್ವಿಕಲ್ಪ ಸಮಾಧಿಯಲ್ಲಿ ಇಲ್ಲವಾಗಿ ಅದ್ವಯವೂ ಸಚ್ಚಿದಾನಂದವೂ ಆಗಿರುವ ಬ್ರಹ್ಮದ ಅನುಭವವಾಗುತ್ತದೆ. ಆ ಸಚ್ಚಿದಾನಂದ ಸಾಕ್ಷಾತ್ಕಾರವೇ ಮಾನವನ ಚರಮಗಮ್ಯ. ಆದ್ದರಿಂದ ಸತ್ಯದ ಜ್ಯೋತಿ ಕಾಣಬೇಕಾದರೆ ಮಿಥ್ಯಾಕಾರಿಯಾದ ಅವಿದ್ಯೆಯ ಅಂಧಕಾರವು ತೊಲಗಬೇಕು. ಕತ್ತಲೆ ಹರಿಯುವಂತೆ ಮಾಡಲು ಎರಡು ಹಾದಿಗಳಿವೆ. ಒಂದನೆಯದು ಜ್ಞಾನಮಾರ್ಗ; ಎರಡನೆಯದು ಭಕ್ತಿಮಾರ್ಗ. ಜ್ಞಾನಮಾರ್ಗವು ವಿಚಾರಪೂರ್ಣವಾದುದರಿಂದ ಮೇಧಾವಿಗಳಿಗೆ ಮಾತ್ರವೇ ಸಾಧ್ಯ. ಭಕ್ತಿಮಾರ್ಗವು ಭಾವಮಯವಾದುದರಿಂದ ಸಾಧಾರಣ ಮಾನವರಿಗೂ ಸುಲಭವಾದುದು. ಮೊದಲನೆಯದು 'ನೇತಿನೇತಿ'ಯ ಮಾರ್ಗ, ಎರಡನೆಯದು 'ಇತಿ ಇತಿ'ಯ ಮಾರ್ಗ. ಈ ಎರಡು ದಾರಿಗಳೂ ಕಟ್ಟಕಡೆಗೆ ಒಂದೇ ನಿಲಯಕ್ಕೆ ಹೋಗುತ್ತವೆ. ಹೀಗೆ ನಾಮರೂಪ ಕಾಲದೇಶ ನಿಮಿತ್ತಾದಿಗಳಿಂದ ಬದ್ಧವಾದ ಮಾಯಾಜಗತ್ತನ್ನು ಉತ್ತರಿಸಿ ಅತೀಂದ್ರಿಯ ಬ್ರಹ್ಮವಸ್ತುವನ್ನು ಪರಿಚಯ ಮಾಡಿಕೊಳ್ಳಬೇಕಾದರೆ ಅವಶ್ಯವಾಗಿ ಬೇಕಾಗುವ ಸಲಕರಣೆ ಸಾಹಸಗಳಿಗೆ ವೇದಶಾಸ್ತ್ರಗಳು "ಸಾಧನ" ಎಂಬ ಹೆಸರನ್ನು ಕೊಟ್ಟಿವೆ. ಅಂತಹ ಸಾಧನೆ

ಯನ್ನು ಕೈಕೊಳ್ಳುವವನೇ ಸಾಧಕನು. ವೈರಾಗ್ಯವು ಸಾಧಕನು ಏರಬೇಕಾದ ಮೊದಲನೆಯ ಮೆಟ್ಟಲು. ವೈರಾಗ್ಯವೆಂದರೆ ರಾಗವಿಲ್ಲದಿರುವುದು; ಎಂದರೆ ನಿಷ್ಕಾಮತೆ, ನಿಸ್ವಾರ್ಥತೆ ಮತ್ತು ಸಮತೆ. ಲೋಕದ ಪ್ರಲೋಭನೆಗಳು ಸಾಧಕನಿಗೆ ದೊಡ್ಡ ಅಡಚಣೆ. ಅವುಗಳಿದ್ದರೆ ಆದರ್ಶದ ಪರವಾಗಿ ಏಕಾಗ್ರತೆ ಅಸಾಧ್ಯ. ಒಮ್ಮನಸ್ಸಿಲ್ಲದಿದ್ದರೆ ಸಾಮಾನ್ಯ ವಿಚಾರಗಳಲ್ಲಿಯೇ ಜಯಹೊಂದುವುದು ಕಠಿನ ಎಂದ ಮೇಲೆ ಅತ್ಯಮೂಲ್ಯವಾದ ಸತ್ಯವಾದರೂ, ದೊರಕುವುದು ಹೇಗೆ? ಜೊತೆಗೆ ನಿತ್ಯಾನಿತ್ಯ ವಿವೇಕ ವಿಚಾರವೂ ಸತ್ಯಸಂದರ್ಶನಕ್ಕಾಗಿ ತೀವ್ರ ವ್ಯಾಕುಲತೆಯೂ ಬೇಕು. ಇವುಗಳಿಂದ ಒಡಗೂಡಿದ ಸಾಧಕನು ಹತಾಶನಾಗದೆ ಬೇಸರ ಪಡದೆ ಉದಾಸೀನನಾಗದೆ ಅವಿಶ್ರಾಂತ ಸಾಹಸ ಮಾಡಿದರೆ ತುತ್ತತುದಿಯಲ್ಲಿ ಲಭಿಸುವುದು ಸಿದ್ಧಿ.

ಸಿದ್ಧಿ ಬೇಕೆನ್ನುವ ಯಾರಿಗೂ ಸಾಧನೆ ತಪ್ಪಿದುದಲ್ಲ. ಅವತಾರಪುರುಷರಿಗೂ ತಪ್ಪಿದುದಲ್ಲ. ಈಶ್ವರನು ಜಗತ್ತಿನಲ್ಲಿ ಮನುಷ್ಯ ಶರೀರಧಾರಣೆ ಮಾಡಿ ಜನ್ಮವೆತ್ತಿದ ಮೇಲೆ ಮನುಷ್ಯನಂತೆಯೇ ಆಚರಿಸಿ ಸಾಧನೆ ಮಾಡಬೇಕು. ಇಲ್ಲದಿದ್ದರೆ ಆತನು ಮಾರ್ಗದರ್ಶಿಯಾಗಲಾರನು. ಜನರು ಆತನನ್ನು ಅನುಸರಿಸುವ ಬದಲು ಆಶ್ಚರ್ಯಪಟ್ಟು ಕೈಮುಗಿದು ಸುಮ್ಮನಾಗುವರು. ಏಕೆಂದರೆ, ಸರ್ವಶಕ್ತನಿಗೆ ಎಲ್ಲವೂ ಸಾಧ್ಯ; ನಾವು ಸಾಧಾರಣ ಮಾನವರು; ನಾವು ಅವನಂತೆ ಮಾಡುವುದು ದುಸ್ಸಾಧ್ಯ ಎಂದು ಬಿಡುತ್ತಾರೆ. ಪರಮಹಂಸರು ಹೀಗೆ ಹೇಳಿದ್ದಾರೆ: "ದೇವರು ನರನಾಗಿ ಬಂದ ಮೇಲೆ ನರನಂತೆಯೇ ಸುಖದುಃಖಗಳನ್ನು ಅನುಭವಿಸಿ, ಮಾನವನ ಸಮಸ್ಯೆಗಳನ್ನು ಮಾನವನಂತೆಯೇ ಸಾಹಸಪಟ್ಟು ಬಿಡಿಸಿ, ಮನುಷ್ಯನಂತೆಯೇ ಕಷ್ಟಪಟ್ಟು ತಪಸ್ಸುಮಾಡಿ ಮುಕ್ತನಾಗಬೇಕು." ಇಲ್ಲದಿದ್ದರೆ ಅವನ ಆಗಮನದಿಂದ ಲೋಕಕ್ಕಾಗುವ ಪ್ರಯೋಜನವೆಲ್ಲಿಯದು?

ಅನೇಕ ಅವತಾರಪುರುಷರ ಜೀವನಚರಿತ್ರೆಗಳನ್ನು ಬರೆದ ಭಕ್ತರು ಅವರ ಸಾಧನೆಯ ಕಥಾಭಾಗವನ್ನು ಕಣ್ಣಿಗೆ ಕಾಣದಂತೆ ನುಂಗಿಬಿಟ್ಟಿದ್ದಾರೆ. ಅದಕ್ಕೆ ಭಕ್ತರ ದುರ್ಬಲತೆಯೇ ಕಾರಣ. ಭಗವಂತನಲ್ಲಿ ಮನುಷ್ಯ ಸುಲಭವಾದ ದುರ್ಬಲತೆ, ಅಶಕ್ತಿ ಮತ್ತು ಹೋರಾಟಗಳನ್ನು ಕಾಣಿಸಲು ಅಂಜಿಯೋ ಅಥವಾ ಆರೋಪಿಸಲು ಇಷ್ಟವಿಲ್ಲದೆಯೋ ಅಥವಾ ಅವತಾರದ ಮಹತ್ತಿಗೆ ಕುಂದು ಬರ

ಬಹುದು ಎಂಬ ಭಯದಿಂದಲೋ ಹಾಗೆ ಮಾಡಿದ್ದಾರೆ. ಆದರೆ ಇವೆಲ್ಲವೂ ನಿರಾಧಾರವಾದುವು. ಭಗವಂತನ ಐಶ್ವರ್ಯ ಮಾತ್ರದಿಂದ ಮೋಹಿತವಾದ ಭಕ್ತಿ ಉತ್ತಮ ಭಕ್ತಿಯಲ್ಲ. ಉತ್ತಮ ಭಕ್ತಿ ಅಹೇತುಕವಾದುದು. ಯಶೋದೆಯ ವಾತ್ಸಲ್ಯಭಾವವೂ ಗೋಪಿಯರ ಮಧುರಭಾವವೂ ಶ್ರೀ ಕೃಷ್ಣನ ಶಕ್ತಿ ಐಶ್ವರ್ಯಗಳ ಮೇಲೆ ನಿಂತಿರಲಿಲ್ಲ.

ಅವತಾರಪುರುಷರ ಸಾಧನವು ಬರಿಯ ನಟನೆಯೂ ಅಲ್ಲ. ಅದನ್ನು ಲೀಲೆ ಎಂದು ಕರೆದರೆ ಮಾನವನ ಸಾಧನೆಯನ್ನೂ ಲೀಲೆ ಎಂದು ಕರೆಯಬೇಕಾಗುತ್ತದೆ. ಏಕೆಂದರೆ, ಸಮಸ್ತ ಜಗತ್ತೇ ಒಂದು ಮಹಾಲೀಲೆ. ಬ್ರಹ್ಮದೃಷ್ಟಿಯಿಂದ ಸುಖ, ದುಃಖ, ತಪಸ್ಸು, ಸಾಧನೆ, ಮುಕ್ತಿಸಂಪಾದನೆ ಎಲ್ಲವೂ ಬರಿಯ ಲೀಲೆ ಅಥವಾ ತೋರಿಕೆ. ಆದ್ದರಿಂದ ಅವತಾರಪುರುಷನ ಕಂಬನಿ ಸಾಧಾರಣ ಮಾನವನ ಕಣ್ಣೀರಿನಷ್ಟೇ ಬಿಸಿಯಾಗಿರುತ್ತದೆ. ಆತನ ಬಿಸುಸುಯ್ಲೂ ನಮ್ಮ ನಿಟ್ಟುಸಿರಿನಂತೆಯೇ ಬೆಂದೆದೆಯಿಂದ ಬರುತ್ತದೆ. ಆತನ ಶರೀರವೂ ಮೇಘ ಮಧ್ಯೆ ಹಠಾತ್ತಾಗಿ ಹಾರಿ ಮಾಯವಾಗದೆ ನಮ್ಮ ದೇಹದಂತೆಯೇ ಮಣ್ಣುಗೂಡಿ ಅದೃಶ್ಯವಾಗುತ್ತದೆ. ಭಗವಂತನು ತನ್ನ ನಿಯಮಗಳನ್ನು ತಾನೇ ಉಲ್ಲಂಘಿಸುವುದಿಲ್ಲ. ತನ್ನ ಮನೆಗಾದರೂ ಅಕ್ರಮಪ್ರವೇಶಮಾಡುವುದು ಸೌಜನ್ಯದ ಚಿಹ್ನೆಯಲ್ಲ. ಲೋಕಾನುಗ್ರಹಮಾಡುವ ಮಾರ್ಗದರ್ಶಿಗಂತೂ ಅದು ಸ್ವಲ್ಪವೂ ಒಪ್ಪುವುದಿಲ್ಲ. ಒಂದು ವೇಳೆ ನಿಯಮೋಲ್ಲಂಘನೆಗೆ ನಮಗೆ ಅವಕಾಶವೀಯದೆ ತಾನೊಬ್ಬನೇ ಹಾಗೆ ಮಾಡಿದರೆ ಅದರಿಂದ ನಮಗೆ ಪ್ರಯೋಜನವೂ ಇಲ್ಲ; ಧರ್ಮಜೀವನದಲ್ಲಿ ಅದು ನಮ್ಮ ಲಕ್ಷ್ಯಕ್ಕೆ ಯೋಗ್ಯವೂ ಅಲ್ಲ. ಪವಾಡಗಳೆಂದರೆ ಹೊಟ್ಟೆಯ ಪಾಡಿಗಾಗಿ ಮೋಸಗಾರರು ಹೂಡುವ ಕುತಂತ್ರ. ಅಂತಹವರಿಂದಲೇ ಧರ್ಮಜೀವನಕ್ಕೆ ಕಲಂಕವೂ ಅಪವಾದವೂ ಬಂದೊದಗಿವೆ. ಪರಮಹಂಸರ ವಚನವಿದು: "ಅತಿಮಾನುಷಕರ್ಮಗಳನ್ನು ಎಂದರೆ ಆಶ್ಚರ್ಯವನ್ನುಂಟು ಮಾಡುವ ವಿದ್ಯೆಗಳನ್ನು ತೋರಿಸುವವರ ಹತ್ತಿರ ಸುಳಿಯಬೇಡ. 'ಏಕೆ?' ಎನ್ನುವೆಯೋ! ಅವರು ಸತ್ಯಮಾರ್ಗದಿಂದ ತಪ್ಪಿದವರಾದ ಕಾರಣವೇ ಅವರ ಮನಸ್ಸು ಬ್ರಹ್ಮಯಾತ್ರಿಕರನ್ನು ಸತ್ಯಮಾರ್ಗದಿಂದ ಎಳೆಯುವ 'ಸಿದ್ಧಿ'ಗಳೆಂಬ ಬಲೆಯಲ್ಲಿ ಸಿಲುಕಿಕೊಂಡಿರು

ವುದು. ಆ ಸಿದ್ಧಿಗಳ ವಿಷಯದಲ್ಲಿ ಬಹಳ ಜಾಗರೂಕನಾಗಿರುವುದಲ್ಲದೆ ಅವು ಗಳನ್ನು ಬಯಸದಿರು.''

ಅವತಾರಪುರುಷರು ಪ್ರಾಕೃತರಂತೆ ಸಾಧನೆಮಾಡಿದರೂ ಅವರ ಜೆನ್ಮಿನ ಮೇಲೆ ಬಹುಜನ್ಮ ಸಂಸ್ಕಾರಗಳ ಹೊರೆಯೂ ಆಕರ್ಷಣೆ ವಿಕರ್ಷಣೆಗಳ ತೊಂಡು ತೊಳಸೂ ಇಲ್ಲದಿರುವುದರಿಂದಲೂ ಜೀವನದ ಮಹೋದ್ದೇಶವು ಅವರಲ್ಲಿ ಸರ್ವದಾ ಜಾಗ್ರತವಾಗಿರುವುದರಿಂದಲೂ ನಡೆಯಬೇಕಾಗಿರುವ ಹಾದಿಯು ಅರಿವು ಚೆನ್ನಾಗಿರುವುದರಿಂದಲೂ ಪ್ರಾಕೃತರು ಕಲ್ಪಾಂತರಗಳಲ್ಲಿ ಮಾಡಿ ಮುಗಿಸು ವುದನ್ನು ಅವರು ಅಲ್ಪಾಂತರದಲ್ಲಿಯೇ ಸಾಧಿಸಿಬಿಡುತ್ತಾರೆ. ಅಲ್ಲದೆ ಅವರು ಇತರ ಋಷಿಗಳು ಮಹರ್ಷಿಗಳು ಯೋಗಿಗಳು ಸಿದ್ಧರಂತಲ್ಲದೆ ಅನೇಕ ಮಾನವರನ್ನು ಉದ್ಧಾರಮಾಡಲು ಸಮರ್ಥರಾಗುತ್ತಾರೆ. ಪರಮಹಂಸರು ಹೀಗೆಂದು ಹೇಳಿ ದ್ದಾರೆ—

"ಈಶ್ವರನು ನರಜನ್ಮವನ್ನು ಎತ್ತುವುದಕ್ಕಾಗಿ ಮಾಡಬೇಕಾದ ಪರಿತ್ಯಾಗದ ಮಹತ್ವವನ್ನು ಯಾರೂ ಅರಿಯರು.''

"ಕೆಲವು ಋತುಗಳಲ್ಲಿ ನೀರು ಬಹಳ ಆಳವಾದ ಬಾವಿಗಳಲ್ಲಿ ಮಾತ್ರ ಅತಿ ಪ್ರಯಾಸದಿಂದ ದೊರೆಯುತ್ತದೆ. ಆದರೆ ಮಳೆಗಾಲದಲ್ಲಿ ದೇಶವೆಲ್ಲಾ ಜಲಮಯ ವಾಗಲು ನೀರು ಎಲ್ಲೆಲ್ಲಿಯೂ ಸುಲಭವಾಗಿ ಸಿಕ್ಕುತ್ತದೆ. ಸಾಮಾನ್ಯವಾಗಿ ಸಿದ್ಧರು ಬಹು ಶ್ರಮಸಾಧ್ಯವಾದಂತಹ ತಪಸ್ಸು, ಮಂತ್ರ, ಪ್ರಾರ್ಥನೆಗಳ ಮೂಲಕ ಭಗವತ್ಸಾಕ್ಷಾತ್ಕಾರವನ್ನು ಪಡೆಯುವರು. ಆದರೆ ಅವತಾರ ರೂಪವಾದ ಪ್ರವಾ ಹವು ಭೂಮಿಯ ಮೇಲೆ ಹರಿದಾಗ ಭಗವದ್ವ್ಯಕ್ತಿತ್ವವು ಎಲ್ಲೆಲ್ಲಿಯೂ ತೋರಿಬರು ತ್ತದೆ. ಆಗ ಆತನ ಕೃಪಾಪ್ರವಾಹದಿಂದ ಪ್ರತಿಯೊಬ್ಬನೂ ಉದ್ಧಾರವಾಗು ತ್ತಾನೆ.''

"ದೊಡ್ಡದೂ ಬಲವಾದುದೂ ಆದ ಹೊಗೆಯ ಜಹಜು ತನ್ನ ಹಿಂದೆ ತೆಪ್ಪಗಳನ್ನೂ ದೋಣಿಗಳನ್ನೂ ಎಳೆದುಕೊಂಡು ಸಮುದ್ರದಲ್ಲಿ ಬೇಗನೆ ಮುಂದೆ ಹೋಗುವಂತೆ ರಕ್ಷಕನು ಅವತರಿಸಿದಾಗ ಆತನು ಸಾವಿರಾರು ಜನದ ಕೈಹಿಡಿದು ಅವರನ್ನು ಸುಲಭವಾಗಿ ಮಾಯಾಸಮುದ್ರದಿಂದ ದಾಟಿಸುತ್ತಾನೆ.''

"ದೊಡ್ಡ ತೆಪ್ಪವು ನೂರಾರು ಮಂದಿಯನ್ನು ಹೊತ್ತುಕೊಂಡು ಹೊನಲಿ

ಸಲ್ಲಿ ತೇಲಿಹೋಗುವುದು. ಆದರೆ ತೇಲುವ ಬಾಳದ ಕಟ್ಟಿಯಾದರೋ ಒಂದು ಕಾಗೆಯ ಭಾರವನ್ನೂ ಕೂಡ ತಾಳಲಾರದೆ ಮುಳುಗಬಹುದು. ಹಾಗೆಯೇ ರಕ್ಷಕನು ಅವತರಿಸಿದಾಗ ಆತನನ್ನು ಮರೆಹೊಕ್ಕ ಸಾವಿರಾರು ಮಂದಿಗೆ ಅವನು ಮುಕ್ತಿತೋರುವನು. ಸಿದ್ಧನಿಗಾದರೋ ತಾನು ಮುಕ್ತನಾಗುವುದೇ ಬಹು ಪ್ರಯಾಸವಾಗುವುದು.''

"ಒಂದೇ ಅವತಾರವೇ ಜೀವಸಮುದ್ರದಲ್ಲಿ ಮುಳುಗಿ ಒಂದು ಕಡೆ ಎದ್ದರೆ ಕೃಷ್ಣಾವತಾರ; ಮರಳಿ ಮುಳುಗಿ ಮತ್ತೊಂದೆಡೆ ಬಂದರೆ ಕ್ರಿಸ್ತಾವತಾರ.''

"ಸಮುದ್ರದ ಅಲೆಗಳಿಗೂ ಸಮುದ್ರಕ್ಕೂ ಇರುವ ಪರಸ್ಪರ ಸಂಬಂಧವೇ ರಾಮ, ಕೃಷ್ಣ, ಬುದ್ಧದೇವ, ಕ್ರಿಸ್ತರಂತಹ ಅವತಾರಗಳಿಗೂ ಪರಬ್ರಹ್ಮನಿಗೂ ಇರುವ ಸಂಬಂಧ.''

ಸಾಧನೆ ಎಂದರೇನು? ಸಾಧಕನಾರು? ಅವತಾರಪುರುಷರ ಸಾಧನೆಯ ರೀತಿ ಎಂತಹುದು? ಎಂಬುದನ್ನು ಕುರಿತು ಸಂಕ್ಷೇಪವಾಗಿ ಪರಿಶೀಲಿಸಿದ್ದಾಯಿತು. ಇನ್ನು ದಕ್ಷಿಣೇಶ್ವರದ ದೇವಮಾನವನ ಸಹಸ್ರವರ್ಣಪೂರ್ಣವೂ ಮಹಾ ಗೌರವಮಯವೂ ವಿಸ್ಮಯಕರವೂ ಆಗಿರುವ ಆಧ್ಯಾತ್ಮಿಕ ಜೈತ್ರಯಾತ್ರೆಯನ್ನು ಮನವಾರೆ ನೋಡುವುದು ನಮ್ಮ ಪ್ರಕೃತ ಕರ್ತವ್ಯ. ಅದು ಅನಂತದಂತೆ ಅಸಂಖ್ಯಮುಖವಾದುದು; ವೈವಿಧ್ಯಪೂರ್ಣವಾದುದು, ಸರ್ವಗ್ರಾಸಿಯಾದುದು. ಅಲ್ಲಿ ಸಂಕುಚಿತಭಾವಕ್ಕೆ ಎಡೆಯಿಲ್ಲ; ಈರ್ಷ್ಯೆ, ಅಸೂಯೆ, ಮತಭ್ರಾಂತಿ, ದುರಭಿಮಾನಗಳಿಗೆ ತಾವಿಲ್ಲ ಅದು ಬ್ರಹ್ಮಾಂಡದಂತೆ ಮಹಾಭೂಮವಾದುದು. ಅಲ್ಲಿರುವುದು ಒಂದು ಸ್ವರವಲ್ಲ; ಅದೊಂದು ಮಹಾ ಸ್ವರಮೇಳ. ಆ ಸ್ವರ್ಗೀಯ ಸುಮಧುರ ಸಂಗೀತ ಗಂಗಾಸ್ರೋತದಲ್ಲಿ ಸರ್ವದೇಶದ ಸರ್ವಕಾಲದ ಸರ್ವಸಂಸ್ಕೃತಿಯ ವಿವಿಧ ಸಂಸ್ಕಾರಗಳ ಮಾನವರ ಭಾವಗಳೆಲ್ಲವೂ ತರಂಗ ತರಂಗಗಳಾಗಿ ಗರ್ವಿತ ವಿನ್ಯಾಸದಿಂದ ಉರುಳಿ ಹೊರಳಿ, ಎದ್ದು ಬಿದ್ದು, ಹೊಮ್ಮಿ ಹಾರಿ, ಉಕ್ಕಿ ಹರಿದು, ಅತೀತದ ಅಸೀಮದ ಸಮುದ್ರದೆಡೆಗೆ ಅವಿರಳವಾಗಿ ನುಗ್ಗುತ್ತಿವೆ, "ಮೂಢಭಕ್ತಿ''ಯ ಕಣ್ಣೀರಿನಿಂದ ಹಿಡಿದು ಮಹಾಜ್ಞಾನಿಯ ನಿರ್ವಿಕಲ್ಪಸಮಾಧಿಯವರೆಗೆ!

ಕ್ರಿ. ಶ. ೧೮೫೫ರಲ್ಲಿ ಶ್ರೀರಾಮಕೃಷ್ಣ ಪರಮಹಂಸರು ದಕ್ಷಿಣೇಶ್ವರದ

ಭವತಾರಿಣಿಯ ಅರ್ಚಕರಾಗಿ ನಿಂತಂದಿನಿಂದ ಅವರ ಜೀವನದಲ್ಲಿ ಒಂದು ನವ ಪ್ರಕರಣವು ಪ್ರಾರಂಭವಾಯಿತು. ಆಧ್ಯಾತ್ಮಿಕ ಪ್ರಯೋಗ ಮಂದಿರದಲ್ಲಿ ಗೀರ್ವಾಣ ವೈಜ್ಞಾನಿಕನು ಬ್ರಹ್ಮವಸ್ತುಸಾಕ್ಷಾತ್ಕಾರಕ್ಕಾಗಿ ವಿವಿಧ ಪ್ರಯತ್ನ ಪರೀಕ್ಷೆಗಳನ್ನು ವಿಶೇಷವಾಗಿ ಮಾಡತೊಡಗಿದನು. ಅವರ ಪೂಜೆಯ ರೀತಿಯೇ ಅನನ್ಯ ಸಾಧಾರಣವಾಗಿತ್ತೆಂದು ಹಿಂದೆಯೇ ಹೇಳಿದ್ದೇವೆ. ಆರಾಧನೆ ಮುಗಿದ ಮೇಲೆ ತಾಯಿಯ ವಿಗ್ರಹದ ಎದುರು ಅಲುಗಾಡದೆ ಬಹುಕಾಲ ಧ್ಯಾನಸ್ಥರಾಗಿ ಕುಳಿತುಬಿಡುವರು. ಕೆಲವು ಸಾರಿ ರಾಮಪ್ರಸಾದ, ಕಮಲಾಕಾಂತ ಮೊದಲಾದ ವಂಗದೇಶದ ಭಕ್ತಕವಿಗಳ ಕೀರ್ತನೆಗಳನ್ನು ಹಾಡಿ ಹಾಡಿ ಹರುಷದಲ್ಲಿ ಮೈಮರೆತು ಬಿಡುವರು. ಹಿಂದಿನಂತೆ ಜನಗಳ ಮಾತುಕತೆಗಳಲ್ಲಿ ಭಾಗಿಯಾಗುವುದನ್ನು ನಿಲ್ಲಿಸಿ ಬಿಟ್ಟರು. ನಡುಹಗಲಿನಲ್ಲಿಯೂ ನಡುರಾತ್ರಿಯಲ್ಲಿಯೂ ಮಂದಿಯ ಮುಂದೆಯಿಂದ ಹೊರಬಿದ್ದು ಧ್ಯಾನಕ್ಕಾಗಿ ಪಂಚವಟಿಯ ಅರಣ್ಯಕ್ಕೆ ಹೋಗುತ್ತಿದ್ದರು. ಇದೆಲ್ಲ ಹೃದಯರಾಮನಿಗೆ ಸರಿಬೀಳಲಿಲ್ಲ. ಸುಮ್ಮನೆ ಬಿಟ್ಟರೆ ಮಾವನು ಆರೋಗ್ಯ ಕೆಟ್ಟು ಕಾಯಿಲೆ ಬೀಳುವನೆಂದು ಹೆದರಿ, ಆತನ ವಿಚಿತ್ರ ವ್ಯಾಪಾರಗಳನ್ನು ತಡೆಗಟ್ಟಲು ಸಾಹಸಮಾಡಿದನು. ಒಂದು ರಾತ್ರಿ ಪರಮಹಂಸರು ಹೊರಬೀಳುವುದನ್ನೇ ಕಾಯ್ದುಕೊಂಡಿದ್ದು ಹೃದಯನು ಅವರನ್ನು ಗುಟ್ಟಾಗಿ ಹಿಂಬಾಲಿಸಿದನು. ಪರಮಹಂಸರು ಅರಣ್ಯಪ್ರವೇಶಮಾಡಿ ಆಮಲಕವೃಕ್ಷವಿದ್ದ ಕಡೆಗೆ ಹೋದರು. ಮಾವನನ್ನು ಹಿಂಬಾಲಿಸಿದರೆ ಆತನಿಗೆ ಸಿಟ್ಟು ಬರಬಹುದೆಂದು ತಿಳಿದು ಹೃದಯನು ಹಿಂದೆಯೇ ಉಳಿದು, ಬೆದರಿಸುವುದಕ್ಕಾಗಿ ಕಲ್ಲು ಬೀರಿದನು. ಆದರೂ ಪ್ರಯತ್ನವು ವಿಫಲವಾಯಿತು. ಮಾವನು ಒಂದಿನಿತೂ ಅಳುಕಲಿಲ್ಲ. ಬೇಸತ್ತು ಹಿಂದಿರುಗಿದನು. ಅಂದಿನಿಂದ ಪರಮಹಂಸರು ಕಾಡಿಗೆ ಧ್ಯಾನಕ್ಕೆ ಹೋದಾಗಲೆಲ್ಲ ಸುತ್ತಲೂ ಕಲ್ಲು ಬೀಳುತ್ತಿದ್ದುವು. ಶಿಲಾವರ್ಷವನ್ನು ಕರೆಯುವ ಇಂದ್ರನು ತಮ್ಮ ಅಳಿಯನೇ ಎಂಬುದು ಪರಮಹಂಸರಿಗೆ ಗೊತ್ತಾಗಿ ಸುಮ್ಮನಿರುತ್ತಿದ್ದರು. ಎಷ್ಟು ಪ್ರಯತ್ನಪಟ್ಟರೂ ಜಯಶೀಲನಾಗದ ಹೃದಯನು ಕುಪಿತನಾಗಿ ಕಡೆಗೆ ಒಂದು ದಿನ ಮಾವನು ಏನುಮಾಡುತ್ತಾನೆ ಎಂಬುದನ್ನು ನೋಡಿಯೇ ಬಿಡುವೆನೆಂದು ನಿಶ್ಚಯಿಸಿ ನುಗ್ಗಿದನು. ಕಣ್ಣಿಗೆ ಬಿದ್ದ ದೃಶ್ಯದಿಂದ ದಿಗ್ಭ್ರಾಂತನಾದನು. ಪರಮಹಂಸರು ನೆಲ್ಲಿಯ ಮರದ ಬುಡದಲ್ಲಿ ನಿಷ್ಪಂದ ಧ್ಯಾನಮೂರ್ತಿ

ಯಾಗಿ ಕುಳಿತಿದ್ದರು. ಬಾಹ್ಯಪ್ರಜ್ಞೆಯೇ ಇರಲಿಲ್ಲ. ಸಂಪೂರ್ಣ ನಗ್ನರಾಗಿದ್ದರು. ಬಟ್ಟೆಯೆಲ್ಲ ದೂರಬಿದ್ದಿದ್ದುವು. ಜನಿವಾರವೂ ಕೂಡ ದೂರಬಿದ್ದಿತ್ತು! ಹೃದಯನು ಮಾವನಿಗೆ ನಿಜವಾಗಿಯೂ ಹುಚ್ಚು ಹಿಡಿದಿರಬೇಕೆಂದು ನಿರ್ಧರಿಸಿ ಬಳಿಗೆ ನುಗ್ಗಿ ಹೋಗಿ ಗಟ್ಟಿಯಾಗಿ ನಿಡುಕಿದನು! "ಸರಿಹೋಯ್ತು! ಇದೇನಿದು ನೀನು ಮಾಡುತ್ತಿರುವುದು? ಇದೇಕೆ ಬತ್ತಲೆಯಾಗಿದ್ದೀಯೆ? ಜನಿವಾರವನ್ನೂ ಕೂಡ ಬಿಸಾಡಿದ್ದೀಯೆ!" ಶ್ರೀರಾಮಕೃಷ್ಣರು ಮೊದಲು ಮಾತಾಡಲೇ ಇಲ್ಲ. ಹೃದಯನು ಬೊಬ್ಬೆಯಿಡುತ್ತಿರಲು ಕಣ್ದೆರೆದುನೋಡಿ "ನಿನಗೇನು ಗೊತ್ತೋ? ಧ್ಯಾನಮಾಡುವಾಗ ಬಂಧನಗಳೊಂದೂ ಇರಬಾರದು. ಮನುಷ್ಯನು ಹುಟ್ಟಿದಂದಿನಿಂದ ದ್ವೇಷ, ಲಜ್ಜೆ, ಕುಲ, ಶೀಲ, ಭಯ, ಜಾತಿ, ಮಾನ, ಅಭಿಮಾನಗಳೆಂಬ ಅಷ್ಟಪಾಶಗಳಿಂದ ಬದ್ಧನಾಗಿರುತ್ತಾನೆ. ಜನಿವಾರವೂ ಒಂದು ಪಾಶ—ನಾನು ಬ್ರಾಹ್ಮಣ, ಎಲ್ಲರಿಗಿಂತಲೂ ಹೆಚ್ಚಿನವನು ಎಂಬ ಅಹಂಕಾರಕ್ಕೆ ಅದೊಂದು ಚಿಹ್ನೆ. ದಿವ್ಯಮಾತೆಯನ್ನು ಧ್ಯಾನಿಸುವಾಗ ಈ ಬಂಧನಗಳನ್ನೆಲ್ಲ ತೆಗೆದೊಗೆಯಬೇಕು. ಆದ್ದರಿಂದಲೇ ಜನಿವಾರ, ಬಟ್ಟೆ ಎಲ್ಲವನ್ನೂ ತೆಗೆದು ಬಿಸುಟು ಬತ್ತಲೆಯಾಗಿ ಧ್ಯಾನಮಾಡುತ್ತಿದ್ದೇನೆ. ಹಿಂದಿರುಗುವಾಗ ಅವುಗಳನ್ನೆಲ್ಲಾ ಮತ್ತೆ ಹಾಕಿಕೊಂಡು ಬರುತ್ತೇನೆ" ಎಂದು ಗಂಭೀರವಾಣಿಯಿಂದ ಹೇಳಿದರು. ಚೇಷ್ಟೆ ಮಾಡಬೇಕೆಂದು ಹೋಗಿದ್ದ ಹೃದಯನು ಮರುಮಾತಾಡದೆ ಹಿಂದಿರುಗಿದನು.

ಬರಬರುತ್ತ ಪರಮಹಂಸರಿಗೆ ದೇವರ ಹುಚ್ಚು ಹೆಚ್ಚಿತು. ಜಗನ್ಮಾತೆಯ ದರ್ಶನೋತ್ಸುಕತೆಯಿಂದ ನಿದ್ರಾಹಾರಗಳು ಬೇಕಿಲ್ಲವಾದುವು. ತಾಯಿಯನ್ನು ಅಗಲಿದ ಶಿಶುವಿನಂತೆ ರೋದಿಸತೊಡಗಿದರು. "ಹೇ ಜನನೀ, ನೀನೆಲ್ಲಿ? ನನಗೆ ಮೈದೋರು. ರಾಮಪ್ರಸಾದನಿಗೆ ದರ್ಶನವಿತ್ತೆ. ನಾನೇನು ಪಾಪಿಯೇ? ನನಗೆ ಕಾಣಿಸದೆ ಏಕಿರುವೆ? ಸುಖ ಸಂಪತ್ತು ಬಂಧುಭೋಗಗಳೊಂದೂ ನನಗೆ ಬೇಡ. ನನಗಿರುವುದು ನಿನ್ನನ್ನು ದರ್ಶಿಸುವ ಒಂದೇ ಆಕಾಂಕ್ಷೆ." ಹೀಗೆಲ್ಲ ಬೇಡುವರು. ಹೃದಯದ ವ್ಯಸನಭಾರವೆಲ್ಲ ಕಣ್ಣಿನಿಂದ ಅವಿರಳಧಾರೆಯಾಗಿ ಹರಿಯುತ್ತಿತ್ತು. ಹಗಲು ಕಳೆದು ಸಂಜೆ ಬರಲು ಸಾಯಂಪೂಜೆಯ ಗಂಟೆಗಳ ಟಿಂಟಿಣಿ ಗುಡಿಯ ಪವಿತ್ರ ಪ್ರಶಾಂತತೆಯಲ್ಲಿ ತೆರೆತೆರೆಯಾಗಿ ನಲಿಯಲು ಶ್ರೀರಾಮಕೃಷ್ಣರು ಅತಿ ದುಃಖಿತರಾಗಿ ಕಣ್ಣೀರು ಸುರಿಸುತ್ತ "ಮತ್ತೊಂದು ದಿನವು ಕಳೆದು

ಹೋಯಿತು. ತಾಯೇ, ನಾನಿನ್ನೂ ನಿನ್ನನ್ನು ಕಾಣಲಿಲ್ಲ! ಈ ಮೂರು ದಿನದ ಬಾಳಿನಲ್ಲಿ ದಿನವೊಂದಳಿದುದು; ತಾಯೇ, ನನಗಿನ್ನೂ ಸತ್ಯದರ್ಶನವಾಗಿಲ್ಲ!" ಎಂದು ಮೊರೆಯಿಡುತ್ತಿದ್ದರು. ಒಂದೊಂದುಸಾರಿ ದುಃಖೋತ್ಕರ್ಷದಿಂದ ಮೋರೆಯನ್ನು ನೆಲಕ್ಕೆ ತೀಡುತ್ತಿದ್ದರು! ಜನರು ಒಳಿಗೆಬಂದು ಅಳುವ ತರುಣನನ್ನು ಕಂಡು ಸಹಾನುಭೂತಿಯಿಂದ "ಅಯ್ಯೋ ಪಾಪ, ಏನಾಗಿದೆ ಆ ಹುಡುಗನಿಗೆ? ನಿಜವಾಗಿಯೂ ಅವನಮ್ಮ ತೀರಿಕೊಂಡಳೇ? ಅಥವಾ ಹೊಟ್ಟೆಗಿಟ್ಟೆ ಬೇನೆಯೋ? ಅವನು ಗೋಳಾಡುವುದು ನೋಡಿದರೆ ನಮಗೂ ಎದೆ ಬೇಯುತ್ತದೆ" ಎನ್ನುವರು. ಇನ್ನೊಮ್ಮೆ ಭವತಾರಿಣಿಯ ವಿಗ್ರಹದ ಮುಂದೆ ಕುಳಿತು "ಅಮ್ಮಾ, ನೀನು ನಿಜವಾಗಿಯೂ ಇದ್ದೀಯಾ? ಅಥವಾ ನೀನು ಬರಿಯ ಕವಿಕಲ್ಪನೆಯೋ? ನೀನು ಇರುವುದಾದರೆ ನಾನೇಕೆ ನಿನ್ನನ್ನು ನೋಡಲಾಗುವುದಿಲ್ಲ? ಧರ್ಮವೆಂಬುದು ಬರಿಯ ಭ್ರಾಂತಿಯೇ? ಗಾಳಿಗೋಪುರವೇ?" ಎಂದು ಸಂದೇಹಪಟ್ಟು, ಒಡನೆಯೇ ರಾಮಪ್ರಸಾದ ಮೊದಲಾದ ಮಹಾಭಕ್ತರಿಗೆ ದೇವಿ ಪ್ರತ್ಯಕ್ಷಳಾದುದನ್ನು ನೆನೆದುಕೊಂಡು "ಇಲ್ಲ; ನೀನು ಬರಿಯ ಕವಿಕಲ್ಪನೆಯಲ್ಲ. ನಿನ್ನನ್ನು ಕಣ್ಣಾರೆ ಕಂಡವರಿದ್ದಾರೆ. ನಾನೂ ಅವರಂತೆ ನೋಡಬಾರದೇಕೆ? ಬಾಳಿನ ಹೊಳೆ ನಿಲ್ಲದೆ ಹರಿಯುತ್ತಿದೆ. ದಿನದ ಮೇಲೆ ದಿನಗಳುರುಳಿ ನಿತ್ಯತೆಯ ಅಜ್ಞಾತವಾಸದಲ್ಲಿ ಲಯವಾಗುತ್ತಿವೆ. ಹೋದ ದಿನವು ಮರಳಿಬಾರದು. ಕ್ಷಣಕ್ಷಣಕ್ಕೂ ಮೃತ್ಯು ಸನ್ನಿಹಿತವಾಗುತ್ತಿದೆ. ಆದರೆಲ್ಲಿ ನನ್ನ ತಾಯಿ? ಶಾಸ್ತ್ರಗಳು ಈಶ್ವರನೇ ಪರಮಪುರುಷಾರ್ಥವೆಂದು ಸಾರುತ್ತಿವೆ. ಅವನಿಲ್ಲದ ಜೀವನವು ಅಸಹ್ಯ, ಅರ್ಥಹೀನ. ಅವನಿದ್ದರೆ ಸರ್ವವೂ ಅರ್ಥಪೂರ್ಣ, ಆನಂದಪೂರ್ಣ. ಆದ್ದರಿಂದಲೇ ಭಕ್ತರು ಪ್ರಪಂಚದ ಸುಖಗಳನ್ನು ತ್ಯಜಿಸಿ ಈಶ್ವರನ ದರ್ಶನಕ್ಕಾಗಿ ಜೀವಮಾನವನ್ನೇ ಧಾರೆಯೆರೆಯುತ್ತಾರೆ. ಆ ಸನಾತನ ಅಮೃತಾನಂದ ವಾರಿಧಿಯನ್ನು ಪಡೆಯದಿದ್ದರೆ ನಾನು ಬದುಕಿ ಏನು ಫಲ?" ಎಂದು ಚಿಂತಿಸುವರು. ತಮ್ಮ ಆ ದಿನಗಳನ್ನು ಕುರಿತು ಪರಮಹಂಸರು ಶಿಷ್ಯರಿಗೆ ಹೀಗೆಂದು ಹೇಳಿದ್ದಾರೆ: "ಅಯ್ಯೋ, ಎಷ್ಟು ದಿವ್ಯೋನ್ಮತ್ತನಾಗಿದ್ದೆ! ನನ್ನಲ್ಲಿ ಆಗಿದ್ದ ಜನನೀವಿಯೋಗದುಃಖವನ್ನು ನೀವು ಎಷ್ಟು ಮಾತ್ರವೂ ಊಹಿಸಲಾರಿರಿ. ನನಗೇನೋ ಅದು ಸ್ವಾಭಾವಿಕವಾಗಿತ್ತು. ಈಗ ಒಂದು ಕೋಣೆಯಲ್ಲಿ ಒಂದು ಚಿನ್ನದ ನಿಧಿ ಇದೆ

ಎಂದುಕೊಳ್ಳಿ. ಅದನ್ನರಿತ ಕಳ್ಳನು ಪಕ್ಕದ ಕೋಣೆಯಲ್ಲಿದ್ದಾನೆಂದುಕೊಳ್ಳಿ. ಆ ಕಳ್ಳನಿಗೆ ನಿದ್ದೆ ಬರುತ್ತದೆಯೇ ? 'ಎಂದಿಗೆ ಗೋಡೆ ಒಡೆದೇನು ? ಎಂದಿಗೆ ಚಿನ್ನ ಕದ್ದೇನು ?' ಎಂದು ಹುಚ್ಚಾಗುವುದಿಲ್ಲವೇ ? ನನ್ನ ಅವಸ್ಥೆಯೂ ಹಾಗೆಯೇ ಆಗಿದ್ದಿತು. ಜಗನ್ಮಾತೆ ನನಗೆ ಅತಿ ಸಮೀಪದಲ್ಲಿದ್ದಾಳೆ. ಆನಂದಮಯಿಯಾದ ಆಕೆಯ ಮುಂದೆ ಐಹಿಕ ಸುಖಭೋಗಗಳು ದರಿದ್ರವಸ್ತುಗಳು ಎಂಬುದು ನನಗೆ ತಿಳಿದಿತ್ತು. ಹೀಗಿರಲು ಆಕೆಯನ್ನು ಕಾಣದೆ ಹೇಗೆ ತಾನೇ ಸುಮ್ಮನಿರಲಾಗುತ್ತದೆ ? ಆದ್ದರಿಂದ ಹುಚ್ಚನಾದೆ !"

ದೇವರ ಹುಚ್ಚು ಹೆಚ್ಚಿದಂತೆ ದೇವರ ಪೂಜೆ ಹುಚ್ಚುಹುಚ್ಚಾಯಿತು. ಪೂಜಾರಿ ವಿಗ್ರಹಕ್ಕೆ ಹೂಮುಡಿಸಿದಂತೆ ತನಗೂ ಹೂಮುಡಿಸಿಕೊಳ್ಳುವನು. ಆರತಿಯನ್ನು ಬೆಳಗುವಾಗ ಹೊತ್ತು ಗೊತ್ತೇ ಇರುತ್ತಿರಲಿಲ್ಲ. ನಿವೇದನ ಕಾಲದಲ್ಲಿ ತಾಯಿ ಊಟಮಾಡುತ್ತಿರುವಳೆಂಬಂತೆ ಸುಮ್ಮನೆ ಕುಳಿತು ನೋಡುವನು. ಪೂಜಾರಿಯ ಹುಚ್ಚು ದೇವಾಲಯದ ಅಧಿಕಾರಿಗಳ ಕಿವಿಗೆ ಬಿತ್ತು. ಆದರೆ ಮಧುರನಾಥನು ಅರ್ಚಕನ ಭಕ್ತಿಯ ಅಗಾಧತೆಯನ್ನು ಸ್ತುತಿಸಿ ಸುಮ್ಮನಾದನು. ಪರಮಹಂಸರ ಸ್ಥಿತಿ ವಿಷಮವಾಯಿತು. ಊಟ ನಿದ್ದೆಗಳನ್ನೂ ಮರೆಯುತ್ತಿದ್ದರು. ಮುಖವೂ ಎದೆಯೂ ಯಾವಾಗಲೂ ರಕ್ತಸ್ನಾತವಾದಂತೆ ತೋರುತ್ತಿದ್ದುವು. ಅತ್ಯುದ್ವೇಗದಿಂದ ಕಣ್ಣುಗಳು ಕೆಂಪಗೆ ಉಬ್ಬಿಕೊಂಡಿರುತ್ತಿದ್ದುವು. ಆಚರಣೆಗಳಲ್ಲಿ ನಿರಂತರ ಅವಿಶ್ರಾಂತಿ ತೋರುತ್ತಿತ್ತು. ಹೀಗಿರುತ್ತಿರಲು ಒಂದು ದಿನ ಜಗನ್ಮಾತೆಯ ದರ್ಶನಾಕಾಂಕ್ಷೆಯ ಉನ್ಮಾದವು ಮೇರೆ ಮುಟ್ಟಿ, ಭಯಂಕರ ಕಾರ್ಯದೀಕ್ಷಿತರಾಗಿ ಪರಮಹಂಸರು ಭವತಾರಿಣಿಯ ಮುಂದೆ ನಿಂತರು. ಮೃತ್ಯು ಅಥವಾ ಸತ್ಯದರ್ಶನ !

ಬಾಗಿಲು ತೆರೆಯಿತು ; ದರ್ಶನವಾಯಿತು !

ಆ ಕಥೆಯನ್ನು ಅವರೇ ಹೇಳಲಿ. ಅವರ ಮಹಾವಾಣಿ ನಮ್ಮೆದೆಗಳಲ್ಲಿ ಘೂರ್ಮಿಸಲಿ :

" ಒಂದು ದಿನ ಜಗದಂಬೆಯಾದ ಭವತಾರಿಣಿಯ ಮುಂದೆ ಆಕೆಯ ದರ್ಶನ ಲಾಭಕ್ಕಾಗಿ ನಿತಾಂತವ್ಯಾಕುಲತೆಯಿಂದ ಪ್ರಾರ್ಥಿಸಿ ಕೀರ್ತನೆಗಳನ್ನು ಹಾಡುತ್ತಾ ಅಳುತ್ತಿದ್ದೆ. 'ತಾಯೇ, ಇಷ್ಟು ಕರೆದರೂ ನಿನಗೆ ಒಂದಿನಿತೂ ಕೇಳಿಸುವುದಿಲ್ಲವೇ?

ರಾಮಪ್ರಸಾದನಿಗೆ ದರ್ಶನವಿತ್ತೆ. ನನಗೇಕೆ ಮೈದೋರದಿರುವೆ ?' ಹೃದಯದಲ್ಲಿ ಅಸಹನೀಯ ಯಾತನೆಯಾಯಿತು. ತೊಯ್ದ ಬಟ್ಟೆಯನ್ನು ಹಿಂಡುವಂತೆ ಅದನ್ನು ಯಾರೋ ಹಿಂಡಿದಂತಾಯಿತು. ಜೀವಮಾನದಲ್ಲಿ ಎಂದೆಂದಿಗೂ ನನಗೆ ಆ ದಿವ್ಯ ದರ್ಶನದ ಭಾಗ್ಯವು ದೊರೆಯದಿರಬಹುದೇ ಎಂದು ಆಲೋಚಿಸಿದಾಗಲಂತೂ ನನ್ನ ಮನಸ್ಸು ಭಯಂಕರೋನ್ಮಾದಗ್ರಸ್ತವಾಯಿತು. ಅಸ್ಥಿರನಾದೆ. ಹಾಗಾದರೆ ಈ ಜೀವವಿದ್ದು ಪ್ರಯೋಜನವೇನು? ಎಂದುಕೊಂಡೆ. ಇದ್ದಕ್ಕಿದ್ದ ಹಾಗೆ ನನ್ನ ಕಣ್ಣು ಗರ್ಭಗುಡಿಯಲ್ಲಿದ್ದ ದೇವಿಯ ಖಡ್ಗದ ಮೇಲೆ ಬಿತ್ತು. ಉಪಾಯವು ಮಿಂಚಿನಂತೆ ಮನಸ್ಸಿನಲ್ಲಿ ಹೊಳೆಯಿತು. 'ಆ ಖಡ್ಗ! ಅದೇ ಜೀವನಾಶನಕ್ಕೆ ಮಹದುಪಾಯ!' ಉನ್ಮತ್ತನಂತೆ ಓಡಿಹೋಗಿ ಆ ಆಯುಧವನ್ನು ತುಡುಕಿ ಹಿಡಿದುಕೊಂಡೆ. ಹಠಾತ್ತಾಗಿ ಮನೆ, ಬಾಗಿಲು, ಗೋಡೆ, ದೇವಾಲಯ ಎಲ್ಲವೂ ಎಲ್ಲಿಯೋ ಲುಪ್ತವಾದುವು. ಎಲ್ಲಿಯೂ ಏನೂ ಇಲ್ಲ! ಮಹಾಶೂನ್ಯ! ಅದಕ್ಕೆ ಬದಲಾಗಿ, ಅಸೀಮ ಅನಂತ ಜ್ಯೋತಿಯ ಸಮುದ್ರ! ಯಾವ ದಿಕ್ಕಿನಲ್ಲಿ ಎಷ್ಟು ದೂರ ನೋಡಿದರೂ ನಾಲ್ದೆಸೆಗಳಿಂದಲೂ ಆ ಉದಧಿಯ ಉಜ್ವಲ ಊರ್ಮಿ ಮಾಲೆಗಳು ತರ್ಜನೆಗರ್ಜನೆ ಮಾಡುತ್ತ ನುಂಗಿನೊಣೆಯುವಂತೆ ಮಹಾವೇಗ ದಿಂದ ನುಗ್ಗಿಬಂದುವು. ನೋಡೆ ನೋಡೆ ಪ್ರಲಯ ಮಹಾರವದೊಡನೆ ಭೀಷಣ ತರಂಗಗಳು ಮೇಲೆ ಮೇಲೆ ಹಾಯ್ದು ಬಂದು ನನ್ನ ಮೇಲಪ್ಪಳಿಸಿ ಮುಳುಗಿಸಿ ಬಿಟ್ಟುವು. ಉಸಿರುಕಟ್ಟಿ ಸಂಜ್ಞಾಶೂನ್ಯನಾಗಿ ಬಿದ್ದುಬಿಟ್ಟೆ. ಆ ದಿನವೂ ಮರುದಿನವೂ ಏನಾಯಿತೆಂಬುದು ನನಗೆ ಗೊತ್ತಿಲ್ಲ. ಅಂತರಂಗದಲ್ಲಿ ಅನನುಭೂತ ಪೂರ್ವವಾದ ಆನಂದ ಸ್ರೋತವು ಹಿಲ್ಲೋಲಕಲ್ಲೋಲವಾಗಿ ಪ್ರವಹಿಸುತ್ತಿತ್ತು. ಅಲ್ಲದೆ ಜಗನ್ಮಾತೆಯ ಸಾನ್ನಿಧ್ಯದ ಅನುಭವವನ್ನೂ ಪಡೆದೆ.''

ಚೇತನಜ್ಯೋತಿಯ ಸಮುದ್ರದಲ್ಲಿ ಪ್ರಥಮ ಅಗ್ನಿಸ್ನಾನವು ದೊರೆ ಕೊಂಡಂದಿನಿಂದ ಪರಮಹಂಸರು ಚಿನ್ಮಯಮೂರ್ತಿ ಜಗದಂಬೆಯ ಅವಿರಾಮ ದರ್ಶನಲಾಭಕ್ಕಾಗಿ ಮತ್ತೂ ಆಕುಲಚಿತ್ತರಾದರು. ಆ ಸಾನ್ನಿಧ್ಯದ ಅನುಭವ ವಿಲ್ಲದ ಬದುಕು ಶೂನ್ಯವಾದಂತೆ ತೋರಿತು. ಹಿಂದಿನಂತೆ ಅಳುವುದು, ಮಣ್ಣಿ ನಲ್ಲಿ ಹೊರಳುವುದು ಮೊದಲಾದ ಬಾಹ್ಯಚೇಷ್ಟೆಗಳಿರದಿದ್ದರೂ ಅಂತರಂಗವು ಸರ್ವದಾ ಉತ್ಕಂಠಿತವಾಗಿತ್ತು. ಕೆಲವು ಸಾರಿ ''ತಾಯೇ, ಕೃಪೆಮಾಡು,

ಪ್ಸೈದೋರು " ಎಂದು ಮೊರೆಯಿಡುತ್ತಿದ್ದರು. ಜನರು ಸುತ್ತಲೂ ಕುತೂಹಲಾ ವಿಷ್ಟರಾಗಿ ನೆರೆದರೆ ಅವರಿಗೆ ಬಿಂದುಮಾತ್ರವೂ ಅದರ ಅನುಭವವಾಗುತ್ತಿರಲಿಲ್ಲ. " ಸುತ್ತಲೂ ಜನರು ನಿಂತರ, ನನ್ನ ಕಣ್ಣಿಗೆ ಅವರೆಲ್ಲ ಬರಿಯ ಛಾಯೆಗಳಂತೆಯೋ ಅಥವಾ ಚಿತ್ರಾರ್ಪಿತ ಮೂರ್ತಿಗಳಂತೆಯೋ ತೋರುತ್ತಿದ್ದರು. ಆದ್ದರಿಂದ ನನಗೆ ಲಜ್ಜೆಯಾಗಲಿ, ಸಂಕೋಚವಾಗಲಿ ಸ್ವಲ್ಪವೂ ಆಗುತ್ತಿರಲಿಲ್ಲ. ದರ್ಶನಾಕಾಂಕ್ಷೆಯ ಯಾತನೆಯಿಂದ ಬಾಹ್ಯಸಂಜ್ಞಾಶೂನ್ಯನಾಗಿ ನೋಡುತ್ತೇನೆ: ರಂಜಿಸುತ್ತಿದೆ, ತಾಯಿಯ ಆ ವರಾಭಯಕರಾ ಚಿನ್ಮಯೀ ಜ್ಯೋತಿರ್ಮಯೀ ಮೂರ್ತಿ! ನೋಡುತ್ತೇನೆ: ಆ ಮೂರ್ತಿ ನಗುತ್ತಿದೆ; ನುಡಿಯುತ್ತಿದೆ; ಸಂತವಿಡುತ್ತಿದೆ; ಬುದ್ಧಿ ಹೇಳುತ್ತಿದೆ!"

ಜಗತ್ತೆಲ್ಲ ಜಗನ್ಮಾತೆಯಾಯಿತು. ಜಡವೆಲ್ಲ ಚೇತನವಾಯಿತು. ಮೃಣ್ಮಯ ವಿಗ್ರಹವು ಚಿನ್ಮಯವಾಯಿತು. ಶ್ರೀರಾಮಕೃಷ್ಣರ ಪೂಜೆ ವಿಚಿತ್ರತರವಾಯಿತು. ಯಾವಾಗಲೂ ಯಾರೋ ಅಶರೀರಿಯೊಡನೆ ಮಾತಾಡುವರು; ಹಾಸ್ಯಮಾಡು ವರು; ನಗುವರು. ಜಗದಂಬೆಯ ತ್ರೈಲೋಕ್ಯಸೌಂದರ್ಯ ಮೂರ್ತಿ ಭಕ್ತನನ್ನು ಎಡೆಬಿಡದೆ ಆವರಿಸಿತು. ಪೂಜಾಸಮಯದಲ್ಲಿ ದೇವರಿಗೆ ಮುಡಿಸುವ ಹೂಗಳನ್ನು ಮೊದಲು ತಮ್ಮ ತಲೆ ಎದೆ ಪಾದಗಳಿಗೆ ಮುಟ್ಟಿಸಿಕೊಂಡು ತರುವಾಯ ಮೂರ್ತಿಗೆ ಮುಡಿಸುವರು. ನೈವೇದ್ಯಮಾಡುವಾಗ ಯಾರನ್ನೋ ತಡೆಯುವಂತೆ " ನಿಲ್ಲು, ನಿಲ್ಲು; ಸ್ವಲ್ಪ ನಿಲ್ಲು! ಅವಸರವೇಕೆ? ಮಂತ್ರ ಹೇಳಿದ ಮೇಲೆ ಉಣ ಬಹುದಂತೆ!" ಎಂದು ಕೂಗುವರು. ಕೆಲವು ಸಾರಿ ಬಹಳ ಮುದ್ದಿನಿಂದ ವಿಗ್ರಹದ ಮುಖದ ಬಳಿಗೆ ಅನ್ನದ ತುತ್ತನ್ನು ಹಿಡಿದು " ತಿನ್ನಮ್ಮಾ, ಚೆನ್ನಾಗಿದೆ ತಿನ್ನು" ಎನ್ನುತ್ತ ತುಸಹೊತ್ತಿನ ಮೇಲೆ, "ಹಾಗಾದರೆ ನಿನಗೆ ಬೇಡವೇ? ಏನೆಂದೆ? ನಾನೇ ತಿನ್ನಬೇಕೇ? ಹಾಗೆಯೇ ಆಗಲಿ!" ಎಂದು ತುತ್ತನ್ನು ತಮ್ಮ ಬಾಯಿಗೆ ಹಾಕಿ ಕೊಳ್ಳುವರು. ಉಳಿದುದನ್ನು ಪುನಃ ತಾಯಿಯ ಬಾಯಿಗೆ ಹಿಡಿದು " ಹುಂ, ನಾನು ತಿಂದಾಯಿತು; ಇನ್ನು ನೀನು ತಿನ್ನು!" ಎಂದು ಹಠಮಾಡುವರು. ದೇವಿಯ ಸಿಂಹಾಸನದ ಮೇಲೆ ಹತ್ತಿ ಗಾನಮಾಡುತ್ತಾ ಆಕೆಯ ಕೈ ಹಿಡಿದು ಕೊಂಡು ಕುಣಿದಾಡುವರು. ದೇವಿಯನ್ನು ಬೆಳ್ಳಿಯ ಮಂಚದ ಮೇಲೆ ಮಲಗಿಸು ವುದಕ್ಕೆ ಹೋಗಿ "ಏನೆಂದೆ? ನಾನೂ ಮಲಗಬೇಕೇ? ಆಗಲಮ್ಮ, ನಿನ್ನಿಷ್ಟ!"

ಎಂದು ತಾವೂ ಮಲಗುವರು. ಶಿಲೆ ಚಿದ್ಘನಮೂರ್ತಿಯಾಯಿತು. ವಿಗ್ರಹವು ಉಸಿರಾಡಿತು. ಭಕ್ತನು ಪರೀಕ್ಷೆಗಾಗಿ ಒಂದು ಹುಲ್ಲಿನ ಎಸಳನ್ನು ಮೂಗಿನ ಬಳಿ ಹಿಡಿದನು. ಶಿವ ಶಿವಾ! ಮೂಗಿನ ಉಸಿರು ಹುಲ್ಲೆಸಳನ್ನು ಅಲ್ಲಾಡಿಸಿತು! ರಾತ್ರಿ ದೀಪದ ಬೆಳಕಿನಲ್ಲಿ ನೋಡಿದರೆ ವಿಗ್ರಹಕ್ಕೆ ನೆರಳೇ ಇಲ್ಲ! ವಿಗ್ರಹವು ಸ್ಥೂಲ ಶಿಲೆಯಾಗಿದ್ದರಲ್ಲವೇ ಅದಕ್ಕೆ ಛಾಯೆ ಇರುವುದು! ಸೂಕ್ಷ್ಮತಮ ಚೇತನವಾದರೆ ಅದಕ್ಕೆ ನೆರಳೆಲ್ಲಿ? ಸರ್ವಜ್ಯೋತಿಗೂ ಆಧಾರವಾದ ಜ್ಯೋತಿಗೆ ಛಾಯೆಯುಂಟೇ?

ಒಂದು ದಿನ ಸಂಜೆ. ದಿನದ ಪೂಜೆಯ ಕರ್ಮಕ್ರಿಯೆಗಳೆಲ್ಲಾ ಮುಗಿದುವು. ಪರಮಹಂಸರು ತಾಯಿಯನ್ನು ಪದ್ಧತಿಯಂತೆ ಹಾಸಿಗೆಯ ಮೇಲೆ ಮಲಗಿಸಿ ಗುಡಿಯ ಬಾಗಿಲು ಹಾಕಿಕೊಂಡು ತಮ್ಮ ಕೊಟಡಿಗೆ ಬಂದರು. ತಾವೂ ತಮ್ಮ ಶಯ್ಯೆಯ ಮೇಲೆ ಬಿದ್ದುಕೊಂಡರು. ನಿದ್ದೆ ಬರಲಿಲ್ಲ. ಹಠಾತ್ತಾಗಿ ಕೈಬಳೆಗಳ ಮತ್ತು ನೂಪುರಗಳ ಕಿಂಕಿಣಿ ಕೇಳಬಂದಿತು. ಹುಡುಗಿಯೊಬ್ಬಳು ಕುಣಿಕುಣಿದು ಮಹಡಿಯ ಮೇಲೆ ಏರುವಂತೆ ಸದ್ದಾಯಿತು. ಕನಸಿರಬಹುದು ಎಂದುಕೊಂಡರು. ಇಲ್ಲ; ಎಚ್ಚತ್ತಿದ್ದಾರೆ! ಎದೆ ಬಡಿದುಕೊಳ್ಳಲಾರಂಭಿಸಿತು. ಬಾಗಿಲು ತೆರೆದು ಹೊರಗೆಹೋದರು. ವಿಸ್ತಾರವಾದ ಅಂಗಣದಲ್ಲಿ ನಿಂತು ಮೇಲೆ ನೋಡಿದರು. ನೋಡುತ್ತಾರೆ! ಜಗನ್ಮಾತೆ ಮೊದಲನೆಯ ಮಹಡಿಯಲ್ಲಿ ಸುಂದರ ತರಳೆಯ ರೂಪನ್ನು ಧರಿಸಿ ಮಂಜುಳನಾದದಿಂದ ಹರಿಯುವ ಗಂಗಾನದಿಯ ಕಡೆ ನೋಡುತ್ತಿದ್ದಾಳೆ! ರಾತ್ರಿ ಮನೋಹರವಾಗಿದೆ! ಕಲ್ಕತ್ತೆಯ ದೀಪ ಸಮೂಹವು ದೂರದ ದಿಗಂತದಲ್ಲಿ ಮಿಣುಕುತ್ತಿದೆ!

ಇದೆಲ್ಲವೂ ಎಂತಹ ವಿಚಿತ್ರ ದಿವ್ಯೋನ್ಮಾದ?

ಜಗತ್ತಿನ 'ಮಹಾಭಕ್ತರ ಮತ್ತು ರಸಋಷಿಗಳ ಜೀವನ ಚರಿತ್ರೆಗಳನ್ನು ಅರಿತವರಿಗೆ ಶ್ರೀರಾಮಕೃಷ್ಣರ ದಿವ್ಯೋನ್ಮಾದವು ಅರ್ಥಹೀನವಾಗುವುದಿಲ್ಲ. ಪ್ರೇಮಮಯ ಭಗವಂತನ ವಿಯೋಗದುಃಖದಿಂದ ಅಗ್ನಿಸ್ನಾನಮಾಡಿದ ಭಕ್ತನ ಆತ್ಮವು ಆತನ ದರ್ಶನದಿಂದ ಉನ್ಮತ್ತವಾಗುತ್ತದೆ. ಆಗ ಭಕ್ತನಿಗೆ ತನ್ನ ಇಷ್ಟದೈವದ ಹೊರತು ಉಳಿದುದೆಲ್ಲವೂ ಮಿಥ್ಯೆಯಾಗಿ ತೋರುತ್ತದೆ. ಇಷ್ಟದೈವವು ಆತನನ್ನು ಸಂತತವಾಗಿ ಸುತ್ತುತ್ತದೆ, ಪ್ರಭಾತ ಸೂರ್ಯನ ತೇಜಸ್ಸು ಶ್ವೇತಜಲ

ಧರವನ್ನು ತಪ್ತಕಾಂಚನ ರಾಗದಿಂದ ಸುತ್ತುವಂತೆ. ಆಗ ಭಕ್ತನು ಸಂಪ್ರದಾಯದ ವಿಧಿನಿಷೇಧಗಳನ್ನು ಅನೈಚ್ಛಿಕವಾಗಿಯೇ ಉಲ್ಲಂಘಿಸಿ ಭಗವಂತನೊಡನೆ ಸಲುಗೆ ಯಿಂದ ಆಚರಿಸುತ್ತಾನೆ. ಗಾಢಪ್ರೇಮವಿದ್ದಲ್ಲಿ ಸಂಪ್ರದಾಯದ ಸಂಕೋಲೆಗಳು ಕರಗಿಹೋಗುತ್ತವೆ. ಇಷ್ಟದೈವವು ಭಕ್ತನ ಮನದಲ್ಲಿರುವ ಬರಿಯ ಕಲ್ಪಿತಭಾವ ವಾಗಿರದೆ ರಕ್ತಮಾಂಸಗಳಿಂದ ಕೂಡಿದ ಮೂರ್ತಿಯಂತೆ ನಲಿಯುತ್ತದೆ. ಇದು ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರಥಮ ಸೋಪಾನ. ಈ ಅವಸ್ಥೆಯಲ್ಲಿ ಆರಾಧಕ ಆರಾಧ್ಯರು ಪ್ರಬಲ ಪ್ರೇಮಪಾಶಬದ್ಧರಾದರೂ ಭೇದಭಾವವು ಸ್ವಲ್ಪ ಇದ್ದೇ ಇರುತ್ತದೆ. ಆದರೆ ನಿಜವಾದ ಆರಾಧನೆಯ ಗುರಿ ಆರಾಧಕ ಆರಾಧ್ಯರ ಭೇದ ಭಾವ ಲೇಶಮಾತ್ರವೂ ಇಲ್ಲದ ಅಖಂಡಾದ್ವೈತ ತಾದಾತ್ಮ್ಯತೆ ಎಂಬುದನ್ನು ಪರಮಹಂಸರ ಉತ್ತರೋತ್ತರ ಜೀವನಾನದಿಂದ ತಿಳಿಯುತ್ತೇವೆ.

ಏಕಮೇವಾದ್ವಿತೀಯವಾದ ತಾದಾತ್ಮ್ಯತೆಯೇ ಮೂರ್ತಿಪೂಜೆಯ ಗಂತವ್ಯ ಲಕ್ಷ್ಯ. ಅದೇ ಸರ್ವಸಾಧನೆಗಳ ಚರಮ ಸಿದ್ಧಿ. ಅಲ್ಲಿ ಭಕ್ತಭಗವಂತರಿ ಗಿರುವುದು ಅಭೇದ ಭಾವ. ಆ ಮಹಾತಲ್ಲೀನತೆಯೊಂದರಲ್ಲಿಯೇ ಮೂರ್ತಿ ಪೂಜೆಯ ಅಭಾವವು ಸಾಧ್ಯ. ಉಳಿದುದೆಲ್ಲವೂ ಮೂರ್ತಿಪೂಜೆ. ಅಹಂಕಾರದ ಸಂಪೂರ್ಣ ವಿನಾಶದಲ್ಲಿಯೇ ಮೂರ್ತಿಪೂಜೆಯ ವಿನಾಶವಿದೆ. ಏಕೆಂದರೆ, "ನಾನು" ಎಂಬ ಭಾವವೇ ನಾವು ಆರಾಧಿಸುವ ಒಂದು ಮಹಾಮೂರ್ತಿ. ಆ ಮೂರ್ತಿಭಂಜನೆಯಲ್ಲಿಯೇ ಸತ್ಯಸಾಕ್ಷಾತ್ಕಾರವಿರುವುದು; ಎಂದರೆ ಮೂರ್ತಿ ಭಜನೆ ಮೂರ್ತಿಭಂಜನೆಯಿಂದಲೇ ಸಾರ್ಥಕವಾಗುವುದು. ಭಕ್ತನು ಸ್ಥೂಲ ವಿಗ್ರಹಗಳ ಆರಾಧನೆಯಿಂದ ಸೂಕ್ಷ್ಮ ವಿಗ್ರಹಗಳ ಆರಾಧನೆಗೆ ಏರಿ, ತುತ್ತ ತುದಿಗೆ ಮೂರ್ತಿಪೂಜೆಯಿಂದ ಉತ್ತೀರ್ಣನಾಗಿ ಅತೀತವನ್ನು ಸೇರುತ್ತಾನೆ. ಮಣ್ಣಿನ ಕಲ್ಲಿನ ಬೊಂಬೆಗಳು ಮಾತ್ರವೇ ಮೂರ್ತಿಗಳಲ್ಲ. ಒಂದು ಪುಸ್ತಕ, ಒಂದು ಹೆಸರು, ಒಂದು ಸ್ಥಾನ, ಒಂದು ಮಂದಿರ, ಒಂದು ಭಾವ ಇವುಗಳೆಲ್ಲವೂ ಮೂರ್ತಿಗಳೇ. ಕೆಲವು ಸ್ಥೂಲ, ಮತ್ತೆ ಕೆಲವು ಸೂಕ್ಷ್ಮ. ವೇದ ಕೊರಾನ್ ಬೈಬಲ್ಲುಗಳನ್ನಾಗಲಿ, ಚರ್ಚು ಮಸೀದಿ ದೇವಾಲಯಗಳನ್ನಾಗಲಿ, ಕ್ರಿಸ್ತ ಶಿವ ಮಹಮ್ಮದರನ್ನಾಗಲಿ ಪವಿತ್ರವೆಂದು ಗೌರವಿಸುವುದೂ ಮೂರ್ತಿಪೂಜೆ. ಆದ್ದರಿಂದ ಎಲ್ಲ ಮತಗಳೂ ಎಲ್ಲ ಮಾನವರೂ—ಅಹಂಕಾರ ಎಂಬ ವಿಗ್ರಹವನ್ನು

ನಾಶಮಾಡಿಕೊಂಡಿರುವ ಮುಕ್ತನ ಹೊರತು—ವಿಗ್ರಹಾರಾಧಕರೇ. ಅಹಂಭಾವ ವಿರುವವರೆಗೆ ಮನುಷ್ಯನ ಭಾಗಕ್ಕೆ 'ನಿರಾಕಾರ' ಎಂಬುದು ಒಂದು ಬರಿಯ ಮಾತು. ಎಂತಹ ಮೇಧಾವಿಗಾದರೂ ನಿರಾಕಾರವು ಆಲೋಚನೆಯ ವಸ್ತು ವಾಗದು. ಕಡೆಗೆ ಆಕಾಶ ಕಾಲ ದೇಶಗಳಾದರೂ ಆತನ ಮನಸ್ಸಿನ ಮಹಾ ಮೂರ್ತಿಗಳಾಗಿ ಉಳಿಯುವುವು. ನಿರಾಕಾರವಾಗುವುದೇ ನಿರಾಕಾರವನ್ನು ಅರಿಯುವುದು ; ಅಲ್ಲಿ ಅರಿವು ಇರವಾಗುತ್ತದೆ. ಅಲ್ಲಿ ಮೂರ್ತಿಯೂ ಇರದು ; ಪೂಜೆಯೂ ಇರದು. ಆರಾಧಕ ಆರಾಧ್ಯರಿಗೆ ಅದ್ವಯಭಾವವಿರುತ್ತದೆ. ಶ್ರೀರಾಮಕೃಷ್ಣ ಪರಮಹಂಸರ ಸಾಧನೆ ಸ್ಥೂಲ ವಿಗ್ರಹಾರಾಧನೆಯಿಂದ ಪ್ರಾರಂಭವಾಗಿ ಸೂಕ್ಷ್ಮಭಾವದ ಆರಾಧನೆಗೆ ಏರಿ, ಕಡೆಗೆ ಸಿದ್ಧಿಯ ನಿರಾಕಾರತೆ ಯಲ್ಲಿ ಪರಿಸಮಾಪ್ತವಾಯಿತು ಎಂಬುದನ್ನು ಮುಂದೆ ತಿಳಿಯುತ್ತೇವೆ. ಬ್ರಹ್ಮದ ಪ್ರತೀಕವಾದ ಸಮಸ್ತ ಜಗತ್ತೇ—"ನಾನು" ಎಂಬ ಭಾವವನ್ನು ಒಳಕೊಂಡು— ಅಪ್ರತಿಹತವಾದ ಮಹಾಮೂರ್ತಿಯಾಗಿರಲು ಅದನ್ನು ಒಡೆಯುವವನೇ ನಿಜ ವಾದ ವಿಗ್ರಹಭೇದಕನು. ಉಳಿದವರೆಲ್ಲರೂ ಮಣ್ಣುಮರಗಳನ್ನು ಪೂಜಿಸುವ ಕಿರಾತರಿಂದ ಹಿಡಿದು ಕ್ರಿಸ್ತ ವಿಷ್ಣು ಅಲ್ಲರನ್ನು ಪೂಜಿಸುವ ಭಕ್ತರನ್ನೊಳಕೊಂಡು ಸಗುಣಸಾಕಾರ ಬ್ರಹ್ಮೋಪಾಸಕರ ವರೆಗೂ ವಿಗ್ರಹಾರಾಧಕರು.[1]

ದಿವ್ಯೋನ್ಮಾದಗ್ರಸ್ತರಾದ ಮೇಲೆ ಪರಮಹಂಸರು ತಮ್ಮ ಪೂಜೆಯ ಕಾರ್ಯಗಳನ್ನು ಯಥಾವಿಧಿಯಾಗಿ ಮಾಡಲಾರದೆಹೋದರು. ದೇವಾಲಯದ ಅಧಿಕಾರಿಗಳೆಲ್ಲರೂ ಪೂಜಾರಿಗೆ ಹುಚ್ಚು ಹಿಡಿದಿದೆಯೆಂದು ತಿಳಿದು ವಿಷಯವೆಲ್ಲ ವನ್ನೂ ವಿವರವಾಗಿ ಬರೆದು ಯಜಮಾನರಿಗೆ ದೂರು ಕಳುಹಿಸಿದರು. ಅದಕ್ಕೆ ಉತ್ತರವಾಗಿ ಮಥುರನಾಥನು "ನಾನೇ ಬಂದು ವಿಚಾರಿಸುತ್ತೇನೆ. ಅದುವರೆಗೆ ಯಾರೂ ಪೂಜಾರಿಯ ಗೋಜಿಗೆ ಹೋಗಬಾರದು" ಎಂದು ಕಾಗದ ಬರೆದನು. ಅದರಂತೆಯೇ ಒಂದು ದಿನ ಆತನು ರಹಸ್ಯವಾಗಿ ದಕ್ಷಿಣೇಶ್ವರಕ್ಕೆ ಬಂದು ಶ್ರೀರಾಮಕೃಷ್ಣರ ಆರಾಧನೆಯನ್ನು ಸಮೀಕ್ಷಿಸಿದನು. ನೋಡಿ ಆಶ್ಚರ್ಯದಿಂದ

---

[1] ಆಟದ ಹಣ್ಣೂ, ಆಟದ ಆನೆಯೂ ನಿಜವಾದ ಹಣ್ಣನ್ನೂ ಜೀವದ ಆನೆಯನ್ನೂ ನಮ್ಮ ನೆನಪಿಗೆ ತರುವಂತೆ ನಾವು ಆರಾಧಿಸುವ ವಿಗ್ರಹಗಳು ಶಾಶ್ವತನೂ ನಿರಾಕಾರನೂ ಆದ ಭಗವಂತನನ್ನು ನಮ್ಮ ಜ್ಞಾಪಕಕ್ಕೆ ತರುತ್ತವೆ.—ಉ.ವಾ.

ಮೂಕನಾಗಿ ನಿಂತನು. ಪೂಜೆಯಲ್ಲಿ ತಲ್ಲೀನರಾಗಿದ್ದ ಶ್ರೀರಾಮಕೃಷ್ಣರು ಸಮೀಪದಲ್ಲಿದ್ದ ಆತನನ್ನು ಸ್ವಲ್ಪವೂ ಗಮನಿಸದೆ ಇದ್ದರು. ಎಲ್ಲವನ್ನೂ ಕಂಡು ಮಥುರನು ದೇವಾಲಯ ನಿರ್ಮಾಣವು ಸಾರ್ಥಕವಾಯಿತೆಂದು ಆನಂದಿತನಾಗಿ ಏನನ್ನೂ ಹೇಳದೆ ಹಿಂದಿರುಗಿದನು. ಮರುದಿನ ಗುಡಿಯ ಅಧಿಕಾರಿಗಳಿಗೆ ಒಂದು ಕಾಗದ ಬಂತು. ಅದರಲ್ಲಿ "ಅರ್ಚಕರು ಮನಬಂದಂತೆ ಪೂಜಿಸಲಿ. ಯಾರೂ ಅವರಿಗೆ ನಿರೋಧಮಾಡಬಾರದು" ಎಂದಿತ್ತು.

ಪರಮಹಂಸರ ದಿವ್ಯೋನ್ಮಾದವನ್ನು ಕಣ್ಣಾರೆ ಕಂಡು ಹಿಂದಿರುಗಿದ ಮಥುರ ಬಾಬುವು ರಾಣಿ ರಾಸಮಣಿಗೆ ಎಲ್ಲ ಸಂಗತಿಗಳನ್ನೂ ಸವಿಸ್ತಾರವಾಗಿ ತಿಳಿಸಿದನು. ರಾಣಿಗೆ ಮೊದಲಿನಿಂದಲೂ ಪರಮಹಂಸರ ದಿವ್ಯಭಾವದಲ್ಲಿ ಸಂಪೂರ್ಣ ಶ್ರದ್ಧೆಯಿತ್ತು. ಅಳಿಯನ ಅನುಭವವನ್ನು ಕೇಳಿ ಆಕೆ ಉತ್ಸಾಹಗೊಂಡು ತಾನೇ ದಕ್ಷಿಣೇಶ್ವರಕ್ಕೆ ಬಂದಳು. ದಿವಿಜ ನದಿಯಲ್ಲಿ ಮಿಂದು ಮಡಿಯುಟ್ಟುಕೊಂಡು ಭವತಾರಿಣಿಯ ಮಂದಿರಕ್ಕೆ ಪೂಜೆಗಾಗಿ ನಡೆದಳು. ಪ್ರಾತಃಕಾಲದ ಪೂಜೆ ಪೂರೈಸಿತ್ತು. ಪರಮಹಂಸರು ಒಂದು ಧ್ಯಾನಾಸನದಲ್ಲಿ ಸುಮ್ಮನೆ ಕುಳಿತಿದ್ದರು. ರಾಣಿಯೂ ಒಂದೆಡೆ ಕುಳಿತುಕೊಂಡಳು. ಆಕೆ ತನ್ನ ಪದ್ಧತಿಯಂತೆ ಕೀರ್ತನೆಗಳನ್ನು ಹಾಡಬೇಕೆಂದು ಶ್ರೀರಾಮಕೃಷ್ಣರನ್ನು ಬೇಡಿದಳು. ಅವರು ಒಪ್ಪಿ ಭಾವಪೂರ್ಣವಾಗಿ ಭಕ್ತಿಗೀತೆಗಳನ್ನು ಹಾಡತೊಡಗಿದರು. ಮಂದಿರವೆಲ್ಲಾ ಅಪೂರ್ವ ಮಾಧುರ್ಯದಿಂದ ತುಂಬಿದಂತಾಯಿತು. ಹಾಡುತ್ತ ಹಾಡುತ್ತ ರಾಣಿಯ ಕಡೆ ನೋಡಿದರು. ರಾಣಿಯ ಗಮನವು ಎಲ್ಲಿಯೋ ಹೋಗಿತ್ತು. ಪರಮಹಂಸರು ತಟಕ್ಕನೆ ಮೇಲೆದ್ದು "ಇಲ್ಲಿಯೂ ಅದೇ ಯೋಚನೆ!" ಎಂದು ಭರ್ತ್ಸನೆಮಾಡಿ ಹಿಂದುಮುಂದು ನೋಡದೆ ಕಪಾಲಕ್ಕೆ ಎರಡು ಪೆಟ್ಟುಕೊಟ್ಟರು! ಅಲ್ಲಿದ್ದವರೆಲ್ಲ ಗಾಬರಿಯಾದರು. ಗುಜುಗುಜು ಗುಲ್ಲು ಹಬ್ಬಿತು. ಪೆಟ್ಟುಕೊಟ್ಟವನೂ ಪೆಟ್ಟು ತಿಂದವಳೂ ಇಬ್ಬರು ಹೊರತು ಉಳಿದ ಎಲ್ಲರೂ ಅಶಾಂತರಾದರು. ಆದರೆ ಯಾರಿಗೆ ಏನು ಹೇಳಲಿಕ್ಕೂ ಏನು ಮಾಡಲಿಕ್ಕೂ ಧೈರ್ಯಬರಲಿಲ್ಲ. ರಾಣಿಗೆ ಮಾತ್ರ ಆಶ್ಚರ್ಯವಾಯಿತು. ಆಕೆ ಯಾವುದೋ ಮೊಕದ್ದಮೆಯನ್ನು ಕುರಿತು ಆಲೋಚಿಸುತ್ತಿದ್ದಳು. ಕೀರ್ತನೆಯ ಮೇಲೆ ಗಮನವಿರಲಿಲ್ಲ. ತನ್ನ ಕೊಟಡಿಗೆ ಹಿಂದಿರುಗಿದ ಮೇಲೆ ಪರಿವಾರದವರಿಗೆ ಹೇಳಿದಳು: "ನಿಮಗೆ ತಿಳಿಯದು.

ಜಗನ್ಮಾತೆಯೇ ನನ್ನನ್ನು ಶಿಕ್ಷಿಸಿದವಳು. ಅದರಿಂದ ನನಗೆ ಬೆಳಕು ಬಂದಂತಾಯಿತು.'' ತನ್ನ ಅಂತರಂಗವನ್ನೇ ಹೊಕ್ಕು ನೋಡಿದ ಅರ್ಚಕನಲ್ಲಿ ಆಕೆಗೆ ಉರುತರ ಭಕ್ತಿಯುಂಟಾಯಿತು.

ಜಗನ್ಮಾತೆಯ ಪ್ರಥಮ ದರ್ಶನವಾದ ಮೇಲೆ ಪರಮಹಂಸರು ಅನೇಕ ಭಾವ ಸಾಧನೆಗಳನ್ನು ಕೈಕೊಂಡು ಎಲ್ಲದರಲ್ಲಿಯೂ ಉತ್ತೀರ್ಣರಾದರು. ಶಾಸ್ತ್ರಗಳು ಐದು ವಿಧವಾದ ಭಾವಸಾಧನೆಗಳನ್ನು ಕುರಿತು ಹೇಳುತ್ತವೆ. ಭಕ್ತನು ಈಶ್ವರನನ್ನು ಐದು ವಿಧವಾದ ಸಂಬಂಧಗಳಿಂದ ಆರಾಧಿಸಬಹುದು. ಮೊದಲನೆಯದು ಶಾಂತಭಾವ—ವೇದೋಪನಿಷತ್ತುಗಳೇ ಮೊದಲಾದ ಪವಿತ್ರಶಾಸ್ತ್ರಗಳನ್ನು ಅಧ್ಯಯನಮಾಡಿ, ಪರಮಾತ್ಮನು ಸರ್ವಾಂತರ್ಯಾಮಿಯಾಗಿರುವನೆಂದು ತಿಳಿದು ಸರ್ವೇಂದ್ರಿಯಗಳನ್ನೂ ವಸ್ತುವಿಷಯಗಳಿಂದ ಹಿಂದಿರುಗಿಸಿ, ಜಗತ್ತಿನ ಅಂತರಾತ್ಮವಾದ ಬ್ರಹ್ಮವೊಂದೇ ಪರಮ ಸತ್ಯವೆಂದು ಅದನ್ನೇ ಧ್ಯಾನಿಸುತ್ತಾ, ಸುಖ ದುಃಖ ಶೀತೋಷ್ಣ ಜಯಾಪಜಯಗಳಲ್ಲಿ ಸಮದೃಷ್ಟಿಯಿಂದ ವರ್ತಿಸುತ್ತಾ, ಸದಾ ಶಾಂತಚಿತ್ತರಾಗಿರುವ ಧ್ಯಾನಜೀವಿಗಳೇ ಶಾಂತಭಾವ ಮಾರ್ಗಾನುಗಾಮಿಗಳು. ಇಂತಹ ಋಷಿಗಳು ಪ್ರಪಂಚದ ಗಲಿಬಿಲಿಗೆ ದೂರವಾಗಿದ್ದುಕೊಂಡು ಪ್ರಕೃತಿ ಮಾತೆ ದಾನಮಾಡುವ ಕಂದಮೂಲಗಳನ್ನು ಭಕ್ಷಿಸುತ್ತಾ ಆಡಂಬರವಿಲ್ಲದೆ ಜೀವನಯಾಪನೆ ಮಾಡುವರು. ಈ ಭಾವವು ಸ್ವಲ್ಪಮಟ್ಟಿಗೆ ಜ್ಞಾನಸಂಮಿಶ್ರವಾದುದೆಂದೇ ಹೇಳಬೇಕು. ಇದಕ್ಕೆ ವೇದಕಾಲದ ಋಷಿಗಳೇ ಉದಾಹರಣೆ. ಎರಡನೆಯದು ದಾಸ್ಯಭಾವ—ಎಂದರೆ ಸೇವಕನಿಗೆ ಯಜಮಾನನಲ್ಲಿರುವ ಸಂಬಂಧ. ಚಿತ್ರವಿಚಿತ್ರವಾದ ವಿಶ್ವವಿರಚನೆಯನ್ನು ನೋಡಿದ ಯಾವನಿಗಾದರೂ ಯಾವನೋ ಒಬ್ಬ ಸರ್ವಶಕ್ತನೂ ಸರ್ವವ್ಯಾಪಿಯೂ ಸರ್ವಜ್ಞಾನಿಯೂ ಅಪಾರ ಕರುಣಾಶಾಲಿಯೂ ಆಗಿರುವ ಜಗದುದಯಕಾರಣನು ನಿಶ್ಚಿತ ನಿಯಮಗಳಿಗನುಸಾರವಾಗಿ ಅಧಿಕಾರ ಮಾಡುತ್ತಿರುವನೆಂದು ಮನಸ್ಸಿಗೆ ಹೊಳೆಯುವುದು. ಅಂತಹ ಅನಂತ ಪ್ರೇಮಸ್ವರೂಪಿಯಾದ ಪರಮ ಸ್ವಾಮಿಗೆ ಸ್ವಸುಖಾಭಿಲಾಷೆಗಳನ್ನೆಲ್ಲಾ ತ್ಯಜಿಸಿಯಾದರೂ ಸೇವೆಮಾಡಿ ಆತನನ್ನು ಒಲಿಸಿಕೊಂಡು ಕೃಪೆಗೆ ಪಾತ್ರರಾಗಬೇಕೆಂದು ಕೆಲವರ ಆಶೆ. ಅಂಥವರು ತಮಗೂ ತಮ್ಮ ಆ ಇಷ್ಟ ದೈವಕ್ಕೂ ಕಿಂಕರನಿಗೂ ರಾಜನಿಗೂ ಇರುವ ಸಂಬಂಧವನ್ನು ಕಲ್ಪಿಸುತ್ತಾರೆ.

ಇದಕ್ಕೆ ಆದರ್ಶಪ್ರಾಯವಾದ ಉದಾಹರಣೆ ಎಂದರೆ ಹನುಮಂತನಿಗೂ ಶ್ರೀ ರಾಮಚಂದ್ರನಿಗೂ ಇರುವ ಸಂಬಂಧ. ಮೂರನೆಯದು ಸಖ್ಯಭಾವ—ಎಂದರೆ ಮಿತ್ರರಿಗಿರುವ ಪರಸ್ಪರ ಸಂಬಂಧ. ಇದರಲ್ಲಿ ಭಕ್ತನು ತನ್ನ ಇಷ್ಟದೈವವನ್ನು ಗೆಳೆಯನಂತೆ ಭಾವಿಸಿ ಆತನ ಸಾನ್ನಿಧ್ಯದಲ್ಲಿ ಸ್ವಲ್ಪವೂ ಭಯವಿಲ್ಲದೆ ಸಲುಗೆ ಯಿಂದಿರುತ್ತಾನೆ. ತನ್ನ ಮಿತ್ರನಿಗೆ ಸಂತೋಷದಾಯಕವಾಗಿರುವುದೇ ಭಕ್ತನಿಗೆ ಪರಮ ತೃಪ್ತಿ. ಅರ್ಜುನ ಶ್ರೀಕೃಷ್ಣರಿಗಿರುವ ಭಾವವು ಇದಕ್ಕೆ ಉದಾಹರಣೆ. ನಾಲ್ಕನೆಯದು ವಾತ್ಸಲ್ಯಭಾವ—ಎಂದರೆ ಮಾತಾಪಿತೃಗಳಿಗೆ ತಮ್ಮ ಶಿಶು ವಿನಲ್ಲಿರುವ ಮೃದುಮಧುರವಾದ ಕೋಮಲ ಸಂಬಂಧ. ಇಲ್ಲಿ ಭಯಭಕ್ತಿಗಳಿಗೆ ಸ್ವಲ್ಪವೂ ಅವಕಾಶವಿಲ್ಲ. ಏಕೆಂದರೆ, ಭಕ್ತನು ಇಷ್ಟದೈವವನ್ನು ತನ್ನ ಮಗು ವೆಂದೇ ಭಾವಿಸುತ್ತಾನೆ. ಎಂದ ಮೇಲೆ ತನ್ನ ಪ್ರೀತಿಯ ವಸ್ತುವಿಗಿಂತ ತಾನೇ ಬಲಿಷ್ಠನಾಗಿರುತ್ತಾನೆ. ತನ್ನ ಶಿಶುವನ್ನು ಲಾಲಿಸಿ ಪಾಲಿಸಿ ಮುದ್ದುಗೈವು ದೊಂದೇ ಆತನ ಆಕಾಂಕ್ಷೆ. ಶ್ರೀಕೃಷ್ಣನ ತಂದೆತಾಯಿಗಳ ಭಕ್ತಿ ಇದಕ್ಕೆ ಉದಾ ಹರಣೆ. ಐದನೆಯದು ಮಧುರಭಾವ—ಎಂದರೆ ಪ್ರಿಯಪ್ರೇಯಸಿಯರಲ್ಲಿರುವ ಪರಸ್ಪರ ಅನುರಾಗದ ಸಂಬಂಧ. ಈ ಪ್ರೇಮಬಂಧನವು ವಜ್ರಸಮನಾದುದು. ಪ್ರಣಯಿನಿ ಪ್ರಣಯಿಯ ವಿಯೋಗವನ್ನು ಕ್ಷಣಮಾತ್ರವಾದರೂ ಸಹಿಸಳು. ವಾತ್ಸಲ್ಯಭಾವದಲ್ಲಿ ಕಂಡುಬರಬಹುದಾದ ಅಲ್ಪಸ್ವಲ್ಪ ಪೃಥಗ್ಭಾವವೂ ಮಧುರ ಭಾವದಲ್ಲಿ ಲಯಹೊಂದುತ್ತದೆ. ಈ ಭಾವಸಾಧನೆಯಲ್ಲಿ ಪರಮಾತ್ಮನು ಜೀವನಿಗೆ ಇನಿಯನಾಗುತ್ತಾನೆ, ಎಂದರೆ ತನ್ನ ಒಂದು ಬಹು ಮುಖ್ಯ ಅಂಶವೇ ಆಗಿ ಬಿಡುತ್ತಾನೆ. ಇತರ ಭಾವಗಳಿಗಿಂತ ಇದು ಮಹೋನ್ನತವಾದುದು. ಈ ಭಾವ ದಲ್ಲಿ ಇತರ ಎಲ್ಲ ಭಾವಗಳೂ ಐಕ್ಯವಾಗುತ್ತವೆ. ಜಗತ್ತಿನ ಅನೇಕ ರಸಋಷಿಗಳು ಮಧುರಭಾವ ಸಾಧಕರಾಗಿರುತ್ತಾರೆ. ಬೃಂದಾವನದ ಗೋಪಿಯರಿಗೆ ಶ್ರೀಕೃಷ್ಣ ನಲ್ಲಿದ್ದ ಸಂಬಂಧವೂ ಇದಕ್ಕೆ ಉದಾಹರಣೆ.

ಶ್ರೀರಾಮಕೃಷ್ಣರು ಮೇಲೆ ಹೇಳಿರುವ ಐದು ಭಾವಗಳನ್ನೂ ಸಾಧಿಸಿ ಒಂದೇ ಗಮ್ಯವನ್ನು ಮುಟ್ಟಿದರು. ಪ್ರಕೃತದಲ್ಲಿ ಅವರ ದಾಸ್ಯಭಾವಸಾಧನೆ ಯನ್ನು ಸಮಾಲೋಚಿಸುತ್ತೇವೆ.

ರಘುವೀರನು ಖುದಿರಾಮನ ಮನೆದೇವರಾಗಿದ್ದನು. ಗದಾಧರನೂ ರಘು

ವೀರನಲ್ಲಿ ಮಹಾಭಕ್ತಿಯನ್ನಿಟ್ಟಿದ್ದನು. ಜಗನ್ಮಾತೆಯಾದ ಕಾಳಿಯ ದರ್ಶನ ವಾದ ಮೇಲೆ ಪರಮಹಂಸರ ದೃಷ್ಟಿ ಶ್ರೀರಾಮಚಂದ್ರನ ಕಡೆಗೆ ತಿರುಗಿತು. ಶ್ರೀರಾಮನನ್ನು ಹೊಂದಬೇಕಾದರೆ 'ಮಹಾವೀರ'ನಾಗಬೇಕೆಂದು ನಿರ್ಧರಿಸಿ ದರು. ಅಂದಿನಿಂದ ತಮ್ಮಲ್ಲಿ ಹನುಮಂತನ ದಾಸ್ಯಭಾವವನ್ನು ಆರೋಪಿಸಿಕೊಳ್ಳ ತೊಡಗಿದರು. ಅವರೇ ಹೀಗೆಂದು ಹೇಳಿದ್ದಾರೆ: "ಹನುಮಂತ ದೇವನ ಮಹಾ ಮೂರ್ತಿಯನ್ನು ಧ್ಯಾನ ಮಾಡುತ್ತ ಮಾಡುತ್ತ ನನ್ನ ವೈಶಿಷ್ಟ್ಯವೇ ಸಂಪೂರ್ಣ ವಾಗಿ ವಿಸ್ಮೃತವಾಯಿತು. ದೈನಂದಿನ ಆಹಾರ ಆಚಾರಗಳಲ್ಲಿ ಹನುಮಂತನಂತೆ ಆಗತೊಡಗಿದೆನು. ನಾನು ಅನುಕರಣಮಾಡಲಿಲ್ಲ, ಸ್ವಾಭಾವಿಕವಾಗಿಯೇ ಹಾಗೆ ಆಯಿತು. ನಡೆಯುವುದಕ್ಕೆ ಬದಲಾಗಿ ನೆಗೆಯುತ್ತಿದ್ದೆ. ಸೊಂಟಕ್ಕೆ ಬಿಗಿದ ಬಟ್ಟೆಯ ತುದಿ ಬಾಲದಂತೆ ಜೋಲಾಡುತ್ತಿತ್ತು. ಹಣ್ಣುಗೆಡ್ಡೆಗಳನ್ನೇ ತಿನ್ನು ತ್ತಿದ್ದೆ. ಸಿಪ್ಪೆ ಸುಲಿಯುತ್ತಲೂ ಇರಲಿಲ್ಲ. ಮರಗಳ ಮೇಲೆ 'ರಘುವೀರ! ರಘುವೀರ!' ಎಂದು ಕಿರಿಚುತ್ತ ಬಹುಕಾಲ ಕಳೆಯುತ್ತಿದ್ದೆ. ನನ್ನ ಕಣ್ಣುಗಳೂ ಮಂಗನ ಕಣ್ಣುಗಳಂತೆ ಚಂಚಲವಾಗಿದ್ದುವು. ಎಲ್ಲದಕ್ಕಿಂತಲೂ ಆಶ್ಚರ್ಯ ವಾದುದೆಂದರೆ—ನನ್ನ ಬೆನ್ನುಮೂಳೆಯ ತುದಿ ಒಂದಂಗುಲ ಉದ್ದವಾಯಿತು! ಆ ಸಾಧನೆ ಪೂರೈಸಿದ ಮೇಲೆ ಕ್ರಮೇಣ ಮೊದಲಿನಂತೆಯೇ ಆಯಿತು. ಎಲ್ಲ ವಿಧದಲ್ಲಿಯೂ ಕಪಿಯನ್ನೇ ಹೋಲುತ್ತಿದ್ದೆ." ದಾಸ್ಯಭಾವ ಸಾಧನೆಯ ತುದಿಯಲ್ಲಿ ಅವರಿಗೆ ಒಂದು ಅಪೂರ್ವ ದರ್ಶನವಾಯಿತು. ಒಂದು ದಿನ ಪಂಚವಟಿಯಲ್ಲಿ ಸುಮ್ಮನೆ ಕುಳಿತಿದ್ದರು. ಧ್ಯಾನಗೀನ ಮಾಡುತ್ತಿರಲಿಲ್ಲ. ಹಠಾತ್ತಾಗಿ ನಿರುಪಮ ಜ್ಯೋತಿರ್ಮಯಿ ಸ್ತ್ರೀಮೂರ್ತಿಯೊಂದು ಪ್ರತ್ಯಕ್ಷವಾಯಿತು. ನೋಡುತ್ತಾರೆ, ಆಕೆಯ ಪಾದದೆಡೆ ಹನುಮಂತದೇವನು ಕೈಮುಗಿದು ಕುಳಿತಿದ್ದಾನೆ! ಆಜನ್ಮ ದುಃಖಿನಿಯಾದ ಸೀತಾಮಾತೆಯೆಂದು ಗೊತ್ತಾಗಿ ಅಡ್ಡಬೀಳುವುದರಲ್ಲಿಯೇ ಆ ಮೂರ್ತಿ ಪರಮಹಂಸರ ದೇಹವನ್ನು ಪ್ರವೇಶಮಾಡಿಬಿಟ್ಟಿತು. ಆಗ ಅವರು ಆನಂದವಿಸ್ಮಯಗಳಿಂದ ಬಾಹ್ಯಜ್ಞಾನಶೂನ್ಯರಾಗಿ ನೆಲದ ಮೇಲೆ ಬಿದ್ದುಬಿಟ್ಟರು.

ಸದಾ ತದೇಕಧ್ಯಾನಸ್ಥರಾಗಿಯೂ ಪದೇ ಪದೇ ಭಾವಸಮಾಧಿಗ್ರಸ್ತ ರಾಗಿಯೂ ಆಗುತ್ತಿದ್ದ ಶ್ರೀರಾಮಕೃಷ್ಣರಿಗೆ ಭವತಾರಿಣಿಯ ಪೂಜೆಯನ್ನು ಪದ್ಧತಿಯಂತೆ ಮಾಡಲಾಗದೆ ಹೋಯಿತು. ಆದ್ದರಿಂದ ಅವರ ಕೋರಿಕೆ

ಯಂತೆ ಮಧುರನಾಥನು ಹೃದಯನನ್ನು ಆ ಕೆಲಸಕ್ಕೆ ನೇಮಿಸಿದನು.[1] ಅದಕ್ಕೆ ಇನ್ನೊಂದು ಕಾರಣವೂ ಇತ್ತು. ಕಠಿನ ಸಾಧನೆಗಳನ್ನು ಕೈಕೊಂಡ ಪರಮ ಹಂಸರ ದೇಹವು ಶಿಥಿಲವಾಯಿತು. ಯಾವುದೋ ನರಗಳ ಜಾಡ್ಯವಿರಬಹು ದೆಂದು ಮಧುರನೂ ಕೂಡ ಸಂದೇಹಪಟ್ಟು ಕಲ್ಕತ್ತೆಯಿಂದ ವೈದ್ಯನೊಬ್ಬನನ್ನು ಕರಯಿಸಿ ಔಷಧಿ ಕೊಡಿಸತೊಡಗಿದನು. ಇದೇ ಸಂದರ್ಭದಲ್ಲಿ ಆತನು, ಹದ್ದು-ಮೀರಿ ಸಾಧನೆಮಾಡಬಾರದೆಂದೂ ಪ್ರಕೃತಿಯ ನಿಯಮಗಳನ್ನು ಉಲ್ಲಂಘಿಸ ಬಾರದೆಂದೂ ಶ್ರೀರಾಮಕೃಷ್ಣರನ್ನು ಕೇಳಿಕೊಳ್ಳುವ ಸಮಯದಲ್ಲಿ "ದೇವರಿಗೂ ತನ್ನ ನಿಯಮಗಳನ್ನು ಮೀರಲು ಶಕ್ತಿಯಿಲ್ಲ." ಎಂದು ಹೇಳಿದ ಮಾತಿಗೆ ಪರಮಹಂಸರು "ಛೀ, ಎಂತಹ ಮೂರ್ಖಸಿದ್ಧಾಂತ ನಿನ್ನದು! ನಿಯಮಗಳನ್ನು ಮಾಡಿದವನು ಇಷ್ಟಬಂದರೆ ಅವುಗಳನ್ನು ಮುರಿದು ಹೊಸ ನಿಯಮಗಳನ್ನು ಮಾಡಲಾರನೆ?" ಎಂದರು. ಅದಕ್ಕೆ ಮಧುರನು "ಅದು ಹೇಗೆ? ಯಾವಾ ಗಲೂ ಕೆಂಪು ಹೂಗಳೇ ಬಿಡುವ ಗಿಡದಲ್ಲಿ ಬಿಳಿಯ ಹೂ ಬರುತ್ತದೇನು?" ಎಂದನು. "ಅದನ್ನು ಕೂಡ ಆತನು ಸುಲಭವಾಗಿ ಮಾಡಬಲ್ಲನು. ಎಲ್ಲವೂ ಆತನ ಇಚ್ಛೆ" ಎಂದರು ಪರಮಹಂಸರು. ಮಧುರನಾಥನಿಗೆ ಸಮಾಧಾನವಾಗ ಲಿಲ್ಲ. ಮರುದಿನ ದೇವಸ್ಥಾನದ ತೋಟದಲ್ಲ ಕೆಂಪು ದಾಸವಾಳದ ಗಿಡದಲ್ಲಿ ಒಂದು ಬಿಳಿಯ ಹೂ ಬಿಟ್ಟಿತ್ತು. ಪರಮಹಂಸರು ಅದನ್ನು ಮಧುರನಾಥನಿಗೆ ತೋರಿಸಿ ಅವನ ಸಂದೇಹ ಪರಿಹಾರಮಾಡಿದರಂತೆ.

ವೈದ್ಯನ ಔಷಧಿಯಿಂದ ಪರಮಹಂಸರ ಭಾವಸಮಾಧಿ ಗುಣವಾಗದಿದ್ದು ದನ್ನು ಕಂಡು, ಕಠಿನ ಬ್ರಹ್ಮಚರ್ಯವ್ರತವು ರೋಗಕ್ಕೆ ಕಾರಣವಾಗಿರಬಹು ದೆಂದು ಬಗೆದು ಮಧುರನು ಸದ್ಭಾವದಿಂದಲೇ ಒಂದು ಅವಿವೇಕವಾದ ಅಚಾ ತುರ್ಯವನ್ನು ಆಲೋಚಿಸಿದನು. ಒಂದು ದಿನ ಪರಮಹಂಸರನ್ನು ಯಾವುದೋ ನೆವದಿಂದ ಕಲ್ಕತ್ತೆಗೆ ಕರೆದೊಯ್ದು ವೇಶ್ಯಾಗೃಹ ಪ್ರವೇಶಮಾಡಿಸಿದನು. ಆದರೆ ಲಲನೆಯರು "ವಿಟಪುರುಷನ" ಶಿಶುಭಾವವನ್ನೂ ಆತನ ಬಾಯಿಂದ ಎಡೆ ಬಿಡದೆ ಹೊರಡುತ್ತಿದ್ದ "ತಾಯಿ! ತಾಯಿ!" ಎಂಬ ಮಹಾಮಂತ್ರವನ್ನೂ

[1] ಶ್ರೀರಾಮಕೃಷ್ಣರ ಚಿಕ್ಕಪ್ಪನ ಹಿರಿಯ ಮಗನು ಈತನು ೧೫೫೮ ರಿಂದ ೧೮೬೬ ರ ವರೆಗೆ ದಕ್ಷಿಣೇಶ್ವರದಲ್ಲಿದ್ದನು. ಈತನು ವೇದಾಂತದಲ್ಲಿ ಪಾಂಡಿತ್ಯ ಸಂಪಾದಿಸಿದ್ದನು

ನೋಡಿ ಆಲಿಸಿ, ಲಜ್ಜೆಯಿಂದಲೂ ಪಶ್ಚಾತ್ತಾಪದಿಂದಲೂ ಕ್ಷಮೆ ಬೇಡಿದರು. ಗಲಭೆಯನ್ನು ಕೇಳಿ ಅಲ್ಲಿಗೆ ಹಿಂತಿರುಗಿ ಬಂದ ಸಂಚುಗಾರ ಮಥುರನಾಥನು ಮಹಾಪರಾಧವಾಯಿತೆಂದು ತಿಳಿದು ಶ್ರೀರಾಮಕೃಷ್ಣರನ್ನು ಅಲ್ಲಿಂದ ಕರೆದೊಯ್ದನು. ವೇಶ್ಯೆಯರು ಜಮೀನುದಾರನನ್ನು ಬಾಯಿಗೆ ಬಂದಂತೆ ಬಯ್ದರು. ಅಂತೂ ಶ್ರೀರಾಮಕೃಷ್ಣರ ಸಾಧನೆ, ದರ್ಶನ, ಭಾವಸಮಾಧಿಗಳ ವಿಚಾರವಾಗಿ ಹಲವರು ಹಲವು ರೀತಿಯಾಗಿ ಆಲೋಚಿಸಿದರು. ಹಲಧಾರಿ ಅವುಗಳಿಗೆಲ್ಲ ಚಿತ್ತಭ್ರಮೆಯೇ ಕಾರಣವೆಂದು ಸೂಚಿಸಿದನು. ಜಗನ್ಮಾತೆ ಭಕ್ತನನ್ನು ಹೀಗೆಲ್ಲ ವಂಚಿಸುವಳೇ ಎಂದು ವಿಷಾದಪಟ್ಟು ಪರಮಹಂಸರು ಎಂದಿನಂತೆ ಗುಡಿಗೆ ಹೋಗಿ ಭವತಾರಿಣಿಯನ್ನು ಕೇಳಿದರು. ಆಗ ಗುಡಿಯೆಲ್ಲ ಮಂಜಿನಿಂದ ತುಂಬಿದಂತಾಗಿ ಅದರ ಮಧ್ಯೆ ಒಂದು ಮೂರ್ತಿ ಗೋಚರಿಸಿತು. ತೇಜಸ್ವಿಯಾದ ವದನ; ಶಾಂತಿ ತುಂಬಿತ್ತು; ನೀಳವಾದ ಗಡ್ಡದಿಂದ ಶೋಭಿಸುತ್ತಿತ್ತು. ಆ ಮೂರ್ತಿ ತನ್ನ ಅನಿಮಿಷ ನಯನಗಳಿಂದ ಪರಮಹಂಸರನ್ನು ಈಕ್ಷಿಸುತ್ತ "ಭಾವಮುಖದಲ್ಲಿರು! ಭಾವಮುಖದಲ್ಲಿರು! ಭಾವಮುಖದಲ್ಲಿರು!"[1] ಎಂದು

---

[1] ಶ್ರೀರಾಮಕೃಷ್ಣರಲ್ಲಿ ಕೆಲವು ಸಾರಿ "ನಾನು"ಎಂಬುದು ಸಂಪೂರ್ಣವಾಗಿ ವಿಲುಪ್ತವಾಗಿ ಮತ್ತೆ ಕೆಲವು ಸಾರಿ ಸ್ವಲ್ಪ ತೋರುತ್ತಿತ್ತು ಆ "ನಾನು-ತ್ವ"ವು ಈಷದುನ್ಮೇಷನಾದಾಗ ಪರಮಹಂಸರಿಗೆ ಜಗತ್ತು ಜನಸಾಮಾನ್ಯರಿಗೆ ತೋರುವಂತೆ ತೋರುತ್ತಿರಲಿಲ್ಲ. ಒಂದು ಮಹಾ ವಿರಾಟ್ ಮನದಲ್ಲಿ ನಾನಾಭಾವತರಂಗಗಳು ಮೂಡಿ, ಆಡಿ, ಮರಳಿ ಮಡಿಯುವಂತೆ ತೋರುತ್ತಿತ್ತು ಇತರ ವಸ್ತುಗಳೇ ಅಲ್ಲದೆ ತಮ್ಮ ಸ್ವಂತ ದೇಹ, ಮನಸ್ಸು ಮತ್ತು "ನಾನು-ತ್ವ"ಗಳೂ ಆ ವಿರಾಡ್ಮನದಲ್ಲಿ ತರಂಗ ಮಾತ್ರಗಳಾಗಿ ತೋರುತ್ತಿದ್ದುವು. ಆಬ್ರಹ್ಮಸ್ತಂಬಪರ್ಯಂತವಾಗಿ ಇಚ್ಛೆ, ಕ್ರಿಯೆ, ಜೀವಂತ, ಜಾಗ್ರತ ಎಲ್ಲವೂ ಏಕಮೇವಾದ್ವಿತೀಯವಾದ ವಿರಾಟ್ ಅಹಂಕಾರದಲ್ಲಿ ವಿಕಸಿತವಾಗಿರುತ್ತಿದ್ದುವು ಈ ವಿರಾಟ್ ಅಹಂಕಾರವಿರುವಾಗಲೇ ವಿರಾಟ್ ಮನದಲ್ಲಿ ಅನಂತ ಭಾವತರಂಗವು ತೋರುವುದು ಆ ಮಹಾಭಾವತರಂಗದಲ್ಲಿ ಸಣ್ಣ ಸಣ್ಣ ಭಾವತರಂಗಗಳು ತೋರಿದಾಗಲೇ ನಾವು ಬಹಿರ್ಜಗತ್ತನ್ನೂ ಕ್ಷುದ್ರಕ್ಷುದ್ರ ಅಹಂಕಾರಗಳನ್ನೂ ಅವುಗಳ ಪರಸ್ಪರ ಕ್ರಿಯೆ ಪ್ರತಿಕ್ರಿಯೆಗಳನ್ನೂ ನೋಡುತ್ತೇವೆ ಸಣ್ಣ ಸಣ್ಣ "ನಾನು"ಗಳು "ದೊಡ್ಡ ನಾನನ್ನು" ನೋಡದಿರುವಾಗ ಭ್ರಾಂತಿಯಿಂದ ತಾವು ಸ್ವತಂತ್ರರೆಂದು ತಿಳಿಯುತ್ತವೆ. "ದೊಡ್ಡ ನಾನನ್ನು" ನೋಡಲು ಎಲ್ಲವೂ ಅದರ ಕ್ರಿಯೆ ಎಂಬುದು ಗೊತ್ತಾಗುತ್ತದೆ. ಈ ಸಣ್ಣ "ನಾನು"ಗಳ ಭ್ರಾಂತಿಯೇ ಅವಿದ್ಯೆ ಎಂದು ಶಾಸ್ತ್ರದಲ್ಲಿ ಪ್ರಸಿದ್ಧ

ಮೂರುಸಾರಿ ಗಂಭೀರವಾಣಿಯಿಂದ ಹೇಳಿ ಅದೃಶ್ಯವಾಯಿತು. ಪರಮಹಂಸರು ಎಂದಿನಂತೆ ನಿರ್ಭರತೆಯಿಂದ ಹಿಂದಿರುಗಿದರು.

ಇಂತು ದಕ್ಷಿಣೇಶ್ವರದಲ್ಲಿ ಹೊರೆಯೇರಿ ಹರಿಯಲು ತೊಡಗಿದ ಪರಮಹಂಸರ ಈಶ್ವರೋನ್ಮಾದ ವಾಹಿನಿಯ ಕಾಹಿನಿ ದೂರದ ಕುಗ್ರಾಮವಾದ ಕಾಮಾರ ಪುಕುರಕ್ಕೆ ತಲುಪಿತು. ಚಂದ್ರಮಣಿದೇವಿ ಬೆಚ್ಚಿದಳು—ಗದಾಧರನಿಗೆ ಹುಚ್ಚು ಹಿಡಿದಿದೆ. ಆಗಾಗ ಮೂರ್ಛೆ ಬೀಳುತ್ತಾನೆ. ಸರಿಯಾಗಿ ನಿದ್ರಾಹಾರಗಳಿಲ್ಲದೆ ಸೊರಗಿದ್ದಾನೆ. ಜನಿವಾರವನ್ನು ಬಿಸಾಡುತ್ತಾನೆ. ದೇವಿಯ ಪೀಠದ ಮೇಲೆ ಹತ್ತಿ ಕುಣಿಯುತ್ತಾನೆ. ರಾಣಿ ರಾಸಮಣಿಯನ್ನು ಹೊಡೆದನಂತೆ! ಚಿನ್ನವನ್ನೂ ಮಣ್ಣನ್ನೂ ಹಿಡಿದುಕೊಂಡು ಗಂಗೆಯ ತಡಿಯಲ್ಲಿ ಕುಳಿತು "ಅದೇ ಇದು! ಇದೇ ಅದು!" ಎಂದು ಹೇಳುತ್ತಾ ಎರಡನ್ನೂ ಹೊಳೆಗೆ ಎಸೆಯುತ್ತಾನೆ! ತಿರುಕರು ತಿಂದುಬಿಟ್ಟ ಎಂಜಲೆಲೆಗಳನ್ನು ನೆಕ್ಕುತ್ತಾನೆ. ಬೇಡವೆಂದರೆ ಎಲ್ಲವೂ ದೇವಿಯ ಪ್ರಸಾದವೆಂದು ಆರ್ಭಟಿಸುತ್ತಾನೆ. ಹಲಾಲುಕೋರರು ತೊಳೆಯುವ ಅಶುಚಿಯನ್ನು ತಾನೇ ತೊಳೆಯುತ್ತಾನೆ! ಹುಚ್ಚು ಮಿತಿಮೀರಿಹೋಗಿದೆ. ವೈದ್ಯರ ಪ್ರಯತ್ನವೂ ಸಾಗಲಿಲ್ಲ—ಇದನ್ನೆಲ್ಲ ಕೇಳಿ ತಾಯಿಯ ಮುದ್ದಿನ ಹೂವೆದೆ ನೊಂದಿತು; ಬೆಂದಿತು; ನಿಡುಸುಯ್ದು "ರಘುವೀರ!" ಎಂದಿತು. ತನ್ನ ಮುದ್ದು ಕುವರನನ್ನು ಮುದ್ದಿನ ಹಳ್ಳಿಗೆ ಕರೆಯಿಸಿಕೊಂಡು ಮದ್ದುಕೊಟ್ಟು ಶುಶ್ರೂಷೆ ಮಾಡಬೇಕೆಂದು ಆಕೆಯ ಮಾತೃಹೃದಯವು ಹಾತೊರೆಯಿತು. ಹಿರಿಯ ಮಗನನ್ನು ಕಳೆದುಕೊಂಡಿದ್ದ ತಾಯಿಗೆ ಕಿರಿಯ ಮಗನ ಚಿಂತೆ ದಾರುಣವಾಯಿತು. ದಕ್ಷಿಣೇಶ್ವರಕ್ಕೆ ಮೇಲಿಂದ ಮೇಲೆ ರಾಮೇಶ್ವರನಿಂದ ಕಾಗದ ಬರೆಯಿಸಿದಳು.

---

ವಾಗಿದೆ ನಿಸ್ತರಂಗ ವಿರಾಟವೇ ನಿರ್ಗುಣ ಬ್ರಹ್ಮ, ತರಂಗ ವಿರಾಟವೇ ಸಗುಣ ಬ್ರಹ್ಮ. ನಿರ್ಗುಣ ಸಗುಣಗಳ ಮಧ್ಯೆ ಇರುವ ವಿರಾಟ್ ಅಹಂಕಾರವೇ "ಭಾವ ಮುಖ." ಪರಮಹಂಸರು "ಭಾವ ಮುಖದ" ಗಡಿಯನ್ನು ದಾಟಿದಾಗ ವಿರಾಟ್ ಅಹಂಕಾರವು—"ನಾನು", ಜಗತ್ತು ಎಲ್ಲವೂ ಸಂಪೂರ್ಣವಾಗಿ ಅಳಿಸಿ ಹೋಗುತ್ತಿತ್ತು. ಭಾವಮುಖದಲ್ಲಿದ್ದಾಗ ಯಾವುದು ಬ್ರಹ್ಮವೋ ಅದೇ ಶಕ್ತಿ, ಯಾವುದು ನಿರ್ಗುಣವೋ ಅದೇ ಸಗುಣ, ಯಾವುದು ಪುರುಷವೋ ಅದೇ ಪ್ರಕೃತಿ, ಅಥವಾ ಯಾವುದು ಸ್ವರೂಪತಃ ನಿರ್ಗುಣವೋ ಅದೇ ಲೀಲೆಯಿಂದ ಸಗುಣ ಎಂಬುದು ಅನುಭವವಾಗುತ್ತಿತ್ತು.

ಪರಮಹಂಸರು ಜನನಿಯ ಕರೆಯನ್ನು ಮನ್ನಿಸಿ ಕಾಮಾರಪುಕುರಕ್ಕೆ ಹೋದರು.
ಮಾತೆ ಮಗನನ್ನು ಕಂಡು ಸಂತೋಷಪಟ್ಟರೂ ಆತನ ಸ್ಥಿತಿಯನ್ನು ನೋಡಿ
ಮರುಗಿದಳು. ಮಗನು ಮೊದಲಿನ ಮಗನಾಗಿರಲಿಲ್ಲ. ಪ್ರಾಪಂಚಿಕ ವಿಷಯ
ಗಳಲ್ಲಿ ಔದಾಸೀನ್ಯವು ಎಂದಿಗಿಂತಲೂ ಅತಿಶಯವಾಗಿತ್ತು. ಹಿಂದಿದ್ದ ಮುಗ್ಧ
ಮುಖಕಾಂತಿ ಮಾಸಿಹೋಗಿ ಚಿಂತೆಯ ಕರಿದೆರೆ ಮುಸುಗಿತ್ತು. ಬಾಲ್ಯದ
ಸ್ನೇಹಿತರಲ್ಲಿ ಹಿಂದೆ ಆತನಿಗಿದ್ದ ಕುತೂಹಲವು ಮಂದವಾಗಿತ್ತು. ಹಿಂದೆ ಆತನ
ಕಣ್ಣಿಗೆ ಮನೋಹರವಾಗಿದ್ದ ಗ್ರಾಮದ ರಮಣೀಯ ದೃಶ್ಯಗಳು ಈಗ ಸಾಧಾ
ರಣವಾಗಿ ತೋರಿದುವು. ಅಲ್ಲದೆ ನಡುನಡುವೆ ಕಾತರ ಕಂಠದಿಂದಲೂ ಕ್ರಂದನ
ಧ್ವನಿಯಿಂದಲೂ "ಜನನೀ! ಜನನೀ!" ಎಂದು ಕೂಗುತ್ತಿದ್ದನು. ಚಂದ್ರಮಣಿ
ದೇವಿ ವೈದ್ಯರಿಂದ ಔಷಧಿ ಕೊಡಿಸಿದಳು. ತನ್ನ ತಾಯ್ತನವನ್ನೆಲ್ಲ ಸೂರೆ
ಮಾಡಿ ಶುಶ್ರೂಷೆಮಾಡಿದಳು. ದೇವರಿಗೆ ಹೇಳಿಕೊಂಡು ಶಾಂತಿ ಮಾಡಿಸಿದಳು.
ಯಾವುದಾದರೂ ದುಷ್ಟಪಿಶಾಚದ ಕಾಟವಿರಬಹುದು ಎಂದುಕೊಂಡು ಮಂತ್ರ
ವಾದಿಗಳಿಂದ ಯಂತ್ರ ಕಟ್ಟಿಸಿದಳು. ಕ್ರಮೇಣ ದೈಹಿಕ ಪರಿಸ್ಥಿತಿ ಗುಣ
ಮುಖವಾಯಿತು. ಆದರೆ ಮಾನಸಿಕ ಸ್ಥಿತಿ ಎಂದಿನಂತೆಯೇ ಇತ್ತು. ಕಡೆಗೆ
ಮದುವೆಮಾಡಿದರೆ ಮಗನ ಮನಸ್ಸು ಶಾಂತವಾಗುವುದೆಂದು ತಾಯಿಯ
ಮುಗ್ಧಹೃದಯವು ಹಾರೈಸಿತು. ಸುಂದರಿಯಾದ ಲಲನೆ ಪತ್ನಿಯಾಗಿ ಮನೆಗೆ
ಬಂದರೆ ಮಗನ ಮನಸ್ಸು ಸಂಸಾರದ ಕಡೆ ತಿರುಗಿ ಆಕಾಶವಿಹಾರವು ತಪ್ಪು
ವುದೆಂದು ಆಕೆ ಆಲೋಚಿಸಿದಳು. ಆದರೆ ಹುಚ್ಚುಗಂಡಿಗೆ ಹೆಣ್ಣು ಕೊಡು
ವವರಾರು? ಕೆಲವರು ಬಹಳ ಕನ್ಯಾಶುಲ್ಕ ಕೇಳಿದರು. ಅಂತೂ ಕಡೆಗೆ ಎಲ್ಲಿಯೂ
ಹೆಣ್ಣು ದೊರಕಲಿಲ್ಲ. ತಾಯಿಯೂ ಅಣ್ಣನೂ ಹತಾಶರಾದರು. ಇಂತಿರುತ್ತಿ
ರಲು ಒಂದು ದಿನ ಶ್ರೀರಾಮಕೃಷ್ಣರು ಭಾವಾವಿಷ್ಟರಾಗಿ "ಅಲ್ಲಿ ಇಲ್ಲಿ
ಹುಡುಕಿ ಪ್ರಯೋಜನವಿಲ್ಲ. ಜಯರಾಂಬಾಟಿಯ ರಾಮಚಂದ್ರ ಮುಖ್ಯೋ
ಪಾಧ್ಯಾಯನ ಮನೆಯಲ್ಲಿ ವಿಧಿ ನನಗಾಗಿ ಮೀಸಲಾಗಿರಿಸಿರುವ ಹುಡುಗಿ
ಯಿದ್ದಾಳೆ; ಹೋಗಿ ನೋಡಿ!" ಎಂದು ಹೇಳಿದರು. ಮೊದಮೊದಲು ಪರಮ
ಹಂಸರ ಮಾತಿನಲ್ಲಿ ಯಾರಿಗೂ ನಂಬುಗೆ ಹುಟ್ಟಲಿಲ್ಲ. ಕಡೆಗೆ ಏನಾದರೂ ಆಗಲಿ
ನೋಡುವುದು ಎಂದು ಜಯರಾಂಬಾಟಿಗೆ ಒಬ್ಬನನ್ನು ಕಳುಹಿಸಿ ವಿಚಾರಿಸಿ

ದರು. ಹುಡುಗಿಯೇನೋ ಇದ್ದಾಳೆ; ಹುಡುಗನಿಗೆ ಯೋಗ್ಯಳೂ ಅಹುದು; ಆದರೆ ಆಕೆಗೆ ಇನ್ನೂ ಐದೇ ವರ್ಷ ವಯಸ್ಸು ಎಂಬ ಉತ್ತರ ಬಂದಿತು. ಚಂದ್ರಾದೇವಿ ಏನಾದರಾಗಲಿ ಹುಡುಗಿ ಸಿಕ್ಕಿದಳು; ಅಷ್ಟೇ ಸಾಕು ಎಂದು ಒಪ್ಪಿದಳು. ಕ್ರಿ. ಶ. ೧೮೫೯ ರಲ್ಲಿ ಶ್ರೀಯುತ ಖುದಿರಾಮ ಚಟ್ಟೋಪಾಧ್ಯಾಯನ ಕನಿಷ್ಠ ಪುತ್ರನಾದ ಶ್ರೀ ಗದಾಧರ ಚಟ್ಟೋಪಾಧ್ಯಾಯನೆಂಬ ವರನಿಗೆ ಜಯರಾಂಬಾಟಿಯ ಶ್ರೀಯುತ ರಾಮಚಂದ್ರ ಮುಖ್ಯೋಪಾಧ್ಯಾಯನ ಪ್ರಿಯಪುತ್ರಿಯಾದ ಶ್ರೀಮತಿ ಶಾರದಾಮಣಿದೇವಿ ಎಂಬ ಕನ್ಯೆಯನ್ನು ತಂದು ವಿವಾಹ ಮಹೋತ್ಸವವು ನೆರವೇರಿತು! ರಾಮೇಶ್ವರನು ಮುನ್ನೂರು ರೂಪಾಯಿ ಕಾಣಿಕೆ ಕೊಡಬೇಕಾಯಿತು!

ವಿವಾಹವಾದ ಮೇಲೆ ಪರಮಹಂಸರು ಸುಮಾರು ಒಂದೂವರೆ ವರ್ಷದ ವರೆಗೆ ತಾಯಿಯೊಡನೆ ಇದ್ದರು. ಚಂದ್ರಾದೇವಿ ಮಗನು ಸಂಪೂರ್ಣವಾಗಿ ಗುಣಹೊಂದುವ ತನಕ ಆತನನ್ನು ದಕ್ಷಿಣೇಶ್ವರಕ್ಕೆ ಹೋಗಗೊಡಲಿಲ್ಲ.

ಇದೇ ಸಮಯದಲ್ಲಿ ಶ್ರೀರಾಮಕೃಷ್ಣರ ಮೃದುಹಾಸ್ಯಶೀಲವನ್ನು ವ್ಯಕ್ತಗೊಳಿಸುವ ಒಂದು ಸಂಗತಿ ಜರುಗಿತು. ಹೊಸ ಸೊಸೆಯ ಸಿಂಗಾರಕ್ಕಾಗಿ ಚಂದ್ರಮಣಿದೇವಿ ಕೆಲವು ಆಭರಣಗಳನ್ನು ನೆರೆಯ ಸಾಹುಕಾರನಿಂದ ಎರವಾಗಿ ತಂದಿದ್ದಳು. ಕೆಲವು ದಿನಗಳಾದ ಮೇಲೆ ನಗಗಳನ್ನು ಹಿಂದಕ್ಕೆ ಕೊಡಬೇಕಾಗಿ ಬರಲು, ಅತ್ತೆ ಸೊಸೆಯನ್ನು ಹೇಗೆ ಕೇಳುವುದೆಂದು ಚಿಂತಿಸತೊಡಗಿದಳು. ಏಕೆಂದರೆ, ಶಾರದಾಮಣಿದೇವಿ ಆಭರಣಗಳನ್ನೆಲ್ಲ ತನ್ನವೆಂದೇ ಭಾವಿಸಿದ್ದಳು. ಅದನ್ನು ತಿಳಿದ ಶ್ರೀರಾಮಕೃಷ್ಣರು ತಾನೇ ಅವುಗಳನ್ನು ಈಸಿಕೊಡುವುದಾಗಿ ಹೇಳಿದರು. ಐದು ವರ್ಷದ ಹುಡುಗಿ; ಕೇಳಿದರೆ ಕೊಡುವಂತಿರಲಿಲ್ಲ. ಆದ್ದರಿಂದ ರಾತ್ರಿ ಆಕೆ ಮಲಗಿದ್ದಾಗ ಪರಮಹಂಸರೇ ನಗಗಳನ್ನೆಲ್ಲಾ ಹೆಂಡತಿಗೆ ತಿಳಿಯದಂತೆ ಕಳಚಿ ತಾಯಿಗೆ ಕೊಟ್ಟರು! ಹುಡುಗಿ ಎಚ್ಚರವಾದ ಮೇಲೆ ಮೈಮೇಲೆ ನಗಗಳಿಲ್ಲದಿರುವುದನ್ನು ನೋಡಿಕೊಂಡು ಅತ್ತೆಯ ಮುಂದೆ ಅತ್ತಳು. ಚಂದ್ರಾದೇವಿ ಸೊಸೆಯನ್ನು ತೋಳುಗಳಿಂದ ಬಿಗಿದಪ್ಪಿ ಮುದ್ದಿಸಿ ಸಂತೈಸುತ್ತ "ಅಳಬೇಡಮ್ಮಾ, ಗದಾಧರನು ನಿನಗೆ ಅವುಗಳಿಗಿಂತ ಉತ್ತಮವಾದ ಆಭರಣಗಳನ್ನು ತಂದುಕೊಡುತ್ತಾನೆ!" ಎಂದು ಕಂಬನಿಗರೆದಳು. ಆ ದಿನವೇ ಅಲ್ಲಿಗೆ

ಬಂದ ಹುಡುಗಿಯ ಚಿಕ್ಕಪ್ಪನು ವಿಷಯವನ್ನೆಲ್ಲ ತಿಳಿದು ಬಹಳವಾಗಿ ಕೋಪಿಸಿ ಕೊಂಡು ಅದೇ ದಿನವೇ ಶಾರದಾಮಣಿದೇವಿಯನ್ನು ಜಯರಾಂಬಾಟಿಗೆ ಕರೆದು ಕೊಂಡುಹೋದನು. ಚಂದ್ರಾದೇವಿಗೆ ಅತಿ ದಾರುಣದುಃಖವಾಯಿತು. ಆದರೆ ಶ್ರೀರಾಮಕೃಷ್ಣರು ತಾಯಿಯ ಬಳಿಗೆ ಬಂದು "ಬಿಡಮ್ಮಾ, ಅವರು ಈಗ ಏನು ಹೇಳಿದರೇನು? ಏನು ಮಾಡಿದರೇನು? ಆದ ಮದುವೆಯನ್ನು ತಪ್ಪಿಸಲಾರರಷ್ಟೇ?" ಎಂದು ತಮಾಷೆಮಾಡಿದರಂತೆ!

ಹುಟ್ಟಿದ ಹಳ್ಳಿಯಲ್ಲಿ ಹೆತ್ತತಾಯಿಯ ಸಾನ್ನಿಧ್ಯದಲ್ಲಿ ಪರಮಹಂಸರು ಸುಖಿಗಳಾಗಿದ್ದರು. ಆದರೆ ಮನೆಯ ಬಡತನವು ಅವರನ್ನು ಒಳಗೊಳಗೇ ನೋಯಿಸುತ್ತಿತ್ತು. ಮುದುಕಿಯಾದ ತಾಯಿಯ ಕಷ್ಟವನ್ನು ನೋಡಲಾರದೆ ಮೇಲೆ ಮೇಲೆ ಹಸನ್ಮುಖಿಗಳಾಗಿ ಮಾತೆಯನ್ನು ವಿನೋದದಿಂದ ಸಂತವಿಡಲು ಯತ್ನಿಸುತ್ತಿದ್ದರು. ಕಡೆಗೆ ಮನೆಯವರಿಗೆ ಏನಾದರೂ ಒಂದೆರಡುಕಾಸಿನ ಸಹಾಯವಾಗುವುದೆಂದು ಆಲೋಚಿಸಿ ತಾಯಿಯ ಪಾವನ ಪಾದಗಳಿಗೆ ನಮಸ್ಕರಿಸಿ ಬೀಳ್ಕೊಂಡು ದಕ್ಷಿಣೇಶ್ವರಕ್ಕೆ ಹಿಂದಿರುಗಿ ಬಂದರು.

ಆದರೆ ಮಹಾಕಾಳಿ ಭಕ್ತನ ಆಗಮನವನ್ನು ಕಾದುಕೊಂಡೇ ಇದ್ದಳು. ಗುಡಿಯ ಹೊಸ್ತಿಲನ್ನು ದಾಟಿದುದೇ ತಡ ಹಾರಿ ಬಂದು ಹಿಡಿದುಕೊಂಡೇ ಬಿಟ್ಟಳು. ಪುನಃ ಹಿಂದಿನ ದಿವ್ಯೋನ್ಮಾದವು ಎಂದಿಗಿಂತಲೂ ಅತಿಶಯವಾಗಿ ಕಾಣಿಸಿಕೊಂಡಿತು. ಆ ಹುಚ್ಚಿನ ಹೊಳೆಯಲ್ಲಿ ಹೆಂಡತಿ, ತಾಯಿ, ಮನೆ, ಸಂಪಾದನೆ ಎಲ್ಲವೂ ಕೊಚ್ಚಿಕೊಂಡುಹೋದುವು. ಪೂರ್ವದ ಚಿಹ್ನೆಗಳೆಲ್ಲವೂ ತಲೆದೋರಿದುವು. ದಿವಾರಾತ್ರಿಗಳಲ್ಲಿಯೂ ಧ್ಯಾನ; ವಕ್ಷಸ್ಥಲವು ಅರುಣಜಲಪ್ಲಾವಿತವಾಯಿತು; ನಿದ್ದೆ ತೊಲಗಿತು; ಪರಮಹಂಸರು ಪ್ರಜ್ವಲಿಸುವ ಜ್ವಾಲಾಮಯವಾದ ಸಜೀವ ಚಿತೆಯಂತಾದರು. ಎಲ್ಲದರಲ್ಲಿಯೂ ಎಲ್ಲ ಕಾಲದಲ್ಲಿಯೂ ಜಗನ್ಮಾತೆಯ ಅವಿರಳ ದರ್ಶನಕ್ಕಾಗಿ ತೀವ್ರ ವ್ಯಾಕುಲಗ್ರಸ್ತರಾದರು. ಮಥುರನಾಥನೇ ಮೊದಲಾದವರು ಉದ್ವಿಗ್ನರಾಗಿ ಪ್ರಸಿದ್ಧ ವೈದ್ಯನೊಬ್ಬನನ್ನು ಕರೆತಂದು ಪರೀಕ್ಷೆಮಾಡಿಸಿದರು. ಆತನು "ಇದು ಬರಿಯ ದೈಹಿಕವ್ಯಾಧಿಯಲ್ಲ. ಚಿಹ್ನೆಗಳೆಲ್ಲವೂ ದಿವ್ಯೋನ್ಮಾದವನ್ನೇ ಸೂಚಿಸುತ್ತವೆ. ಇದು ಯೋಗಾಭ್ಯಾಸದ ಪ್ರತಿಫಲವಾಗಿ ಬಂದಿರುವುದರಿಂದ ಔಷಧಿಗಳಿಂದ ಗುಣವಾಗದು" ಎಂದು

ಹೇಳಿದನು. ಆದರೂ ಮಧುರನು ಮದ್ದು ಕೊಡಿಸಿದನು. ವ್ಯಾಧಿ ಪ್ರಬಲತರ ವಾಯಿತು.

ಅಧ್ಯಾತ್ಮ ಸಾಮ್ರಾಜ್ಯದ ಜೈತ್ರಯಾತ್ರಿಕನು ಅತ್ಯಂತ ವಿಷಮಸನ್ನಿವೇಶದಲ್ಲಿ ಸಿಲುಕಿದನು. ಆತನ ಆತ್ಮವು ನಡುಗಡಲಿನಲ್ಲಿ ಬಿರುಗಾಳಿಗೆ ಸಿಲುಕಿದ ನಾವೆ ಯಂತೆ ಸೊರಗಿರೆದು ಮೊರೆಯುವ ಹೆದ್ದೆರೆಗಳಲ್ಲಿ ಸುತ್ತಿ ಸುತ್ತಿ ತತ್ತರಿಸಿತು. ಚಿತ್ರವಿಚಿತ್ರವಾದ ದರ್ಶನಗಳು ಒಂದರಮೇಲೊಂದು ಬರತೊಡಗಿದುವು. ಅವುಗಳನ್ನು ಕುರಿತು ಪರಮಹಂಸರೇ ತರುವಾಯ ಹೀಗೆ ಹೇಳಿದ್ದಾರೆ: "ಒಂದು ದರ್ಶನವಾಗುವುದೇ ತಡ ಮತ್ತೊಂದು ಬರುತ್ತಿತ್ತು. ಆ ಝಂಝಾವಾತದಲ್ಲಿ ನನ್ನ ಜನಿವಾರವು ಎಲ್ಲಿಯೋ ಹಾರಿಹೋಯಿತು. ಬಟ್ಟೆ ಕೂಡ ಸೊಂಟದ ಮೇಲಿ ರುತ್ತಿರಲಿಲ್ಲ. ಕೆಲವು ಸಾರಿ ಆಕಾಶ ಪಾತಾಳಗಳನ್ನು ಮುಟ್ಟುವುವೋ ಎಂಬಂತೆ ದವಡೆಗಳನ್ನು ವಿಸ್ತರಿಸಿ 'ಅಮ್ಮಾ' ಎಂದು ಒರಲುತ್ತಿದ್ದೆ. ಬೆಸ್ತನು ಬಲೆಯೆಳೆದು ಮೀನು ಹಿಡಿಯುವಂತೆ ಆಕೆಯನ್ನು ಆಕ್ರಮಿಸಲು ಆಲೋಚಿಸುತ್ತಿದ್ದೆ. ಅಯ್ಯೋ, ಎಂತಹ ವಿಷಮಸ್ಥಿತಿಯಿಂದ ದಾಟಿ ಬಂದಿದ್ದೇನೆ! ಎಲ್ಲರೂ ನನಗೆ ಹುಚ್ಚು ಹಿಡಿದಿದೆ ಎಂದು ನಿರ್ಧರಿಸಿಬಿಟ್ಟರು. ಹೊರಗಡೆಯ ಒಂದೊಂದು ವಸ್ತುವೂ ನನ್ನಾತ್ಮದಲ್ಲಿ ಒಂದೊಂದು ತೆರನಾದ ಭಾವತರಂಗಗಳನ್ನು ಎಬ್ಬಿಸುತ್ತಿತ್ತು. ಬೀದಿಯಲ್ಲಿ ಹೋಗುವ ಹುಡುಗಿ ನನ್ನ ಕಣ್ಣಿಗೆ ಜಯಹೊಂದಿದ ಶ್ರೀರಾಮ ಚಂದ್ರನನ್ನು ಎದುರುಗೊಳ್ಳಲು ಹೋಗುವ ಸೀತಾಮಾತೆಯಂತೆ ತೋರಿದಳು. ತ್ರಿಭಂಗಿಯಿಂದ ಮರವನ್ನು ಒರಗಿನಿಂತ ಆಂಗ್ಲೇಯ ಬಾಲಕನೊಬ್ಬನು ಶ್ರೀ ಕೃಷ್ಣನಂತೆ ತೋರಿಬಂದುದರಿಂದ ಧ್ಯಾನಮಗ್ನನಾಗಿಬಿಟ್ಟೆನು. ಕೆಲವು ಸಾರಿ ಭುಜದ ಮೇಲೆ ಬಿದಿರುಬೊಂಬನ್ನು ಹೊತ್ತುಕೊಂಡು ದೇವಾಲಯದ ಸುತ್ತಲೂ ತಿರುಗುತ್ತಿದ್ದೆ. ಕೆಲವು ಸಾರಿ ನಾಯಿಯ ಮೇಲೆ ಕುಳಿತುಕೊಂಡು, ಅದಕ್ಕಷ್ಟು ತಿಂಡಿ ತಿನ್ನಿಸಿ ಉಳಿದ ಎಂಜಲನ್ನು ನಾನೇ ತಿಂದುಬಿಡುತ್ತಿದ್ದೆ. ಜಾತಿಗೀತಿ ಯೊಂದೂ ನನ್ನ ಮನಸ್ಸಿನಲ್ಲಿರಲಿಲ್ಲ. ಒಂದು ಸಾರಿ ಕನಿಷ್ಠಜಾತಿಯವನೊಬ್ಬನು ತನ್ನ ಮನೆಯಿಂದ ಸ್ವಲ್ಪ ಪಲ್ಯವನ್ನು ತಂದುಕೊಟ್ಟನು. ಅದನ್ನು ಬಹಳ ರುಚಿ ಯೆಂದು ತಿಂದೆನು. ಪಂಚವಟಿಯಲ್ಲಿ ನಿಷ್ಪಂದನಾಗಿ ನಿಗೂಢ ಧ್ಯಾನದಲ್ಲಿ ಕುಳಿತು ಬಾಹ್ಯವನ್ನೇ ಮರೆಯುತ್ತಿದ್ದೆನು. ಆ ಸಮಯದಲ್ಲಿ ತೈಲೋಪಚಾರವಿಲ್ಲದೆ ನನ್ನ

ತಲೆಕೂದಲು ಗಂಟುಗಂಟಾಗಿ ಶಿವನ ಜಡೆಯಾಗಿತ್ತು. ಹಕ್ಕಿಗಳು ತಲೆಯ ಮೇಲೆ ಕುಳಿತುಕೊಂಡು ಪೂಜಾಸಮಯದಲ್ಲಿ ಅಲ್ಲಿ ಬಿದ್ದಿರುತ್ತಿದ್ದ ಅಕ್ಕಿಯ ಕಾಳುಗಳನ್ನು ಕುಟುಕಿ ತಿನ್ನುತ್ತಿದ್ದುವು. ಹಾವುಗಳು ನನ್ನ ನಿಷ್ಪಂದ ದೇಹದ ಮೇಲೆ ಹರಿದಾಡುತ್ತಿದ್ದುವು. ನನಗಾಗಲಿ ಅವುಗಳಿಗಾಗಲಿ ನಿಜಾಂಶವು ತಿಳಿಯುತ್ತಿರಲಿಲ್ಲ. ಅಯ್ಯೋ, ಎಚ್ಚತ್ತು ಕಣ್ಣು ತೆರೆದಿರುವಾಗಲೇ ಏನೇನೋ ದರ್ಶನಗಳು ಸಾಗುತ್ತಿದ್ದುವು! ಒಂದು ದಿನ ನಾನು ಧ್ಯಾನಕ್ಕೆ ಕುಳಿತಿದ್ದಾಗ ನನ್ನ ದೇಹದಿಂದಲೇ ತೇಜಸ್ವಿಯಾದ ಸಂನ್ಯಾಸಿಯೊಬ್ಬನು ತ್ರಿಶೂಲಧಾರಿಯಾಗಿ ಹೊರಗೆ ಬಂದು ಏಕಾಗ್ರತೆಯಿಂದ ಧ್ಯಾನಮಾಡುವಂತೆ ನನಗೆ ಆಜ್ಞೆ ಮಾಡಿದನು. ಹಾಗೆ ಮಾಡದಿದ್ದರೆ ತ್ರಿಶೂಲದಿಂದ ತಿವಿಯುವೆನೆಂದೂ ಹೇಳಿದನು. ಅಷ್ಟರಲ್ಲಿ ಕರಿಯ ದೇಹದ ಪಾಪಪುರುಷನು ನನ್ನ ದೇಹದಿಂದ ಹೊರಕ್ಕೆ ಹಾರಿದನು. ತ್ರಿಶೂಲಧಾರಿಯಾದ ಸಂನ್ಯಾಸಿ ಅವನನ್ನು ಅಲ್ಲಿಯೇ ತಿವಿದು ಕೊಂದುಬಿಟ್ಟನು. . . . ಸಾಧಾರಣ ಮನುಷ್ಯನ ದೇಹವು ನನಗೆ ಬಂದ ದಿವ್ಯೋನ್ಮಾದದಲ್ಲಿ ತಿಲಮಾತ್ರವನ್ನಾದರೂ ತಾಳಲಾರದು. ಆ ಶಕ್ತಿಯ ಸ್ವಲ್ಪ ಪ್ರವಾಹವೇ ಸಾಕು ಆತನ ದೇಹವನ್ನು ಪುಡಿಪುಡಿ ಮಾಡಿಬಿಡುವುದಕ್ಕೆ. ಜಗದಂಬೆಯ ಕೃಪೆಯಿಂದ ನನ್ನ ದೇಹವು ಬಾಳಿತು. ಅಲ್ಲದೆ ನನಗಾಗ ದೇಹದ ಭಾವನೆಯೆ ಇರಲಿಲ್ಲ. . . .''

ಇದೇ ಕಾಲದಲ್ಲಿ ಇನ್ನೊಂದು ಅದ್ಭುತವು ನಡೆಯಿತು. ಪರಮಹಂಸರು ಒಂದು ದಿನ ತಮ್ಮ ಕೊಟಡಿಗೆ ಪೂರ್ವದಿಕ್ಕಿನಲ್ಲಿದ್ದ ವರಾಂಡದಲ್ಲಿ ಶತಪಥ ತಿರುಗುತ್ತಿದ್ದರು. ಮಥುರನಾಥನು ಅಲ್ಲಿಗೆ ಎದುರಾಗಿದ್ದ ತನ್ನ ಮಹಲಿನಲ್ಲಿ ಒಬ್ಬನೇ ಕುಳಿತು ಅವರನ್ನೇ ನೋಡುತ್ತಿದ್ದನು. ಶ್ರೀರಾಮಕೃಷ್ಣರಿಗೆ ಅದು ತಿಳಿದಿರಲಿಲ್ಲ. ಹಠಾತ್ತಾಗಿ ಮಥುರನು ಓಡಿಬಂದು ಪರಮಹಂಸರ ಮುಂದೆ ದಿಂಡುರುಳಿ ಅಡ್ಡಬಿದ್ದು ಕಾಲುಗಳನ್ನು ಹಿಡಿದುಕೊಂಡು ಶಿಶುವಿನಂತೆ ಅಳತೊಡಗಿದನು. ಶ್ರೀರಾಮಕೃಷ್ಣರು "ಇದೇನಯ್ಯಾ ಇದು? ನೀನು ರಾಣಿಯ ಅಳಿಯ! ನೀನು ಮಾಡುತ್ತಿರುವುದನ್ನು ನೋಡಿದರೆ ಜನರೇನೆಂದಾರು? ಶಾಂತನಾಗು; ಮೇಲೇಳು!'' ಎಂದರು. ಮಥುರನು ಕೈಮುಗಿದುಕೊಂಡು ಹೇಳಿದನು: "ನೀವು ಶತಪಥ ತಿರುಗುತ್ತಿದ್ದಾಗ ಒಂದು ಸಾರಿ ಮಹಾದೇವನಂತೆಯೂ ಒಂದು ಸಾರಿ ಮಹಾಮಾಯೆಯಂತೆಯೂ ತೋರಿದಿರಿ! ನಾನು ಮೊದಲು ನೋಡಿದಾಗ ಏನೋ

ನನ್ನ ಭ್ರಾಂತಿಯಿರಬೇಕೆಂದು ಊಹಿಸಿದೆ. ಕಣ್ಣುಜ್ಜಿಕೊಂಡು ಮರಳಿ ನೋಡಿದೆ. ಎಷ್ಟು ನೋಡಿದರೂ ಹಾಗೆಯೇ ತೋರಿತು." ಹೀಗೆಂದು ಜಮೀನುದಾರನು ಭಾವಾವೇಗದಿಂದ ಕಂಬನಿಗರೆಯತೊಡಗಿದನು. ಪರಮಹಂಸರು "ಏನೋ? ನನಗದೊಂದೂ ತಿಳಿಯದು." ಎಂದು ಶಾಂತವಾಣಿಯಿಂದು ನುಡಿದರು. ಈ ಸಂಗತಿ ನಡೆದ ಮೇಲೆ ಶ್ರೀರಾಮಕೃಷ್ಣರಲ್ಲಿದ್ದ ಮಥುರನ ಭಕ್ತಿ ಇಮ್ಮಡಿಯಾಯಿತು. ಕ್ರಿ. ಶ. ೧೮೬೧ ರಲ್ಲಿ ರಾಣಿ ರಾಸಮಣಿ ಸ್ವರ್ಗಸ್ಥಳಾದ ಮೇಲೆ ಮಥುರನು ತನ್ನ ಜೀವಮಾನವನ್ನೂ ಐಶ್ವರ್ಯವನ್ನೂ ಪರಮಹಂಸರ ಸೇವೆಯಲ್ಲಿ ಕೃಪಣತೆಯಿಲ್ಲದೆ ಸದ್ವಿನಿಯೋಗಮಾಡಿ ಕೃತಾರ್ಥನಾದನು.

ಎರಡು ವರ್ಷಗಳು ಕಳೆದುವು.

ಶ್ರೀರಾಮಕೃಷ್ಣರು ಏಕಾಂಗಸಾಹಸದಿಂದ ಆತ್ಮದ ಅನಂತ ವಿಸ್ತಾರವಾದ ಅಪರಿಚಿತ ಅರಣ್ಯಗಳಲ್ಲಿ ಮಾರ್ಗದರ್ಶಕರ ನೆರವನ್ನು ಹಾರೈಸದೆ ನುಗ್ಗುತ್ತಿದ್ದರು. ಆದರೆ ತಾವು ಹೋಗುತ್ತಿದ್ದ ಹಾದಿ ಸರಿಯೋ ತಪ್ಪೋ ಎಂದು ಹೇಳುವವರಿಲ್ಲದೆ ಕಾತರರಾಗಿದ್ದರು. ಕಂಡಕಂಡವರೆಲ್ಲರೂ ಹುಚ್ಚು ಹಿಡಿದಿದೆ ಎಂದು ಹೇಳುತ್ತಿದ್ದುದನ್ನು ಕೇಳಿ, ಅವರಿಗೂ ಕೆಲವು ಸಾರಿ ತಮ್ಮ ಯಾತ್ರೆಯ ವಿಚಾರದಲ್ಲಿ ಸಂದೇಹವುಂಟಾಗುತಿತ್ತು. ಹೀಗೆ ಶ್ರದ್ಧೆ, ಸಂದೇಹ, ಉತ್ಸಾಹ, ನಿರಾಶೆ, ದರ್ಶನ, ಸಮಾಧಿಗಳ ಆವರ್ತಗರ್ತದಲ್ಲಿ ಸಿಕ್ಕಿ ಜಗನ್ಮಾತೆಯೆಂಬ ನೌಕಾಸ್ತಂಭವನ್ನು ಮಾತ್ರ ಕೈಬಿಡದೆ ಬಲವಾಗಿ ಹಿಡಿದಿರುತ್ತಿರಲು ಅನಿರೀಕ್ಷಿತವಾದ ದಿಕ್ಕಿನಿಂದ ಸಹಾಯ ಬಂದಿತು.

ಒಂದು ದಿನ ಪ್ರಭಾತದಲ್ಲಿ ಶ್ರೀರಾಮಕೃಷ್ಣರು ಜಗನ್ಮಾತೆಯ ಆರಾಧನೆಗೆಂದು ದೇವಸ್ಥಾನದ ಹೂದೋಟದಲ್ಲಿ ಹೂಕೊಯ್ಯುತ್ತಿದ್ದರು. ವಿಸ್ತೃತ ಗಂಭೀರ ಗಂಗಾಸ್ರೋತದಲ್ಲಿ ಸಣ್ಣ ದೋಣಿಯೊಂದು ತೇಲಿಬಂದು ಸೋಪಾನಘಟ್ಟದಲ್ಲಿ ನಿಂತಿತು. ಆ ದೋಣಿಯಿಂದ ಸ್ತ್ರೀಮೂರ್ತಿಯೊಂದು ಕೆಳಗಿಳಿಯಿತು. ಆಕೆಯ ಕೈಯಲ್ಲಿ ಒಂದು ಪುಸ್ತಕದ ಗಂಟಿತ್ತು. ಸುಮಾರು ಮೂವತ್ತೈದು-ನಾಲ್ವತ್ತು ವಯಸ್ಸಿನವಳಾಗಿದ್ದರೂ ಇನ್ನೂ ಕಿರಿಯವಳಂತೆ ತೋರುತ್ತಿದ್ದಳು. ಸುಂದರಿಯಾದ ಆಕೆಯ ಕೇಶಪಾಶಗಳು ಮುಡಿಗಟ್ಟದಿದ್ದುದರಿಂದ ಬೆನ್ನಿನ ಮೇಲೆಯೂ ಭುಜದ ಮೇಲೆಯೂ ನೀಳವಾಗಿ ಜೋಲಾಡುತ್ತ ಗಾಳಿಗೆ ಅತ್ತಿತ್ತ ಒಲೆದಾಡು

ತ್ತಿದ್ದುವು. ಉಟ್ಟಿದ್ದ ಗೈರಿಕವಸನದಿಂದ ಆಕೆ ಸಂನ್ಯಾಸಿನಿ ಎಂದು ಗೊತ್ತಾಯಿತು. ತೇಜಸ್ವಿನಿಯಾಗಿದ್ದ ಆಕೆಯ ಪ್ರಥಮಸಂದರ್ಶನದಿಂದಲೇ ಪರಮಹಂಸರು ಆಕರ್ಷಿತರಾದರು. ಹಾಗೆಯೇ ಹೂಕೊಯ್ಯುವುದನ್ನು ನಿಲ್ಲಿಸಿ ತಮ್ಮ ಕೊಟಡಿಗೆ ಹೋಗಿ ಹೃದಯನನ್ನು ಕುರಿತು ಆಕೆಯನ್ನು ಕರೆದುಕೊಂಡು ಬಾ ಎಂದು ಹೇಳಿದರು. "ಹೆಂಗಸು, ಅಪರಿಚಿತಳು, ಕರೆದರೆ ಬರುತ್ತಾಳೆಯೇ?" ಎಂದು ಹೃದಯನು ಹೇಳಿದ ಮಾತಿಗೆ ಪರಮಹಂಸರು "ಹೋಗು, ನನ್ನ ಹೆಸರು ಹೇಳಿ ನಾನು ಕರೆದೆ ಎಂದು ಹೇಳು." ಎಂದರು. ಹೃದಯನು ಹೋಗಿ ಕರೆದನು. ಆ ಸ್ತ್ರೀಮೂರ್ತಿ ಏನೊಂದು ಮಾತನ್ನೂ ಹೇಳದೆ ಪರಮಹಂಸರೆಡೆಗೆ ಬಂದಿತು.

ಆಕೆಯ ಹೆಸರು ಭೈರವೀ ಬ್ರಾಹ್ಮಣಿ.

ಶ್ರೀರಾಮಕೃಷ್ಣರನ್ನು ನೋಡಿದೊಡನೆಯೇ ಭೈರವಿ ಗಳದಶ್ರುಲೋಚನೆಯಾಗಿ ವಾತ್ಸಲ್ಯಪೂರ್ಣವಾದ ಮೃದುವಾಣಿಯಿಂದ "ಬಾಬಾ, ನೀನು ಇಲ್ಲಿದ್ದೀಯಾ! ನೀನೆಲ್ಲಿಯೋ ಗಂಗಾತೀರದಲ್ಲಿ ಇರುತ್ತಿರುವೆ ಎಂದು ತಿಳಿದು ಬಹುಕಾಲದಿಂದ ನಿನ್ನನ್ನೇ ಹುಡುಕುತ್ತಿದ್ದೆ. ಅಂತೂ ಕಡೆಗೆ ನಿನ್ನನ್ನು ಕಂಡ ಹಾಗಾಯ್ತು." ಎಂದಳು.

"ತಾಯಿ, ನಾನು ನಿನಗೆ ಹೇಗೆ ಗೊತ್ತು?" ಎಂದರು ಪರಮಹಂಸರು.

ಬ್ರಾಹ್ಮಣಿ "ಜಗನ್ಮಾತೆಯ ಕೃಪೆಯಿಂದ" ಎಂದು ತನ್ನ ವೃತ್ತಾಂತವೆಲ್ಲವನ್ನೂ ಹೇಳಿದಳು.

ಭೈರವೀ ಬ್ರಾಹ್ಮಣಿ ವಂಗಪ್ರಾಂತದ ಯಶೋಹರ ಜಿಲ್ಲೆಯ ಕುಲೀನ ಬ್ರಾಹ್ಮಣ ವಂಶದವಳು. ವೈಷ್ಣವ ಸಂಪ್ರದಾಯಕ್ಕೆ ಸೇರಿದ ಆ ವಿದ್ಯಾವತಿ ಭಕ್ತಿಶಾಸ್ತ್ರಗಳಲ್ಲಿ ಅತಿಶಯವಾದ ಪಾಂಡಿತ್ಯ ಸಂಪಾದನೆ ಮಾಡಿದ್ದಳು. ದೈವಾಂಶ ಸಂಭೂತ ಮಹಾಪುರುಷನೊಬ್ಬನು ಅವತರಿಸಿದುದು ಆಕೆಯ ಅಂತರ್ದೃಷ್ಟಿಗೆ ಗೋಚರವಾಗಿ, ಆತನಿಗೆ ತನ್ನಿಂದ ಸಲ್ಲಬೇಕಾದ ಸಂದೇಶವನ್ನು ನಿವೇದಿಸಲು ಯಾತ್ರೆ ಹೊರಟಿದ್ದಳು.

ಇದನ್ನೆಲ್ಲ ಎವೆಯಿಕ್ಕದೆ ಆಲಿಸಿದ ಶ್ರೀರಾಮಕೃಷ್ಣರು ಶಿಶುಸಹಜವಾದ ಸರಳಭಾವದಿಂದ ಆಕೆಯ ಮುಂದೆ ತಮ್ಮ ಸಾಧನೆಯ ಇತಿಹಾಸವೆಲ್ಲವನ್ನೂ ವಿಸ್ತರಿಸಿದರು. ಅಲ್ಲದೆ ಜನಗಳೆಲ್ಲ ತಮಗೆ ಹುಚ್ಚು ಹಿಡಿದಿದೆ ಎಂದು ಹೇಳುತ್ತಿದ್ದುದನ್ನು

ತಿಳಿಸಿ, ಮತ್ತೆ ಮತ್ತೆ ಉದ್ವೇಗದಿಂದ "ತಾಯಿ, ನೀನಾದರೂ ಹೇಳಬಲ್ಲೆಯಾ? ನನಗೆ ನಿಜವಾಗಿಯೂ ಹುಚ್ಚು ಹಿಡಿದಿದೆಯೇ? ನನ್ನ ಸಾಧನೆ ಪ್ರಾರ್ಥನೆಗಳಿಗೆ ಇದೇ ಪ್ರತಿಫಲವೆ?" ಎಂದು ಪ್ರಶ್ನೆ ಮಾಡಿದರು. ಮಹಾಪಂಡಿತೆ ವಿಸ್ಮಯಾಶ್ಚರ್ಯ ಆನಂದಗಳಿಂದ ಎಲ್ಲವನ್ನೂ ಮೌನವಾಗಿ ಕೇಳಿ ಇಂತೆಂದಳು: "ಬಾಬಾ, ನಿನಗೆ ಹುಚ್ಚು ಎಂದು ಹೇಳುವವರಾರು? ಇದು ಹುಚ್ಚಲ್ಲ. ನೀನಿರುವ ಅವಸ್ಥೆಯನ್ನು ಶಾಸ್ತ್ರಗಳು 'ಮಹಾಭಾವ' ಎಂದು ಕರೆಯುತ್ತವೆ. ಈ ದಿವ್ಯಾವಸ್ಥೆಯನ್ನು ಜನಗಳು ತಿಳಿಯಲಾರದೆ, ನಿನಗೆ ಹುಚ್ಚು ಎಂದು ಹೇಳುತ್ತಿದ್ದಾರೆ. ಶ್ರೀರಾಧೆ ಮತ್ತು ಶ್ರೀಕೃಷ್ಣ ಚೈತನ್ಯ ಮೊದಲಾದವರಲ್ಲಿ ಈ ಮಹಾಭಾವವಿತ್ತು. ಇದೆಲ್ಲವನ್ನೂ ಭಕ್ತಿಶಾಸ್ತ್ರಗಳು ಹೇಳುತ್ತವೆ. ನನ್ನ ಬಳಿಯಿರುವ ಈ ಗ್ರಂಥಗಳಿಂದ ನಿನಗೆಲ್ಲ ಓದಿ ಹೇಳುತ್ತೇನೆ. ಈಶ್ವರ ಸಾಕ್ಷಾತ್ಕಾರ ಮಾಡುವರೆಲ್ಲರೂ ಈ ಭಾವವನ್ನು ಅನುಭವಿಸಲೇ ಬೇಕು." ಆಶಾಪೂರ್ಣವಾದ ಈ ಮಾತುಗಳನ್ನು ಕೇಳಿ ಶ್ರೀರಾಮಕೃಷ್ಣರ ಬೇಗುದಿಗೊಂಡ ಎದೆಗೆ ತಣ್ಣೀರು ತೀಡಿದಂತಾಯಿತು. ಅವರು ಭೈರವಿಯೊಡನೆ ಚಿರಪರಿಚಿತಳಂತೆ ವರ್ತಿಸುತ್ತಿದ್ದುದನ್ನು ಕಂಡು ಹೃದಯನು ಬೆರಗಾದನು.

ಭೈರವಿ ದೇವಾಲಯ ಪ್ರದಕ್ಷಿಣೆ ಮಾಡಿ, ಶ್ರೀರಾಮಕೃಷ್ಣರು ಕೊಟ್ಟ ಕಾಳಿಕಾಲಯದ ಪ್ರಸಾದವನ್ನು ಸ್ವೀಕರಿಸಿ ಅಡುಗೆಮಾಡಿಕೊಳ್ಳಲು ಪಂಚವಟಿಗೆ ಹೋದಳು. ಪಾಕವೆಲ್ಲ ಪೂರೈಸಿದ ತರುವಾಯ ತನ್ನ ಇಷ್ಟದೇವತೆಯಾದ ರಘುವೀರನ ವಿಗ್ರಹದ ಮುಂದೆ ನೈವೇದ್ಯಗಳನ್ನು ಇಟ್ಟು ತಾನು ಧ್ಯಾನ ಮಾಡುತ್ತ ಕುಳಿತಳು. ಕಣ್ದೆರೆದು ನೋಡಿದರೆ, ಶ್ರೀರಾಮಕೃಷ್ಣರು ಎದುರುಗಡೆ ಕುಳಿತುಕೊಂಡು ನೈವೇದ್ಯವನ್ನೆಲ್ಲ ಮುಕ್ಕುತ್ತಿದ್ದಾರೆ! ಅವರ ಕ್ರಿಯೆಯಲ್ಲಿ ಬಾಹ್ಯಪ್ರಜ್ಞೆ ಇರುವಂತೆ ತೋರುತ್ತಿರಲಿಲ್ಲ. ಬ್ರಾಹ್ಮಣಿಗೆ ಅದನ್ನು ಕಂಡು ಆಶ್ಚರ್ಯವೂ ಆನಂದವೂ ಒಂದರೊಡನೆ ಒಂದು ಸ್ಪರ್ಧೆಹೂಡಿದುವು. ಸ್ವಲ್ಪ ಹೊತ್ತಿನಲ್ಲಿ ಪರಮಹಂಸರು ಫಕ್ಕನೆ ಮೈತಿಳಿದವರಾಗಿ ದೀನಸ್ವರದಿಂದ "ತಾಯಿ, ನಾನೇಕೆ ಹೀಗೆ ಮಾಡಿದೆನೋ ನನಗೆ ತಿಳಿಯದು, ಕ್ಷಮಿಸು." ಎಂದರು. ಭೈರವಿ ಶಾಂತವಾಣಿಯಿಂದ "ಬಾಬಾ, ನೀನು ಮಾಡಿದ್ದು ಲೇಸಾಯ್ತು. ಅದನ್ನು ಮಾಡಿದ್ದು ನಿಜವಾಗಿಯೂ ನೀನಲ್ಲ; ನಿನ್ನಲ್ಲಿರುವಾತನು. ಅವನು ಯಾವಾಗಲೂ ಹೀಗೆಯೇ

ಮಾಡುತ್ತಾನೆ. ನಾನು ಧ್ಯಾನಮಾಡುತ್ತಿದ್ದಾಗ ಅದನ್ನು ಮಾಡಿದವರಾ ರೆಂಬುದನ್ನು ತಿಳಿದುಕೊಂಡೆ. ಇನ್ನು ನನಗೆ ಈ ವಿಗ್ರಹ ಪೂಜೆಯ ಆವಶ್ಯಕತೆ ಇಲ್ಲ. ನನ್ನ ಇಷ್ಟದೇವತೆ ನನಗೆ ದೊರಕಿದ್ದಾನೆ.'' ಎಂದು ಹೇಳುತ್ತ ಶ್ರೀರಾಮ ಕೃಷ್ಣರು ತಿಂದುಬಿಟ್ಟ ನೈವೇದ್ಯವನ್ನೂ ತಾನು ಬಹುಕಾಲದಿಂದ ಆರಾಧಿಸಿದ ರಘುವೀರನ ವಿಗ್ರಹವನ್ನೂ ಗಂಗಾಪ್ರವಾಹದಲ್ಲಿ ವಿಸರ್ಜಿಸಿಬಿಟ್ಟಳು.

ಭೈರವೀ ಬ್ರಾಹ್ಮಣಿ ಮಾತೃಸಹಜವಾದ ವಾತ್ಸಲ್ಯಭಾವದಿಂದ ಶ್ರೀರಾಮ ಕೃಷ್ಣರಿಗೆ ಮಾರ್ಗದರ್ಶಿನಿಯಾದಳು. ಇದುವರೆಗೆ ಪರಮಹಂಸರು ಮಾರ್ಗ ದರ್ಶಕರಿಲ್ಲದೆ ತಮ್ಮ ಸ್ವಂತ ಸಾಹಸೋತ್ಸಾಹಗಳಿಂದಲೇ ಆಧ್ಯಾತ್ಮಿಕ ಅನು ಭವಗಳ ಮಹಾರಣ್ಯದಲ್ಲಿ ಏಕಾಕಿಯಾಗಿ ತಿರುತಿರುಗಿ ಅನೇಕ ಸತ್ಯಗಳನ್ನು ಮುಟ್ಟಿದ್ದರು. ಆದರೆ ತಮ್ಮ ಸ್ವಾನುಭವದ ಸತ್ಯಗಳಿಗೆ ಪರಾನುಭವದ ಸಾಕ್ಷ್ಯ ವಿಲ್ಲದೆ ಕೆಲವು ಸಾರಿ ಸಂಶಯಪಡುತ್ತಿದ್ದರು. ಭೈರವಿಯ ಶಾಸ್ತ್ರಜ್ಞಾನದ ಪ್ರಾಮಾ ಣ್ಯವು ದೊರಕಿದ ಮೇಲೆ ಅವರಿಗೆ ಭರವಸೆಯುಂಟಾಯಿತು. ಭೈರವಿ ಪೂರ್ವ ಕಾಲದ ಮಹಾಭಕ್ತರ ಮತ್ತು ಅವತಾರಗಳ ಚರಿತ್ರೆಗಳನ್ನು ಚೆನ್ನಾಗಿ ಅಧ್ಯಯನ ಮಾಡಿದವಳಾದುದರಿಂದಲೂ ಭಕ್ತಿಸಾಧಕರ ವಿವಿಧ ಅವಸ್ಥೆಗಳನ್ನು ಸ್ವಲ್ಪ ಮಟ್ಟಿಗೆ ತಿಳಿದವಳಾದುದರಿಂದಲೂ ಶ್ರೀರಾಮಕೃಷ್ಣರ ಅನುಭವಗಳೆಲ್ಲ ಅರ್ಥ ಪೂರ್ಣವಾದುವೆಂದು ಸಾರಿದಳು. ಅಲ್ಲದೆ ಭಕ್ತಿಯ ಆವೇಗದಿಂದ ಸಾಧಕನಿಗೆ ಬಂದೊದಗಬಹುದಾದ ಕಷ್ಟಗಳಿಗೂ ದೈಹಿಕಮಾನಸಿಕ ಯಾತನೆಗಳಿಗೂ ಪರಿ ಹಾರವನ್ನು ಅರಿತಿದ್ದಳು. ಆದ್ದರಿಂದ ಪರಮಹಂಸರಿಗೆ ಎಂದಿನಂತೆ ಮೈಯಲ್ಲಿ ಬೆಂಕಿಯುರಿ ತೋರಲು ಅವರಿಗೆ ಗಂಗಾಸ್ನಾನಮಾಡಿಸಿ, ಮೈತುಂಬಾ ಗಂಧ ಲೇಪನಮಾಡಿ ಹೂವಿನ ಮಾಲೆಗಳನ್ನು ತೊಡಿಸಿದಳು. ಮೊದಲು ಇದನ್ನು ನೋಡಿದ ಜನರು ಹಾಸ್ಯಮಾಡಿದರು. ಆದರೆ ಶ್ರೀರಾಮಕೃಷ್ಣರಿಗೆ ಸಂಪೂರ್ಣ ಗುಣವಾದುದನ್ನು ಕಂಡು ವಿಸ್ಮಿತರಾದರು. ಅನೇಕ ವೈದ್ಯರಿಂದಾಗದಿದ್ದ ಕಾರ್ಯವು ಬ್ರಾಹ್ಮಣಿಯ ವಿಚಿತ್ರ ಔಷಧಿಯಿಂದ ಸಾಧ್ಯವಾಯಿತು. ಕೆಲವು ದಿನಗಳ ಮೇಲೆ ಪರಮಹಂಸರಿಗೆ ಹಿಂದೆ ಎಂದೂ ತೋರದಿದ್ದ ಮತ್ತೊಂದು ರೋಗ ಪ್ರಾಪ್ತವಾಯಿತು. ಅದಾವುದೆಂದರೆ—ಯಾವ ಎಷ್ಟು ಆಹಾರದಿಂದಲೂ ತಣಿಯದ ಹಸಿವು! ಬ್ರಾಹ್ಮಣಿ ಮಥುರನಾಥನ ಸಹಾಯದಿಂದ ತಿನ್ನುವ ಪದಾರ್ಥ

ಗಳನ್ನು ಒಂದು ಕೋಣೆಯೊಳಗೆ ಯಥೇಷ್ಟವಾಗಿ ರಾಶಿಹಾಕಿ ಪರಮಹಂಸರನ್ನು ಅದರಲ್ಲಿ ಬಿಟ್ಟು ಹಗಲೂ ಇರುಳೂ ತಿನ್ನುವಂತೆ ಹೇಳಿದಳು. ಮೂರು ದಿನಗಳ ಮೇಲೆ ವ್ಯಾಧಿ ಮಾಯವಾಯಿತು.

ಶ್ರೀರಾಮಕೃಷ್ಣರ ಕಾಯಲಕ್ಷಣಗಳನ್ನೂ ಬಾಹ್ಯಾಚರಣೆಗಳನ್ನೂ ಆತ್ಮಾನುಭವಗಳನ್ನೂ ಚೆನ್ನಾಗಿ ಅವಲೋಕಿಸಿ ಭೈರವಿ ಅವರನ್ನು ಮಹಾ ಭಕ್ತ ಮಾತ್ರರಲ್ಲದೆ ಅವತಾರಪುರುಷರೆಂದೂ ನಿರ್ಧರಿಸಿದಳು. ಆಕೆಯ ಸಿದ್ಧಾಂತಕ್ಕೆ ಬೇಕಾದಷ್ಟು ವಾದಗಳೂ ಶಾಸ್ತ್ರಾಧಾರಗಳೂ ಇದ್ದುವು. ಈ ವಿಷಯವನ್ನು ಆಕೆ ಶ್ರೀರಾಮಕೃಷ್ಣ ಮತ್ತು ಹೃದಯರಲ್ಲಿ ಮಾತ್ರವಲ್ಲದೆ ಕಂಡಕಂಡವರಿಗೆಲ್ಲ ಹೇಳತೊಡಗಿದಳು. ಒಂದು ದಿನ ಪರಮಹಂಸರೇ ಮಥುರನೊಡನೆ "ಬ್ರಾಹ್ಮಣಿ ತನ್ನನ್ನು ಅವತಾರಪುರುಷನೆಂದು ಹೇಳುತ್ತಿದ್ದಾಳೆ." ಎಂದು ಹೇಳಿದರು. ಅದಕ್ಕೆ ಮಥುರನು "ಎಲ್ಲಿಯಾದರೂ ಉಂಟೇ? ಅವತಾರಗಳು ಹತ್ತಕ್ಕಿಂತ ಹೆಚ್ಚಿಲ್ಲ." ಎಂದನು. ಅಷ್ಟರಲ್ಲಿ ಅಲ್ಲಿಗೆ ಬಂದ ಭೈರವಿ ಶಾಸ್ತ್ರಾಧಾರದಿಂದ ತನ್ನ ಸಿದ್ಧಾಂತವನ್ನು ಸಮರ್ಥಿಸಿದಳು. ಈ ವಿಷಯ ದೇವಾಲಯದಲ್ಲಿ ಹಬ್ಬಿತು. ಎಲ್ಲರೂ ಇದುವರೆಗೆ ಯಾರನ್ನು ಹುಚ್ಚನೆಂದು ತಿಳಿದಿದ್ದರೋ ಆತನು ಈಗ ಅವತಾರವಾದನೇ! ಎಲ್ಲರಿಗೂ ಇದೊಂದು ಬಿಡಿಸಲಾರದ ಸಮಸ್ಯೆಯಾಯಿತು. ಮಥುರನಾಥನು ವಿಷಯನಿರ್ಣಯಕ್ಕಾಗಿಯೂ ಸಮಸ್ಯೆಯ ಪರಿಹಾರಾರ್ಥವಾಗಿಯೂ ಪ್ರಸಿದ್ಧರಾದ ಪಂಡಿತರು ಮತ್ತು ಶಾಸ್ತ್ರಿಗಳನ್ನು ಆಹ್ವಾನಿಸಿ ಒಂದು ಸಭೆ ಸೇರಿಸಿದನು. ವಾದದಲ್ಲಿ ಭೈರವಿ ಜಯಶೀಲಳಾದಳು. ನೆರೆದ ವಿದ್ವಾಂಸರು ಆಕೆಯ ಸಿದ್ಧಾಂತವನ್ನು ಮನಃಪೂರ್ವಕವಾಗಿ ಸಮ್ಮತಿಸಿದರು. ಕೆಲವರು ಶ್ರೀ ರಾಮಕೃಷ್ಣರ ಭಕ್ತರಾದರು. ಇದನ್ನೆಲ್ಲ ಕೇಳಿ ಪರಮಹಂಸರು ಮುಗುಳ್ನಗೆಯಿಂದ "ಸದ್ಯಕ್ಕೆ ನಾನು ಅವತಾರವೋ ಅಲ್ಲವೋ ಅದು ಹೇಗಾದರೂ ಇರಲಿ, ಹುಚ್ಚನಲ್ಲ ಎಂದು ಗೊತ್ತಾಯಿತಲ್ಲಾ. ಅಷ್ಟೇ ಸಾಕು." ಎಂದರು.

ಭೈರವಿಯ ಆಗಮನದಿಂದ ಶ್ರೀರಾಮಕೃಷ್ಣರ ಸಾಧನೆಗೆ ಸಹಾಯವಾದುದೊಂದೇ ಅಲ್ಲ, ಅವರ ವಿಚಾರವಾಗಿ ಜನರಲ್ಲಿದ್ದ ತಪ್ಪುಭಾವನೆಗಳು ಮೆಲ್ಲನೆ ತೊಲಗಿದುವು. ಅದುವರೆಗೆ ಅರ್ಥಹೀನವಾಗಿಯೂ ಹುಚ್ಚುಹುಚ್ಚಾಗಿಯೂ ಕಾಣುತ್ತಿದ್ದ ಅವರ ಆಚರಣೆ ಅನುಭವಗಳು ಬ್ರಾಹ್ಮಣಿಯ ವ್ಯಾಖ್ಯಾನ ಜ್ಯೋತಿ

ಯಿಂದ ಸಾರ್ಥಕವಾಗಿಯೂ ದಿವ್ಯವಾಗಿಯೂ ತೋರಿಬಂದುವು. ಶ್ರೀರಾಮ ಕೃಷ್ಣರ ಮಹಾಮಹಿಮೆಯನ್ನು ಶಾಸ್ತ್ರೀಯವಾಗಿಯೂ ಬುದ್ಧಿಪೂರ್ವಕವಾಗಿಯೂ ಅರಿತವರಲ್ಲಿ ಭೈರವಿಯೇ ಮೊದಲನೆಯವಳೆಂದು ಹೇಳಬಹುದು.

ಇವರಿಬ್ಬರ ಸಂಬಂಧದಿಂದ ಮತ್ತೊಂದು ವಿಷಯ ವ್ಯಕ್ತವಾಗುವುದು. ಸಾಧಾರಣವಾಗಿ ತ್ಯಾಗ, ಸಂನ್ಯಾಸ, ಈಶ್ವರಸಾಧನೆ—ಎಂದರೆ ಅನೇಕರ ಮನಸ್ಸಿನಲ್ಲಿ ಸ್ತ್ರೀ ತಿರಸ್ಕಾರವು ಮೂಡದಿರುವುದಿಲ್ಲ. ಅಲ್ಲದೆ ಪರಮಹಂಸರೂ ತಮ್ಮ ಜೀವಮಾನದಲ್ಲಿ ಈಶ್ವರಸಾಕ್ಷಾತ್ಕಾರಕ್ಕೆ ಕಾಮಿನೀಕಾಂಚನ ತ್ಯಾಗ ಅತ್ಯಾವಶ್ಯಕ ಎಂಬುದನ್ನು ನಿಷ್ಕೃಷ್ಟವಾಗಿ ಸಾರಿರುತ್ತಾರೆ. ಅಂದರೆ ಕಾಮಿನೀತ್ಯಾಗವೆಂದರೆ ಸ್ತ್ರೀ ತಿರಸ್ಕಾರವೆಂದಲ್ಲ; ಕಾಮಮೂಲವಾದ ಮೋಹದ ತ್ಯಾಗ ಎಂದರ್ಥ. ಅವರು ಸ್ತ್ರೀ ಜಗನ್ಮಾತೆ ಎಂದು ಹೇಳುತ್ತಿದ್ದರು. ಸ್ತ್ರೀಯನ್ನು ಮಾತೃಸ್ಥಾನದಲ್ಲಿಟ್ಟು ಪೂಜಿಸುವುದರಿಂದಲೇ ಕಾಮಿನೀತ್ಯಾಗವು ಸುಲಭವಾಗುತ್ತದೆ ಎಂಬುದು ಅವರ ಮತವಾಗಿತ್ತು. ಅವರು ಸ್ತ್ರೀಯನ್ನು ಗುರುವಾಗಿ ಸ್ವೀಕರಿಸಿದುದೇ ಅದಕ್ಕೆ ಸಾಕ್ಷಿ. ಮುಂದೆ ತಮ್ಮ ಸಹಧರ್ಮಿಣಿಯಾದ ಶ್ರೀ ಶಾರದಾಮಣಿದೇವಿಯನ್ನು ಎಂತು ಮಾತೃಸ್ಥಾನದಲ್ಲಿ ನಿಲ್ಲಿಸಿ ಆರಾಧಿಸಿದರೆಂಬುದನ್ನು ವಾಚಕರು ಕಾಣಬಹುದು.

ವೈಷ್ಣವಸಾಧನೆಗಳಲ್ಲಿ ಪರಮಹಂಸರು ಉತ್ತೀರ್ಣರಾದ ತರುವಾಯ ಬ್ರಾಹ್ಮಣಿ ಅವರಿಗೆ ತಾಂತ್ರಿಕಸಾಧನೆಗಳನ್ನು ಉಪದೇಶಿಸಿದಳು. ಸಂಪೂರ್ಣವಾದ ಇಂದ್ರಿಯ ನಿಗ್ರಹವೇ ತಾಂತ್ರಿಕಸಾಧನೆಯ ಗುರಿ. ಸ್ವಾಭಾವಿಕವಾಗಿ ಮಾನವನು ಭೋಗಾಭಿಲಾಷಿ; ತ್ಯಾಗವು ಅವನಿಗೆ ರುಚಿಸದು. ನಿಷ್ಕಲ್ಮಷ ಚಿತ್ತನಾಗಿ ಈಶ್ವರನನ್ನು ಕುರಿತು ಧ್ಯಾನಮಾಡುವುದು ಅವನಿಗೆ ಕಷ್ಟಸಾಧ್ಯ. ಆದ್ದರಿಂದಲೇ ಹೊನ್ನಿನಲ್ಲಿ ಕಾಳಿಕೆ ಬೆರೆತಿರುವಂತೆ ಮಾನವನ ಹೃದಯದಲ್ಲಿ ನೈರ್ಮಲ್ಯದೊಂದಿಗೆ ಮಾಲಿನ್ಯವೂ ಕೂಡಿರುತ್ತದೆ. ಮಾಯೆಯ ವಜ್ರೋಪಮವಾದ ಆಲಿಂಗನವು ಆತ್ಮವನ್ನು ಸದಾ ಬಿಗಿದಿರುತ್ತದೆ. ಮಾಯೆಯನ್ನು 'ಇಲ್ಲ ಮಾಡಲು' ಅಸಾಧ್ಯವಾದುದರಿಂದ, ಅದನ್ನು ಬ್ರಹ್ಮಮುಖವಾಗಿ ತಿರುಗಿಸಿ, ಬ್ರಹ್ಮದಲ್ಲಿ ಐಕ್ಯವಾಗುವಂತೆ ಮಾಡಿದರೆ ಮೋಕ್ಷವಾಗುತ್ತದೆ. ಇದೇ ತಾಂತ್ರಿಕಸಾಧನೆಯ ನಿಜವಾದ ಧ್ಯೇಯ. ಇಂದ್ರಿಯಗಳನ್ನು ವಜ್ರಬಂಧನಗಳಿಂದ ಬಿಗಿದು ಆಕ

ರ್ಷಿಸುವ ಭೋಗವಸ್ತುಗಳ ಸಾಮೀಪ್ಯ ಸಾನ್ನಿಧ್ಯಗಳಲ್ಲಿ ಇದ್ದುಕೊಂಡು ಮನಸ್ಸನ್ನು ಬ್ರಹ್ಮಮುಖವಾಗಿ ಮಾಡುವ ವಿಷಮ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ಜಯಶೀಲನಾಗುವುದೇ ತಾಂತ್ರಿಕಸಾಧಕನ ಸಾಹಸ. ಎಂದರೆ ಭೀಷಣ ಜ್ವಾಲಾಮಯವಾದ ದವಾಗ್ನಿಯ ಮಧ್ಯೆ ಧುಮುಕಿ ಅಕ್ಷತವಾಗಿ ಪಾರಾಗುವುದೇ ತಂತ್ರಸಾಧನೆಯ ಸಿದ್ಧಿ. ತಾಂತ್ರಿಕಸಾಧಕನು ಪಾಪ ಪುಣ್ಯ ಶಾಶ್ವತ ನಶ್ವರ ಎಲ್ಲದರಲ್ಲಿಯೂ ಏಕಾದ್ವಯ ಬ್ರಹ್ಮವಸ್ತುವನ್ನು ಕಾಣಲು ಸಮರ್ಥನಿರಬೇಕು. ಸ್ವಲ್ಪ ದುರ್ಬಲನಾದರೂ ಸಾಕು, ಸ್ವರ್ಗದ ಉನ್ನತೋನ್ನತ ಶಿಖರ ಸಿಂಹಾಸನದಿಂದ ಪತಿತನಾಗಿ ಪಾತಾಳದ ಅಗಾಧವಾದ ನರಕಕೂಪದಲ್ಲಿ ಬಿದ್ದುಹೋಗುತ್ತಾನೆ. ಆದ್ದರಿಂದ ಮಹಾ ಕಠೋರವಾದ ಇಂದ್ರಿಯ ನಿಗ್ರಹವು ತಾಂತ್ರಿಕಸಾಧನೆಗೆ ಅತ್ಯಾವಶ್ಯಕವಾದುದು. ಇದನ್ನರಿಯದೆ ಅನೇಕ ದುರ್ಬಲ ಮಾನವರು ತಾಂತ್ರಿಕ ಸಾಧನೆಗೆ ಕೈಹಾಕಿ ಸರ್ವನಾಶವಾಗಿದ್ದಾರೆ. ಸಮುದ್ರಲಂಘನವು ಶ್ರೀರಾಮಚಂದ್ರನ ಕೃಪಾಬಲ ಬಲಾನ್ವಿತನಾದ ಹನುಮಂತ ದೇವನಿಗಲ್ಲದೆ ಇತರರಿಗೆ ಸಾಧ್ಯವಲ್ಲ. ಸ್ವತಃ ಸಾಧಕಳಾಗಿದ್ದ ಭೈರವಿಯ ಮಾರ್ಗದರ್ಶಿತ್ವದಲ್ಲಿ ತುಷಾರಧವಳಿಮ ಹೃದಯರಾದ ಶ್ರೀರಾಮಕೃಷ್ಣರು ಜಗನ್ಮಾತೆಯ ಆಶೀರ್ವಾದದಿಂದ ತಂತ್ರ ಸಾಧನೆಯೆಂಬ ಅಗ್ನಿಕುಂಡದಲ್ಲಿ ಮುಳುಗಿ, ಮಿಂದು, ಅಕ್ಷತರಾಗಿ, ಸುರಕ್ಷಿತವಾಗಿ, ಸಮಧಿಕ ತೇಜಸ್ವಿಗಳಾಗಿ ಹೊರಬಿದ್ದರು. ಅಣಿಮಾದಿ ಅಷ್ಟಸಿದ್ಧಿಗಳೂ ಅವರ ಸ್ವಾಧೀನವಾದುವು. ಆದರೆ ಆ ಸಿದ್ಧಿಗಳನ್ನು ಅವರು ಯಾವಾಗಲೂ ಹೇಯವೆಂದು ಪರಿಗಣಿಸುತ್ತಿದ್ದರು. ಅಲ್ಲದೆ ಮುಂದೆ ತಮ್ಮ ಶಿಷ್ಯರಿಗೂ ಯೋಗಸಿದ್ಧಿಗಳನ್ನು ಹೇಯವೆಂದು ಭಾವಿಸಬೇಕೆಂದು ಬೋಧಿಸಿದರು. ಏಕೆಂದರೆ, ಈ ಸಿದ್ಧಿಗಳು ಬ್ರಹ್ಮಸಾಕ್ಷಾತ್ಕಾರಕ್ಕೆ ಕಾಮಿನೀಕಾಂಚನಗಳಿಗಿಂತಲೂ ಪ್ರಬಲತರವಾದ ಅಡಚಣೆಗಳೆಂಬುದು ಅವರ ಮತವಾಗಿತ್ತು.

ತಾಂತ್ರಿಕಸಾಧನೆ ಪೂರೈಸಿದ ತರುವಾಯ ಪರಮಹಂಸರ ಪ್ರಸಿದ್ಧಿ ಮೆಲ್ಲಮೆಲ್ಲಗೆ ಹಬ್ಬಿತು. ಅನೇಕ ಸಾಧು ಸಂತರೂ ಇತರ ಭಕ್ತರೂ ದಕ್ಷಿಣೇಶ್ವರಕ್ಕೆ ಬಂದು ಅವರ ಸಾನ್ನಿಧ್ಯದಿಂದ ಪುನೀತರಾದರು. ಅದರ ವಿವರಣೆ ಮುಂದೆ. ಪರಮಹಂಸರ ದಾಸ್ಯಭಾವಸಾಧನೆಯನ್ನು ಕುರಿತು ಹಿಂದೆ ಹೇಳಿದ್ದೇವೆ. ಅವರ ವಾತ್ಸಲ್ಯಭಾವಸಾಧನೆ ಅದಕ್ಕಿಂತಲೂ ಮನೋಹರವಾದುದು. ಅದರ ಸರಳತೆ,

ಅದರ ಕರುಣೆ, ಅದರ ಅಕ್ಕರೆ, ಅದರ ಮಾಧುರ್ಯಗಳು ಅದನ್ನೊಂದು ಸುಮಧುರ ಗಾನವನ್ನಾಗಿ ಮಾಡಿವೆ. ಅದರ ಆಳ ಸಾಮಾನ್ಯ ಮಾನವನ ಅನುಭವಕ್ಕೆ ಅತೀತವಾಗಿದ್ದರೂ ಅದರ ಭಾವ ಮಾನವ ಸಾಧಾರಣವಾದುದು. ಕ್ರಿ. ಶ. ೧೮೬೪-೬೫ ನೆಯ ವರ್ಷದಲ್ಲಿ ಜಟಾಧಾರಿ ಎಂಬೊಬ್ಬ ಭಕ್ತಸಂನ್ಯಾಸಿ ದಕ್ಷಿಣೇಶ್ವರಕ್ಕೆ ಬಂದನು. ಶ್ರೀರಾಮಚಂದ್ರನ ಉಪಾಸಕನಾಗಿದ್ದ ಆತನಲ್ಲಿ ಶಿಶು ರಾಮಚಂದ್ರನ ಪುಟ್ಟ ಪ್ರತಿಕೃತಿಯೊಂದಿತ್ತು. ಅದನ್ನು ಆತನು 'ರಾಮಲಾಲ' ಎಂದರೆ 'ರಾಮಹುಡುಗ' ಎಂದು ಕರೆಯುತ್ತಿದ್ದನು. ವಾತ್ಸಲ್ಯಭಾವಸಾಧಕನಾದ ಜಟಾಧಾರಿಗೆ ಶಿಶುರಾಮನು ಪ್ರತ್ಯಕ್ಷನಾಗಿದ್ದನು. ಎಂದರೆ, ರಾಮನು ಆತನೊಡನೆ ಮಾತಾಡುತ್ತಿದ್ದನು; ಹೋದಲ್ಲಿಗೆ ಹೋಗುತ್ತಿದ್ದನು. ಆತನು ಕೊಟ್ಟ ಸವಿಯಾದ ತಿಂಡಿಗಳನ್ನು ತಿನ್ನುತ್ತಿದ್ದನು; ಆತನನ್ನು ಮಕ್ಕಳಂತೆ ಪೀಡಿಸಿ ಆನಂದಪಡಿಸುತ್ತಿದ್ದನು! ಆದರೆ ಇತರರಿಗೆ ಅದೊಂದೂ ಕಾಣುತ್ತಿರಲಿಲ್ಲ. ಇತರರು ಜಟಾಧಾರಿ ಮೂರ್ತಿಯನ್ನೇ ಭಕ್ತಿಯಿಂದ ಆದರಿಸುತ್ತಿದ್ದನೆಂದು ತಿಳಿದಿದ್ದರು. ಭಕ್ತಸಂನ್ಯಾಸಿ ಗುಟ್ಟನ್ನು ಯಾರಿಗೂ ಬಿಟ್ಟುಕೊಟ್ಟಿರಲಿಲ್ಲ. ಆದರೆ ಶ್ರೀರಾಮಕೃಷ್ಣರ ತೀಕ್ಷ್ಣದೃಷ್ಟಿಯಿಂದ ಗುಟ್ಟನ್ನು ಬೈತಿಡಲಾಗಲಿಲ್ಲ. ರಾಮಲಾಲನ ಆಟ, ನೋಟ, ನಡೆ, ನುಡಿ ಎಲ್ಲವೂ ಪರಮಹಂಸರಿಗೆ ಗೊತ್ತಾಗಿ ಅವರೂ ಶಿಶುರಾಮನ ನಚ್ಚಿನ ಸಂಗಾತಿಯಾದರು. ಹೀಗಾಗಿ ರಾಮಲಾಲನು ಆಗಾಗ್ಗೆ ಜಟಾಧಾರಿಯ ಕೂಟಡಿಯಿಂದ ಪರಮಹಂಸರ ಕೂಟಡಿಗೆ ಬರತೊಡಗಿದನು. ಪರಮಹಂಸರೊಡನೆ ಸಲಿಗೆ ಹೆಚ್ಚಿತು. ಪರಮಹಂಸರು ಹೀಗೆಂದು ಹೇಳಿದ್ದಾರೆ: "ನಿಮ್ಮನ್ನೆಲ್ಲ ನಾನು ನೋಡುವಂತೆಯೇ ರಾಮಲಾಲನನ್ನು ನೋಡುತ್ತಿದ್ದೆ. ಕೆಲವು ಸಾರಿ ನನ್ನ ಮುಂದೆ ಕೇಕೆಹಾಕಿ ಕುಣಿಯುವನು; ಕೆಲವು ಸಾರಿ ನನ್ನ ಬೆನ್ನಿನ ಮೇಲೆ ಹತ್ತಿ ಕೂದಲು ಹಿಡಿದೆಳೆದು ಪೀಡಿಸುವನು; ಕೆಲವು ಸಾರಿ 'ಎತ್ತಿಕೋ' ಎಂದು ಅಳುವನು. ಎಷ್ಟೋ ಸಾರಿ ನಾನವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಸಂತವಿಟ್ಟಿದ್ದೇನೆ. ಇಲ್ಲಿ ಬಹಳ ಹೊತ್ತು ಇರುತ್ತಿರಲಿಲ್ಲ. ಇದ್ದಕ್ಕಿದ್ದ ಹಾಗೆಯೇ ತೋಟಕ್ಕೆ ಓಡುವನು. ಬಿಸಿಲಿನಲ್ಲಿ ಅಲೆದು, ಹೂವುಗಳನ್ನು ಕೊಯ್ದು, ಕಡೆಗೆ ಗಂಗೆಯ ಘಟ್ಟದಲ್ಲಿ ನೀರಾಟವಾಡುವನು. ನಾನು ಎಷ್ಟೋ ಸಾರಿ ಅವನನ್ನು ಚೆನ್ನಾಗಿ ಗದರಿಸಿ

ಬೈದಿದ್ದೇನೆ;—'ನೋಡುತ್ತಿರು, ನೀನು ಹೀಗೆಲ್ಲಾ ಬಿಸಿಲಿನಲ್ಲಿ ಸುತ್ತಿದರೆ ಮೈ ಮೇಲೆ ಗುಳ್ಳೆ ಬರುತ್ತದೆ! ನೀರಿನಲ್ಲಿ ಮುಳುಗಿ ಆಟವಾಡಬೇಡವೋ, ಶೀತವಾಗಿ ಜ್ವರ ಬರುತ್ತದೆ.' ಎಂದು! ಆದರೆ ರಾಮಲಾಲನು ನನ್ನ ಮಾತು ಕೇಳುತ್ತಲೇ ಇರಲಿಲ್ಲ. ಪ್ರೇಮಮಯ ವಿಶಾಲ ಸುಂದರ ನೇತ್ರದ್ವಯಗಳಿಂದ ನನ್ನನ್ನೇ ನಿಟ್ಟಿಸಿನೋಡಿ, ಬಳ್ಳಿಯ ತುದಿಯ ಹೂವಿನಂತೆ ತಲೆದೂಗಿ ಮುಗುಳುನಗೆ ನಗುವನು; ಇಲ್ಲವೇ ಹಲ್ಲುಕಿರಿದು ನನ್ನನ್ನು ಹಾಸ್ಯಮಾಡುವನು. ಕೆಲವು ಸಾರಿ ನನ್ನ ತಾಳ್ಮೆಯೆಲ್ಲಾ ಮಾಯವಾಗಿ ಸಿಟ್ಟು ರೇಗಿ 'ಇರು, ಇರು, ಕೆಟ್ಟಹುಡುಗ, ನಿನ್ನ ಮೈಯೆಲ್ಲಾ ಹಸುರುಗಟ್ಟುವಂತೆ ಹೊಡೆಯುತ್ತೇನೆ.' ಎಂದು ಹೆದರಿಸುತ್ತಿದ್ದೆ. ಒಂದು ಸಾರಿ ಅವನನ್ನು ರಟ್ಟೆ ಹಿಡಿದು ನೀರಿನಿಂದ ದರದರದರ ಎಳೆದುಕೊಂಡು ಬಂದು 'ನೀರಿಗೆ ಹೋಗಬೇಡ' ಎಂದು ಏನೇನೋ ಉಪಾಯಮಾಡಿ ತಿಂಡಿಕೊಟ್ಟು ಬೋಳೈಸಿ ನನ್ನ ಕೊಟಡಿಯಲ್ಲಿಯೇ ಆಡುತ್ತಿರು.' ಎಂದು ಹೇಳಿದೆ. ಆದರೆ ಕೇಳದೆ ಇರಲು ಕೋಪಬಂದು ಒಂದೇಟು ಕೊಟ್ಟೆ. ಅವನು ಹಸಿಗಣ್ಣಾಗಿ ನಡುಕು ತುಟಿಗಳಿಂದ ನನ್ನನ್ನೇ ಎವೆಯಿಕ್ಕದೆ ದೈನ್ಯದಿಂದ ನೋಡಿದನು. ಅಯ್ಯೋ, ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಂತಾಯಿತು! ಅವನನ್ನು ಬಾಚಿತಬ್ಬಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಮುಖದಲ್ಲಿ ಮುಖವಿಟ್ಟು 'ದಮ್ಮಯ್ಯ! ನನ್ನ ತಂದೆ! ದಮ್ಮಯ್ಯ! ಅಳಬೇಡ! ನನ್ನ ಕಂದಾ, ತಪ್ಪಾಯಿತು! ನನ್ನ ಕೈಗೆ ಬೆಂಕಿ ಹಾಕಲಿ!' ಎಂದು ನಾನಾವಿಧವಾಗಿ ಸಂತಪಟ್ಟೆ. ಇವೆಲ್ಲವೂ ಕಣ್ಣಾರೆ ಕಂಡ ಸಂಗತಿಗಳು!" ಒಂದು ಸಾರಿ ಪರಮಹಂಸರು ಮೀಯಲು ಗಂಗೆಗೆ ಹೋದಾಗ ರಾಮಲಾಲನೂ ಅವರ ಹಿಂದೆ ಬಂದು ನೀರಾಟವಾಡ ತೊಡಗಿದನಂತೆ. ಬೇಡ ಎಂದು ಹೇಳಿದರೆ ಕೇಳಲಿಲ್ಲ. ಅವರಿಗೆ ಸಿಟ್ಟುಬಂದು ಶಿಶುರಾಮನ ಕುತ್ತಿಗೆ ಹಿಡಿದು ನೀರಿನಲ್ಲಿ ಮುಳುಗಿಸಿ "ಆಡು! ಈಗ ಎಷ್ಟು ಬೇಕಾದರೂ ನೀರಾಡು!" ಎಂದರು. ಅವನು ನೀರಿನಲ್ಲಿ ಉಸಿರುಕಟ್ಟಿ ಒದ್ದಾಡಲು ಮೇಲೆತ್ತಿದರಂತೆ. ರಾಮಲಾಲನು ಗೊಳೋ ಎಂದು ಅಳತೊಡಗಿದನು. ಪರಮಹಂಸರು ಸಂತೈಸಿದರು. ಆದರೆ ಅವನು ಅಲ್ಲಿ ಸಿಕ್ಕಲಾರದ ಯಾವುದೋ ತಿಂಡಿ ಕೇಳಲು ಪರಮಹಂಸರು ಕಾಟ ತಪ್ಪಲಿ ಎಂದು ಅವನನ್ನು ತಮ್ಮ ಕೋಣೆಗೆ ಕರೆತಂದು ಅರಳನ್ನು ಕೊಟ್ಟರಂತೆ. ಅದರಲ್ಲಿ ಉಮ್ಮಿ ಇತ್ತು. ಶಿಶುರಾಮನ ಕಟವಾಯಿಯಲ್ಲಿ ರಕ್ತ ಬಂದಿತು! ಪರಮಹಂಸರು ಅದನ್ನು ನೋಡ

ಲಾರದೆ ಅತಿ ದುಃಖದಿಂದ ಅವನನ್ನು ಎತ್ತಿಕೊಂಡು "ತಾಯಿ ಕೌಸಲ್ಯೆ ನಿನಗೆ ಹಾಲು ಬೆಣ್ಣೆ ಕೊಟ್ಟು ಸಲಹಿದಳು. ಪಾಪಿ ನಾನಾದರೋ ಹೊಟ್ಟು ಕೊಟ್ಟೆ!" ಎಂದು ಕಂಬನಿಗರೆದರಂತೆ. ಈ ವಿಷಯಗಳನ್ನು ತಮ್ಮ ಶಿಷ್ಯರಿಗೆ ಹೇಳುತ್ತಾ ಹೇಳುತ್ತಾ ಅವರ ಕಣ್ಣಿನಲ್ಲಿ ನೀರು ಬರುತ್ತಿತ್ತಂತೆ! ರಾಮಲಾಲನು ಪರಮಹಂಸ ರನ್ನು ಬಿಟ್ಟಿರುತ್ತಿರಲಿಲ್ಲ. ಆದ್ದರಿಂದ ಜಟಾಧಾರಿ ದಕ್ಷಿಣೇಶ್ವರದಿಂದ ಹೊರಡು ವಾಗ ಕಂಬನಿ ತುಂಬಿ ರಾಮಲಾಲನ್ನು ಶ್ರೀರಾಮಕೃಷ್ಣರಲ್ಲಿಯೇ ಬಿಟ್ಟು ಬೀಳ್ಕೊಂಡನು.

ಭಯಂಕರವಾದ ತಾಂತ್ರಿಕಸಾಧನೆಯೆಲ್ಲಿ? ಮೃದುಮಧುರ ಕೋಮಲ ವಾದ ಈ ವಾತ್ಸಲ್ಯಭಾವಸಾಧನೆಯೆಲ್ಲಿ? ಆದರೆ ಮಹಾಪುರುಷರು ಸಿಡಿಲಿನಂತೆ ಕಠೋರರು; ಹೂವಿನಂತೆ ಕೋಮಲರು!

ವಾತ್ಸಲ್ಯಭಾವಸಾಧನೆಯಲ್ಲಿ ಸಿದ್ಧಿ ಹೊಂದಿದ ಅನಂತರ ಶ್ರೀರಾಮಕೃಷ್ಣರು ಭಾವಸಾಧನೆಗಳಲ್ಲಿ ಸರ್ವೋಚ್ಚವೆಂದು ಪರಿಗಣಿತವಾದ ಮಧುರಭಾವಸಾಧನೆ ಯನ್ನು ಕೈಕೊಂಡರು. ಮಧುರಭಾವವನ್ನು ಕುರಿತು ಈ ಹಿಂದೆಯೇ ಕೆಲವು ವಿಷಯಗಳನ್ನು ಸೂಚಿಸಿದ್ದೇವೆ. ಇಲ್ಲಿ ಇನ್ನೂ ಒಂದೆರಡು ವಿಷಯಗಳನ್ನು ವಿವರವಾಗಿ ಹೇಳಿದರೆ ಅಪ್ರಕೃತವಾಗಲಾರದು. ಭಕ್ತಿ ಪ್ರಥಮತಃ ಭಯ ದಿಂದ ಪ್ರಾರಂಭವಾಗುತ್ತದೆ. ವಿಶಾಲವಿಶ್ವವನ್ನೂ ವಿಶ್ವರಚನೆಯ ಯಾಂತ್ರಿಕ ಮಹಾಕುಶಲತೆಯನ್ನೂ ವಿಶ್ವಜೀವನದಲ್ಲಿ ತೋರಿಬರುವ ಬಿರುಮಳೆ, ಬಿರುಗಾಳಿ, ಬಿರುಬಿಸಿಲು, ಭೂಕಂಪ, ಪ್ರಲಯ ಪ್ರವಾಹ, ಜ್ವಾಲಾಮುಖಿ, ಸಾಂಕ್ರಾಮಿಕ ರೋಗರುಜನೆಗಳು, ದುಃಖ, ಮೃತ್ಯು ಮೊದಲಾದ ಭಯಂಕರ ವ್ಯಾಪಾರ ಗಳನ್ನೂ ಕಂಡು ಮಾನವನು ಸರ್ವಕರ್ತನಾದ ಜಗದೀಶ್ವರನನ್ನು ಆತನ ಅಪಾರ ಶಕ್ತಿ, ಅಪ್ರತಿಹತ ಸಾಮರ್ಥ್ಯ, ಅನಂತ ಐಶ್ವರ್ಯಗಳಿಗಾಗಿ ಭಯಭಕ್ತಿಯಿಂದ, ಎಂದರೆ, ಭಯದಿಂದ ಪ್ರೇರಿತವಾದ ಭಕ್ತಿಯಿಂದ, ದಾಸ್ಯಭಾವದಿಂದ ಸೇವೆಮಾಡಿ ಸಂತುಷ್ಟಿಗೊಳಿಸಿ ಕೃಪಾಪಾತ್ರನಾಗಿ ಕಷ್ಟಸಂಕಟಗಳಿಂದ ಪಾರಾಗಬೇಕೆಂದು ಪೂಜಿಸುತ್ತಾನೆ. ಆದರೆ ಬರಬರುತ್ತ ಭಯಭಾವವು ಕ್ರಮೇಣ ಪರಿಚಯದಿಂದ ಸಲಿಗೆಯಾಗಿ, ಸ್ನೇಹವಾಗಿ, ಪ್ರೇಮವಾಗಿ, ಸ್ವೈಚಭಕ್ತಿಯಾಗಿ ಪರಿಣಮಿಸುತ್ತದೆ. ಆಗ ಭಕ್ತನ ದೃಷ್ಟಿ ಭಗವಂತನ ಶಕ್ತಿಸಾಮರ್ಥ್ಯ ಐಶ್ವರ್ಯಗಳ ಕಡೆಯಿಂದ

ಅವಮುಖವಾಗಿ ಆತನ ಮಹಾ ಘನ ಗೌರವ ಪ್ರೇಮದ ಕಡೆಗೆ ತಿರುಗುತ್ತದೆ. ಎಂದರೆ ಈಶ್ವರನು ಐಶ್ವರ್ಯದಿಂದ ಈಶ್ವರನಾಗದೆ ಆನಂದದಿಂದ ಈಶ್ವರನಾಗುತ್ತಾನೆ. ಆಗ ಭಕ್ತಿ ಅಹೇತುಕವಾಗಿ, ನಿಃಸ್ವಾರ್ಥವಾಗಿ, ತ್ಯಾಗಪೂರ್ಣವಾಗಿ, ಅತೀಂದ್ರಿಯ ಪ್ರೇಮ ಮಾತ್ರವಾಗಿ ಪರಿಣಮಿಸುತ್ತದೆ. ಇಂತಹ ಅತೀಂದ್ರಿಯ ಪ್ರೇಮಸಿದ್ಧಿಯೇ ಮಧುರಭಾವಸಾಧನೆಯ ಸರ್ವೋಚ್ಚಗಮ್ಯ. ಈ ಮಧುರಭಾವ ಸಾಧನೆಯನ್ನು ಅರ್ವಾಚೀನ ಕಾಲದಲ್ಲಿ ಹೆಚ್ಚು ಪ್ರಶಸ್ತಿಗೆ ತಂದವರು ಶ್ರೀಕೃಷ್ಣ ಚೈತನ್ಯ ಮತ್ತು ಆತನ ಅನುಯಾಯಿಗಳು. ಪ್ರಾಚೀನ ಪುರಾಣಗಳಲ್ಲಿ ಅದರಲ್ಲಿಯೂ ಭಾಗವತದಲ್ಲಿ ಬರುವ ಶ್ರೀಕೃಷ್ಣಗೋಪಿಯರ ಬೃಂದಾವನ ಲೀಲೆಯಲ್ಲಿ ಇದು ಸಮೀಚೀನವಾಗಿ ಉಕ್ತವಾಗಿದೆ. ಮಧುರಭಾವಸಾಧನೆಯನ್ನು 'ಧರ್ಮಪ್ರಪಂಚದ ಸೌಂದರ್ಯೋಪಾಸನೆ' ಎಂದು ಕರೆಯಬಹುದು. ಅದು ಭಾವಜೀವಿಯಾದ ಮಾನವನಿಗೆ ಅತ್ಯಂತ ಪ್ರಿಯವೂ ಹೌದು, ಹಿತವೂ ಹೌದು. ಕಾಮವು ತನ್ನ ಉತ್ತಮಾವಸ್ಥೆಯಲ್ಲಿ ಪ್ರೇಮವಾಗುತ್ತದೆ. ಕಾಮವು ಸರ್ವ ಜೀವ, ಅಷ್ಟೇಕೆ ಸರ್ವ ಸಸ್ಯ ಸಾಧಾರಣವಾದುದು. ಸ್ವಭಾವಗಳಲ್ಲಿ ಕ್ಷುಧೆಯನ್ನು ಬಿಟ್ಟರೆ ಕಾಮವೇ ಅತಿ ಪ್ರಬಲವೂ ಪ್ರಧಾನವೂ ಆದುದು. ಇಂತಹ ಸರ್ವ ಸಾಧಾರಣವೂ ಮಹಾಪ್ರಬಲವೂ ಆಗಿರುವ ಕಾಮಸ್ವಭಾವದ ಆದರ್ಶೀಕರಣವೇ ಮಧುರಭಾವಸಾಧನೆಯ ರಹಸ್ಯ ಮತ್ತು ಲಕ್ಷ್ಯ.

ಮಧುರಭಾವಸಾಧಕರಿಗೆ ಶ್ರೀರಾಧಕೃಷ್ಣರ ಶ್ರೀಪ್ರೇಮವೇ ಮಹಾದರ್ಶ. ಸಾಧಕನು ರಾಧೆಯ ಭಾವವನ್ನು ಆರೋಪಿಸಿಕೊಂಡು ಹಗಲಿರುಳೂ ಶ್ರೀಕೃಷ್ಣನ ಸುಂದರ ದರ್ಶನಕ್ಕಾಗಿ ತೀವ್ರ ವ್ಯಾಕುಲತೆಯಿಂದ ಇರುತ್ತಾನೆ. ಶ್ರೀರಾಮ ಕೃಷ್ಣರೂ ಸ್ತ್ರೀಯಂತೆ ವೇಷಭೂಷಣಗಳನ್ನು ಧರಿಸಿ ತಮಗೆ ಸಹಜವಾದ ಒಮ್ಮನಸ್ಸಿನಿಂದ ಸಾಧನೆ ಮಾಡಿದರು. ಫಲವಾಗಿ ದೈವಿಕ ಪ್ರೇಮಮೂರ್ತಿಯಾದ ಶ್ರೀರಾಧೆ ಪ್ರತ್ಯಕ್ಷಳಾಗಿ ಪರಮಹಂಸರ ದೇಹದಲ್ಲಿ ಐಕ್ಯವಾದಳು! ಅಂದಿನಿಂದ ಶ್ರೀರಾಮಕೃಷ್ಣರು ತಾವೇ ರಾಧೆ ಎಂದು ಸಂಪೂರ್ಣವಾಗಿ ಭಾವಿಸಲು ಸಮರ್ಥರಾದರು. ಭಕ್ತಿಶಾಸ್ತ್ರಗಳು ಹೇಳುವ "ಮಹಾಭಾವ" ಅವರಲ್ಲಿ ಪೂರ್ಣಪ್ರಕಾಶವಾಯಿತು. ಕೆಲವು ದಿನಗಳಲ್ಲಿ ಅನಂತ ಪ್ರೇಮಿಕ ಪುರುಷೋತ್ತಮನಾದ ಶ್ರೀಕೃಷ್ಣನು ಪರಮಹಂಸರಿಗೆ ದಿವ್ಯದರ್ಶನವಿತ್ತು, ಅವರ ದೇಹದಲ್ಲಿ

ಲೀನವಾದನು. ಅಂದಿನಿಂದ ಪರಮಹಂಸರು ತಮ್ಮಲ್ಲಿಯೂ ಇತರರಲ್ಲಿಯೂ ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಆ ಭಗವಂತನ ಮಂಗಳ ಮೂರ್ತಿಯನ್ನೇ ಕಾಣ ತೊಡಗಿದರು. ಇದೇ ಕಾಲದಲ್ಲಿ ವಿಷ್ಣುದೇವಾಲಯವೊಂದರಲ್ಲಿ ಭಾಗವತ ಪುರಾಣ ಪಠನವಾಗುತ್ತಿದ್ದಾಗ ಶ್ರೀರಾಮಕೃಷ್ಣರಿಗೆ ಮತ್ತೊಂದು ದರ್ಶನ ವಾಯಿತು. ಪ್ರತ್ಯಕ್ಷನಾದ ಶ್ರೀಕೃಷ್ಣನ ಪಾದದಿಂದ ಉದ್ಭವಿಸಿದ ಜ್ಯೋತಿ ಪ್ರವಾಹವೊಂದು ಭಕ್ತನನ್ನೂ ಭಾಗವತವನ್ನೂ ಸುತ್ತಿಕೊಂಡದ್ದು ಅವರಿಗೆ ತೋರಿತು. ತರುವಾಯ ಶ್ರೀರಾಮಕೃಷ್ಣರು "ಭಗವಾನ್, ಭಕ್ತ, ಭಾಗವತ ಇವೆಲ್ಲ ಬೇರೆ ಬೇರೆಯಾಗಿ ಕಂಡರೂ ತತ್ತ್ವತಃ ಒಂದೇ." ಎಂದು ಹೇಳುತ್ತಿದ್ದರು.

ಇದುವರೆಗೆ ಶ್ರೀರಾಮಕೃಷ್ಣರ ಸಾಧನೆಯ ಚರಿತ್ರೆಯನ್ನು ಓದಿದ ವಾಚಕನು ಅದರ ವರ್ಣಪೂರ್ಣತೆಯನ್ನು ಕಂಡು ವಿಸ್ಮಿತನಾಗದಿರನು. ಭಾವಸಾಧನೆಯಲ್ಲಿ ಅವರಿಗೆ ದೊರೆಕೊಂಡ ವಿವಿಧ ವಿಚಿತ್ರವಾದ ಅದ್ಭುತ ದರ್ಶನಗಳೆಲ್ಲವೂ ಪವಿತ್ರ ವಾದುವು ; ಗೌರವಾರ್ಹವಾದುವು ; ಪೂಜ್ಯವಾದುವು. ಭಕ್ತಿಯ ಕಣ್ಣಿಗೆ ಅವು ಗಳಲ್ಲಿ ಒಂದೊಂದೂ ಮಹಾಮಹಿಮವಾಗಿದೆ. ಧರ್ಮಜೀವನದಲ್ಲಿ ಅವುಗಳಿಂದ ಉಪಯೋಗವೂ ಆಗುವುದರಲ್ಲಿ ಸಂದೇಹವಿಲ್ಲ. ಆದರೆ ವೇದಾಂತಿಯ ಕ್ಷುರಸ್ಯ ಧಾರಾಸದೃಶವಾದ ಜ್ಞಾನದೃಷ್ಟಿ ಅವುಗಳನ್ನೆಲ್ಲ ನಿರ್ದಾಕ್ಷಿಣ್ಯವಾಗಿ ವಿಮ ರ್ಶಿಸದೆ ಬಿಡುವುದಿಲ್ಲ. ಆ ಕೆಲಸವನ್ನು ಶ್ರೀರಾಮಕೃಷ್ಣರೇ ಮಾಡಬೇಕಾಯಿತು. ಹಿಂಜರಿಯದೆ ಅದನ್ನು ಮಾಡಿಯೂ ಮಾಡಿದರು. ತಾವು ಬಹುಕಾಲದ ಶ್ರಮ ದಿಂದ, ಯಾತನೆಯಿಂದ, ಪ್ರೀತಿಯಿಂದ ಕಟ್ಟಿದ ಇಂದ್ರಧನು ವಿರಚಿತವಾದ ಸುಂದರ ಸುವರ್ಣಸ್ವಪ್ನ ಮಂದಿರಗಳನ್ನು ತಾವೇ ನಿಷ್ಕರುಣೆಯಿಂದ ಚೂರ್ಣಚೂರ್ಣ ಮಾಡಬೇಕಾಯಿತು. ಸತ್ಯ ಎಂದರೆ ಕೊರಳಿನಲ್ಲಿ ಧರಿಸುವ ಹೂಮಾಲೆ ಮಾತ್ರ ವಲ್ಲ, ಎದೆಗೆ ಇರಿದುಕೊಳ್ಳಬೇಕಾಗಿರುವ ಹೊನ್ನಿನ ಕತ್ತಿಯೂ ಹೌದು. ಭಕ್ತಿ ಕೋಮಲಸಾಧನೆಯಾದರೆ, ಜ್ಞಾನ ಕಠೋರಸಾಹಸ. ಎದೆಗೆ ಇರಿದುಕೊಂಡ ಮೇಲೆ ಹೊನ್ನಿನ ಕತ್ತಿಯೇ ಹೂವಿನ ಹಾರವಾಗಬಹುದು. ಹಾಗಾಗುವುದೂ ಹೌದೆಂದೂ ಪರಮಹಂಸರ ಜೀವನದಿಂದ ಗೊತ್ತಾಗುತ್ತದೆ. ಆದರೆ ಮೊದಲು ಖಡ್ಗವನ್ನು ಎದೆಗಿರಿದುಕೊಳ್ಳುವ ಧೈರ್ಯದಾರ್ಢ್ಯಗಳು ಬೇಕು. ಅದಕ್ಕೆ ಸ್ವಾರ್ಥ ತ್ಯಾಗವೊಂದಿದ್ದರೆ ಸಾಲದು ; 'ಸ್ವ'ತ್ಯಾಗವೂ ಆವಶ್ಯಕ. ಇಂದ್ರಿಯಗಳಿಗೆ ಕ್ಷಣ

ಕ್ಷಣವೂ ಗೋಚರವಾಗಿ ಅಪ್ರತಿಹತವಾದ ಪ್ರತಿಭಟನೆಯಿಂದ ತಮ್ಮ ಅಸ್ತಿತ್ವ ವನ್ನು ಸಾರಿಸಾರಿ ಚೀರಿಹೇಳುವ ಗ್ರಹಸೂರ್ಯ ನೀಹಾರಿಕಾಖಚಿತವಾದ ಕಾಲ-ದೇಶ ಪ್ರವಾಹದ ಈ ಚತುರ್ಮುಖಿ ಮಹಾವಿಶ್ವವನ್ನೇ ಬುದ್ಧಿಯ ತೀಕ್ಷ್ಣತೆ ಯಿಂದ ಭೇದಿಸಿ ಅನಿತ್ಯ, ಅಸತ್ಯ, ಮಾಯೆ, ಮಿಥ್ಯೆ ಎಂದು ನಿರ್ದಾಕ್ಷಿಣ್ಯ ವಾಗಿ ಗುಡಿಸಿ ಬಿಸುಡುವ ಅದ್ವೈತವೇದಾಂತಿ ಸಾಧಕನ ಭಾವಜನ್ಯವಾದ ದೇವದೇವತೆಗಳ ದರ್ಶನಗಳನ್ನು, ಅವುಗಳೆಷ್ಟೇ ಪೂಜಾರ್ಹವಾದರೂ, ಶಸ್ತ್ರ ಪರೀಕ್ಷೆಮಾಡದೆ ಬಿಡುವುದಿಲ್ಲ; ಗುಳ್ಳೆಗಳನ್ನು ಚುಚ್ಚಿ ಒಡೆಯದಿರುವುದಿಲ್ಲ! ವೇದಾಂತಿಯ ದೃಷ್ಟಿಗೆ ಜಗತ್ತು ಎಷ್ಟರ ಮಟ್ಟಿಗೇ ಮಾಯೆಯೋ ಸಾಧಕನ ಭಕ್ತಿಯಿಂದ ಮೂಡುವ ಭಾವಮಯ ದರ್ಶನಗಳೂ ಅಷ್ಟರ ಮಟ್ಟಿಗೇ ಮಾಯೆ. ಆದ್ದರಿಂದ ಮಾಯೆಯನ್ನು ನೀಳಿ ಬ್ರಹ್ಮಸಾಕ್ಷಾತ್ಕಾರ ಮಾಡಲೆಳಸುವ ಸಾಧ ಕನು, ಇನ್ನೊಂದು ಸೂಕ್ಷ್ಮತರದ ಮಾಯೆಯಿಂದ ಮೂಡುವ ಅದ್ಭುತದರ್ಶನ ಗಳನ್ನೂ ನೀಳಿ ಮುಂಬರಿಯಬೇಕು. ಮೋಹವಶನಾಗಿ ಮುಂಬರಿಯಲಂಜಿದರೆ ಅವಿದ್ಯೆಯನ್ನು ಸಂಪೂರ್ಣವಾಗಿ ದಾಟಿದಂತಾಗುವುದಿಲ್ಲ. ಅಂತೆಯೇ ಪರಮ ಹಂಸರೂ ತಮ್ಮ ರಾಧೆ, ರಾಮ, ಕೃಷ್ಣ, ಕಾಳಿ, ಜಗನ್ಮಾತೆ ಎಲ್ಲರನ್ನೂ ಹಿಂದು ಮುಂದು ನೋಡದೆ, ಅಳುಕದೆ, ಸಂದೇಹಪಡದೆ, ಅದ್ವೈತದ ವಜ್ರಪ್ರಹಾರದಿಂದ ಚೂರ್ಣೀಕೃತರನ್ನಾಗಿ ಮಾಡಿ ನಿರ್ವಿಕಲ್ಪ ಸಮಾಧಿಯಲ್ಲಿ ಏಕಮೇವಾದ್ವಿತೀಯ ವಾದ ಬ್ರಹ್ಮವಾಗಬೇಕಾಯಿತು. ಆ ಭವ್ಯ ಭಯಂಕರ ಗದಾಯುದ್ಧವು ದರ್ಶನೀಯವಾದುದು. ದೇವಶಿಶು ಮೊಲೆಯೂಡಿದ ಪೂತನಿಯನ್ನು ಜೀವಸಹಿತ ಹೀರಿ ಜಯಶೀಲವಾದ ಕಥೆ ರೋಮಾಂಚವಾಗುವಂತಿದೆ.

ಚಿಂತೆಗೆ ಅತೀತವಾಗಿ, ದ್ವಂದ್ವ ಸಾಮ್ರಾಜ್ಯದ ಎಲ್ಲೆ ಮೀರಿ, ವಿಕೃತಿ ಪ್ರಕೃತಿಗಳಿಂದ ಕೂಡಿರುವ ಮಾಯೆಯನ್ನು ಹಿಂದುಳಿದು, ಸೃಷ್ಟಿ ಸ್ಥಿತಿ ಲಯ ಜಾಲವನ್ನು ಉತ್ತರಿಸಿ, ಸುಖದುಃಖ ಸದಸತ್ತು ಪಾಪಪುಣ್ಯ ಮೊದಲಾದ ಭಾವಗಳನ್ನು ಕೊಚ್ಚಿ ಕೆಡಹಿ, ನಿತ್ಯ ತತ್ತ್ವವಾದ ಸಚ್ಚಿದಾನಂದ ಬ್ರಹ್ಮವು ನಿರ್ವಿ ಕಲ್ಪಸಮಾಧಿಯಲ್ಲಿ ಸ್ವಯಂಜ್ಯೋತಿಯಿಂದ ಪ್ರಜ್ವಲಿಸುತ್ತದೆ. ಜನನ ಜೀವನ ಮರಣಗಳು ಆ ಮಹಾಸತ್ತಿನಲ್ಲಿ ಮುಳುಗುತ್ತವೆ; ಜ್ಞಾನ ಜ್ಞೇಯ ಜ್ಞಾತೃ ಗಳು ಆ ಮಹಾಚಿತ್ತಿನಲ್ಲಿ ಲೀನವಾಗುತ್ತವೆ; ಪ್ರಿಯ ಪ್ರೇಮ ಪ್ರಿಯೆ ಎಲ್ಲವೂ

ಆ ಮಹಾ ಆನಂದದಲ್ಲಿ ಐಕ್ಯವಾಗುತ್ತವೆ; ಕರ್ಮ ಧರ್ಮ ಶ್ರದ್ಧೆ ಸಂಶಯ ಈ ಚಿತ್ತವೃತ್ತಿಗಳೆಲ್ಲ ಅಲ್ಲಿ ಲಯವಾಗುತ್ತವೆ. ಆ ಅನಿರ್ವಚನೀಯ ನಿರ್ವಿಕಲ್ಪ ಸಮಾಧಿಯಲ್ಲಿ ಶರೀರದ ವ್ಯಾಪಾರಗಳು ನಿಲ್ಲುತ್ತವೆ; ಮನಸ್ಸಿನ ತರಂಗಗಳು ಸ್ತಬ್ಧವಾಗುತ್ತವೆ; ಅಹಂಕಾರವು ಬ್ರಹ್ಮಾನಂದದಲ್ಲಿ ಲಯಹೊಂದುತ್ತದೆ. ಕಾಲದೇಶನಿಮಿತ್ತಗಳು ಅನಂತಶೂನ್ಯದಲ್ಲಿ ಅಡಗುತ್ತವೆ. ಆ ಅನಿರ್ವಚನೀಯದ ಸ್ತಬ್ಧತೆಯ ನಿಃಶಬ್ದತೆಯ ಮವಿಯನ್ನು ಬಲ್ಲವನೆ ಬಲ್ಲ!

ಕ್ರಿ. ಶ. ೧೮೬೪ನೆಯ ಸಂವತ್ಸರದ ಕೊನೆಯ ಭಾಗದಲ್ಲಿ, ಶ್ರೀರಾಮಕೃಷ್ಣರು ಭಾವಸಾಧನೆಗಳ ಪರಮಾವಧಿಯಾದ ಸಗುಣಸಾಕಾರ ಈಶ್ವರ ಸಾಕ್ಷಾತ್ಕಾರ ಮಾಡಿದ ಕಾಲದಲ್ಲಿ, ನಿರ್ಗುಣ ನಿರಾಕಾರ ಬ್ರಹ್ಮಸಾಕ್ಷಾತ್ಕಾರದ ಮಹಾ ಸಂದೇಶವಾಹಕನೊಬ್ಬನು ತನಗೆ ಬಂದೊದಗಲಿರುವ ಮಹತ್ಕಾರ್ಯದ ಸೂಚನೆಯನ್ನೂ ತಿಳಿಯದೆಯೆ ದಕ್ಷಿಣೇಶ್ವರಕ್ಕೆ ಬಂದನು. ಆತನೇ ನಗ್ನಸಂನ್ಯಾಸಿ ತೋತಾಪುರಿ. ಅಸಾಧಾರಣ ವೇದಾಂತಿಯಾದ ಆ ಧೀಮಸನ್ನ್ಯಾಸಿ ನರ್ಮದಾನದಿಯ ತೀರದಲ್ಲಿ ನಾಲ್ವತ್ತು ವರ್ಷಗಳ ಕಠೋರ ತಪಸ್ಸಿನಿಂದ ಮಾನವ ಸಾಧನೆಯ ಆತ್ಯಂತಿಕ ಆದರ್ಶವಾದ ನಿರ್ಗುಣ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡು ಮುಕ್ತಾತ್ಮನಾಗಿ ಜಗನ್ಮಹಾಸ್ವಪ್ನವನ್ನು ಪರಮ ಔದಾಸೀನ್ಯದಿಂದ ಕಾಣುತ್ತಿದ್ದನು. ಸಿಂಹ, ಗಜ ಮೊದಲಾದ ವನ್ಯಜಂತುಗಳನ್ನೂ ನಡುಗಿಸುವ, ಬೆದರಿಸುವ, ಕೊರಗಿಸುವ ಚಂಡಪ್ರಕೃತಿಯ ಪ್ರಚಂಡ ಆಘಾತಗಳನ್ನೂ ಈ ಶಿಲಾತಪಸ್ವಿ ದರಹಸಿತನಾಗಿ ಧಿಕ್ಕಾರಮಾಡುತ್ತಿದ್ದನು. ಆತನು ಮಳೆ ಬಿಸಿಲು ಚಳಿಗಳಲ್ಲಿಯೂ ಯಾವ ಗೃಹವನ್ನೂ ಪ್ರವೇಶಿಸುತ್ತಿರಲಿಲ್ಲ. ಆತನಿಗೆ 'ಸುರ ಮಂದಿರ ತರುಮೂಲ ನಿವಾಸ'ವಾಗಿತ್ತು. ಆತನು ವಸ್ತ್ರಲೇಶವನ್ನೂ ಧರಿಸದೆ ನಗ್ನನಾಗಿರುತ್ತಿದ್ದನು; ಆತನಿಗೆ ಆಕಾಶವೇ ಅಂಬರವಾಗಿತ್ತು. ದುಃಖದಲ್ಲಿ ಅನುದ್ವಿಗ್ನಮನನಾಗಿಯೂ ಸುಖದಲ್ಲಿ ವಿಗತಸ್ಪೃಹನಾಗಿಯೂ ಆ ಜೀವನ್ಮುಕ್ತನು ಮೂರು ದಿವಸ ನಿಂತಲ್ಲಿ ನಿಲ್ಲದೆ ಪರಿವ್ರಾಜಕನಾಗಿ ಜಗದ ಹಂಗುದೊರೆದು, ಬಂಧನಮುಕ್ತ ಪಂಚಾನನನಂತೆ ಊರಿಂದೂರಿಗೆ ಸಂಚರಿಸುತ್ತಿದ್ದನು. ಇಂತಹ ಸಿಡಿಲಾಳು ಆ ತೋತಾಪುರಿ.

ತೋತಾಪುರಿ ನೌಕೆಯಿಂದಿಳಿದು ದಕ್ಷಿಣೇಶ್ವರದ ಸ್ನಾನಘಟ್ಟದ ಸೋಪಾ

ನಾವಳಿಯನ್ನು ಏರುತ್ತ, ಅಲ್ಲಿಯೇ ಒಂದು ಮೆಟ್ಟಲಿನ ಮೇಲೆ ಇಪ್ಪತ್ತೆಂಟು ವರ್ಷದ ದೇವಶಿಶುವಿನಂತೆ ಭಾವಲೀನವಾಗಿ ಕುಳಿತ ಶ್ರೀರಾಮಕೃಷ್ಣರನ್ನು ಕಂಡು ಹೆಜ್ಜೆ ಕೀಳಲಾರದೆ ನಿಂತುಬಿಟ್ಟನು. ತರುಣ ಪೂಜಾರಿಯಲ್ಲಿದ್ದ ಯಾವುದೋ ಒಂದು ಅಲೌಕಿಕತೆ ತೋತಾಪುರಿಯಂತಹ ಸಾಕಾರಶೂನ್ಯತೆಯನ್ನು ಕೂಡ ಬೆರಗುಗೊಳಿಸಿಬಿಟ್ಟಿತು. ಈ ಅನಿರ್ವಚನೀಯ ಆಕರ್ಷಣೆಯೆ ಆತನನ್ನು, ತನ್ನ ಪೂರ್ಣ್ಕೆಗೆ ವಿರುದ್ಧವಾಗಿ, ಬಹುಕಾಲ ದಕ್ಷಿಣೇಶ್ವರದಲ್ಲಿ ಹಿಡಿದಿಟ್ಟಿತು.

ತೋತಾಪುರಿ ಮೆಲ್ಲನೆ ಮೊಳಗಿದನು: "ಬಾಬಾ, ನೀನು ಸಾಧನೆಯ ಮಾರ್ಗದಲ್ಲಿ ಬಹುದೂರ ಹೋಗಿರುವ ಉತ್ತಮ ಅಧಿಕಾರಿಯಂತೆ ತೋರುತ್ತೀಯೆ. ನೀನು ಒಪ್ಪಿದರೆ ಮುಂದಿನ ಹಾದಿ ತೋರುತ್ತೇನೆ. ವೇದಾಂತ ಸಾಧನೆ ಮಾಡಿಸುತ್ತೇನೆ."

ಶ್ರೀರಾಮಕೃಷ್ಣರು ಕಣ್ಣರಳಿಸಿ ನೋಡಿದರು. ಎದುರುಗಡೆ ಗಂಗಾ ಸಲಿಲ ಪಟಕ್ಕೆದುರಾಗಿ ನಿಂತಿದೆ ಸಿಂಹಾಕೃತಿಯ ಮಹಾರೂಕ್ಷ ಶಿಲಾಶೈಲದಂತೆ ಭೀಮ ಸಂನ್ಯಾಸಿಯ ನಗ್ನ ಭಯಂಕರ ಘನಮೂರ್ತಿ! ಸಿಡಿಲ ದನಿಗೆ ಅಲರು ಮರುದನಿಗೈದಿತು: "ಅದೊಂದೂ ನನಗೆ ತಿಳಿಯದು. ಎಲ್ಲಾ ನನ್ನ ತಾಯಿಯ ಒಪ್ಪಿಗೆಯ ಮೇಲಿದೆ. ಆಕೆ ಸಮ್ಮತಿಸಿದರೆ ನಾನೂ ಸಮ್ಮತಿಸಿದಂತೆ."

"ಹಾಗಾದರೆ, ಹೋಗಿ ತಾಯಿಯನ್ನು ಕೇಳಿಕೊಂಡು ಬಾ. ನಾನಿಲ್ಲಿ ಹೆಚ್ಚುಕಾಲ ಇರುವುದಿಲ್ಲ."

ಶ್ರೀರಾಮಕೃಷ್ಣರು ಕಾಳಿಯ ಗುಡಿಗೆ ಹೋಗಿಬಂದು ತಾಯಿ ಒಪ್ಪಿದಳೆಂದು ತಿಳಿಸಿದರು. ಪರಮಹಂಸರ ಮುಗ್ಧಸರಳತೆಯನ್ನು ನೋಡಿ ತೋತಾಪುರಿಯ ಪರ್ವತ ಗಾಂಭೀರ್ಯವೂ ಮುಗುಳು ನಗೆದೋರಿತು. ಮಹೋಗ್ರ ವೇದಾಂತಿಯಾದ ಆತನಿಗೆ ಜಗನ್ಮಾತೆ ಇತ್ಯಾದಿ ದೇವತೆಗಳು ಮಿಥ್ಯಾಮೂರ್ತಿಗಳಾಗಿದ್ದುವು. ಬ್ರಹ್ಮಸಾಕ್ಷಾತ್ಕಾರಮಾಡುವ ಸಾಧಕನಿಗೆ ಪೂಜೆ, ಪ್ರಾರ್ಥನೆ ಮೊದಲಾದ ಮೂರ್ಖತೆಯ ಚಿಹ್ನೆಗಳು ಹೇಯವೆಂದು ಆತನ ಭಾವನೆಯಾಗಿತ್ತು. ಶ್ರೀರಾಮಕೃಷ್ಣರು ಯಾವುದನ್ನು ಶಕ್ತಿ, ಮಾಯೆ, ಜಗನ್ಮಾತೆ ಎಂದು ಆರಾಧಿಸುತ್ತಿದ್ದರೋ ನಿರ್ಗುಣಬ್ರಹ್ಮದ ಆ ಸಗುಣಾಭಾಸವು ತೋತಾಪುರಿಯ ದೃಷ್ಟಿಗೆ ಬರಿಯ ಮಿಥ್ಯೆಯಾಗಿತ್ತು. ಮಿಥ್ಯೆಯಿಂದ ಪಾರಾಗಲೆಳಸುವಾತನು ಮಿಥ್ಯೆಯನ್ನು

ಪೂಜಿಸುವುದರಿಂದ ಪ್ರಯೋಜನವೇನು? ತನ್ನ ಅವಿದ್ಯೆಯಿಂದಲೇ ಬಂಧಿತನಾಗಿ
ರುವ ಮನುಷ್ಯನು ಸ್ವಪ್ರಯತ್ನದಿಂದಲೇ ಪಾರಾಗಬಲ್ಲನೆಂಬುದು ಆತನ ಭಾವನೆ
ಯಾಗಿತ್ತು. ಆದ್ದರಿಂದ ಪರಮಹಂಸರ ನುಡಿಗೆ ಮುಗುಳುನಗೆ ತೋರಿದರೂ ಬೇರೆ
ಯಾವುದನ್ನೂ ಹೇಳದೆ, ಶಿಷ್ಯನು ತನ್ನ ಗುರುತ್ವದಲ್ಲಿ ಮಹಾ ಮೌಢ್ಯವನ್ನು
ಗುಡಿಸಿಬಿಸುಡುವನೆಂದು ಬಗೆದು ಸುಮ್ಮನಾದನು.

ವೇದಾಂತಸಾಧನೆಯಲ್ಲಿ ದೀಕ್ಷಿತರಾಗುವ ಮೊದಲು ಶ್ರೀರಾಮಕೃಷ್ಣರು
ಪದ್ಧತಿಯಂತೆ ಪೂರ್ವಾಶ್ರಮದ ಚಿಹ್ನೆಗಳಾದ ಜುಟ್ಟುಜನಿವಾರಗಳನ್ನು ಪರಿ
ತ್ಯಜಿಸಿ ಶಾಸ್ತ್ರೀಯವಾಗಿ ಸಂನ್ಯಾಸಗ್ರಹಣಮಾಡಬೇಕಾಯಿತು. ಪರಮಹಂಸರು
ಮೊದಮೊದಲು ಸ್ವಲ್ಪ ಹಿಂದೆ ಮುಂದೆ ನೋಡಿದರು. ಕಡೆಗೆ ಗುಟ್ಟಾಗಿ ಸಂನ್ಯಾಸ
ಕೊಡುವುದಾದರೆ ಆಗಬಹುದು ಎಂದರು. ಏಕೆಂದರೆ, ಅವರ ತಾಯಿ ಒಂದು
ವರ್ಷದ ಹಿಂದೆ ಕಾಮಾರಪುಕುರವನ್ನು ಬಿಟ್ಟು ಬಂದು ಪವಿತ್ರಸ್ಥಾನವಾದ ದಕ್ಷಿ
ಣೇಶ್ವರದಲ್ಲಿ ವಾಸಿಸುತ್ತಿದ್ದರು. ಮುದುಕಿಯಾದ ಮಾತೆಯ ಮನಸ್ಸಿಗೆ ನೋವಾ
ಗುವಂತೆ ಮಾಡುವುದು ಅವರಿಗೆ ಸರಿಬೀಳಲಿಲ್ಲ. ಅವರ ಸಂಕಟವನ್ನು ತಿಳಿದು
ಕೊಂಡು ತೋತಾಪುರಿಯೂ ಗುಟ್ಟಾಗಿ ಸಂನ್ಯಾಸಕೊಡಲು ಸಮ್ಮತಿಸಿದನು.

ನಿಯಮಿತ ಶುಭದಿನ ಸಾರಿಬಂದಿತು. ಶ್ರೀರಾಮಕೃಷ್ಣರು ಗುರುವಿನ ಹೇಳಿಕೆ
ಯಂತೆ ಪಿತೃಗಳ ಶ್ರಾದ್ಧವನ್ನೂ ತಮ್ಮ ಸ್ವಂತ ಶ್ರಾದ್ಧವನ್ನೂ ಮಾಡಿದರು.
ಏಕೆಂದರೆ, ಸಂನ್ಯಾಸಿ ಲೋಕದ ಭಾಗಕ್ಕೆ ಮೃತನಾದಂತೆಯೇ. ಸಂನ್ಯಾಸಿ
ಯಾದವನು ಶ್ರಾದ್ಧ ಮೊದಲಾದ ಕಾಮ್ಯಕ್ರಿಯೆಗಳಲ್ಲಿ ಎಂದೆಂದಿಗೂ ಭಾಗಿ
ಯಾಗಲಾರನು. ಅದಾದ ತರುವಾಯ ಸಂನ್ಯಾಸ ದೀಕ್ಷಾಕ್ರಿಯೆಗೆ ಬೇಕಾದ
ಸಾಮಗ್ರಿಗಳನ್ನು ಒಟ್ಟುಮಾಡಿ, ಉಪವಾಸವ್ರತವನ್ನು ಕೈಕೊಂಡು, ಪಂಚವಟಿ
ಯಲ್ಲಿದ್ದ ತಮ್ಮ ಧ್ಯಾನಶಾಲೆಯಲ್ಲಿ ದೀಕ್ಷಾಮುಹೂರ್ತವನ್ನೇ ಆನಂದದಿಂದ
ಎದುರುನೋಡುತ್ತಿದ್ದರು. ರಾತ್ರಿಯಲ್ಲಿ ಮುಕ್ಕಾಲುಪಾಲು ಕಳೆದುಹೋಗಿತ್ತು.
ಜಗತ್ತು ಪಾವನಮೌನದಲ್ಲಿ ಮುಳುಗಿ ಸಮಾಧಿಯಲ್ಲಿತ್ತು. ಶುಭಮುಹೂರ್ತದಲ್ಲಿ
ಗುರು ಪರ್ಣಶಾಲೆಗೆ ಬಂದನು. ಗುರುಶಿಷ್ಯರಿಬ್ಬರೂ ಹೋಮಾಗ್ನಿಯ ಮುಂದೆ
ಕುಳಿತರು. ತೋತಾಪುರಿ ಪವಿತ್ರಮಂತ್ರಗಳನ್ನು ಉಚ್ಚರಿಸಿದಂತೆ ಶ್ರೀರಾಮ
ಕೃಷ್ಣರೂ ಉಚ್ಚರಿಸಿ ಹೋಮವಸ್ತುಗಳನ್ನು ಅಗ್ನಿಗೆ ನಿವೇದಿಸಿದರು. ಐಹಿಕ

ಆಮುಷ್ಮಿಕ ಭೋಗಾಭಿಲಾಷೆಗಳನ್ನೂ ತ್ಯಜಿಸಿದರು. ಕಡೆಗೆ ಜುಟ್ಟುಜನಿವಾರ ಗಳನ್ನು ಅಗ್ನಿಗೆ ಸಮರ್ಪಿಸಿ ಗುರುವಿನಿಂದ ಕೌಪೀನ ಕಾಷಿಗಳನ್ನು ಸ್ವೀಕರಿಸಿ ಸಂನ್ಯಾಸಿಯಾದರು. ಅದನ್ನು ನೋಡಿ ಜಗತ್ತು ಆನಂದದಿಂದ ಮೂಕವಾಗಿತ್ತು.

ಮುಂಬೆಳಕು ಮೂಡಿತು; ತಂಬೆಲರು ತೀಡಿತು; ಪ್ರಭಾತದ ಮೌನಸಮು ದ್ರವು ಲಕ್ಷಲಕ್ಷ ಪಕ್ಷಿಕೂಜನ ತರಂಗತಾಡಿತವಾಯಿತು. ಶ್ರೀರಾಮಕೃಷ್ಣರು ಗುರುವಿಗೆ ಸಾಷ್ಟಾಂಗಪ್ರಣಾಮಮಾಡಿ ಉಪದೇಶ ಪಡೆಯಲು ಪದ್ಮಾಸನದಲ್ಲಿ ಕುಳಿತರು. ತೋತಾಪುರಿ ಅದ್ವೈತ ವೇದಾಂತದ ಮಹಾ ನಿಗೂಢ ತತ್ತ್ವ ಗಳನ್ನು ಸಾರಾಂಶವಾಗಿ ಉಪದೇಶಿಸತೊಡಗಿದನು: “ಏಕಮೇವಾದ್ವಿತೀ ಯವೂ ನಿತ್ಯಶುದ್ಧಬುದ್ಧಮುಕ್ತವೂ ಕಾಲದೇಶ ನಿಮಿತ್ತಾತೀತವೂ ಆದ ಬ್ರಹ್ಮ ವೊಂದೇ ಏಕಮಾತ್ರ ಸತ್ಯ. ಅಘಟನಘಟನಕಾರಿಯಾದ ಮಾಯೆಯ ಅನಿರ್ವಚ ನೀಯ ನಿಮಿತ್ತದಿಂದ ನಾಮರೂಪಭೇದಗಳನ್ನು ಧರಿಸಿರುವಂತೆ ತೋರಿದರೂ ಬ್ರಹ್ಮವು ತತ್ತ್ವತಃ ಏಕಾಖಂಡವಾದುದು. ಏಕೆಂದರೆ, ಸಾಧಕನು ನಿರ್ವಿಕಲ್ಪ ಸಮಾಧಿಯಲ್ಲಿ ಲಯಹೊಂದಿದಾಗ ಮಾಯಾಜನ್ಯವಾದ ಕಾಲದೇಶ ನಿಮಿತ್ತಾದಿ ಗಳ ಛಾಯೆಯೂ ಕೂಡ ಅನುಭವಕ್ಕೆ ಬರುವುದಿಲ್ಲ. ಮಾಯಾಪ್ರಪಂಚದಲ್ಲಿ ಇರುವುದೆಲ್ಲವೂ ಅಸತ್ಯ; ಅದನ್ನು ತ್ಯಜಿಸಿಬಿಡು. ಜ್ಞಾನವೆಂಬ ವಜ್ರಗದೆಯಿಂದ ಮಾಯೆಯ ಸೆರೆಮನೆಯ ನಾಮರೂಪಗಳೆಂಬ ಭಿತ್ತಿಗಳನ್ನು ಕುಟ್ಟಿ ಒಡೆದು ಪುಡಿ ಪುಡಿಗೈದು ಸಿಂಹದಂತೆ ಹೊರಗೆ ನುಗ್ಗಿಬಾ. ಆತ್ಮದುರ್ಗವನ್ನು ಪ್ರವೇಶಿಸಿ ಸಮಾಧಿಯಲ್ಲಿ ಸ್ಥಿತಪ್ರಜ್ಞನಾಗು. ಆಗ ನಿನಗೆ ಗೊತ್ತಾಗುತ್ತದೆ—ನಾಮರೂಪ ಜಗತ್ತು ಶೂನ್ಯವಾಗುತ್ತದೆ; ಕ್ಷುದ್ರ ಅಹಂಕಾರವು ಮಹಾ ಬ್ರಹ್ಮಚೈತನ್ಯದಲ್ಲಿ ವಿಲೀನವಾಗುತ್ತದೆ. ಸಚ್ಚಿದಾನಂದವಾದ ಕೇವಲ ಬ್ರಹ್ಮದಲ್ಲಿ ನೀನು ಅದ್ವಯನಾ ಗುವೆ. ತತ್ತ್ವಮಸಿ! ತತ್ತ್ವಮಸಿ!! ತತ್ತ್ವಮಸಿ!!!”

ಮುಂದೆ ನಡೆದುದನ್ನು ಪರಮಹಂಸರೇ ಹೇಳುತ್ತಾರೆ:

“ನಗ್ನನು ವೇದಾಂತವನ್ನು ಉಪದೇಶಮಾಡಿದ ಮೇಲೆ, ಮನಸ್ಸನ್ನು ವಿಷಯಗಳಿಂದ ಪ್ರತ್ಯಾಹಾರಮಾಡಿ ನಿರ್ಗುಣನಿರಾಕಾರ ಅವ್ಯಕ್ತಬ್ರಹ್ಮದಲ್ಲಿ ಧಾರಣೆಮಾಡುವಂತೆ ಹೇಳಿದನು. ಆದರೆ ನಾನು ಎಷ್ಟು ಪ್ರಯತ್ನಮಾಡಿದರೂ ನಾಮರೂಪಗಳ ಎಲ್ಲೆಯನ್ನು ದಾಟಿ ನಿರ್ವಿಕಲ್ಪದಲ್ಲಿ ನಿಲ್ಲಲಾರದೆ ಹೋದೆ.

ಇತರ ಎಲ್ಲ ವಿಷಯಗಳಿಂದಲೂ ಪಾರಾಗಲು ಸುಲಭಸಾಧ್ಯವಾಯಿತು ; ಆದರೆ ಸತ್ತ್ವಜ್ಞಾನಸಾರ ಸ್ವರೂಪಿಣಿಯಾದ ಜಗನ್ಮಾತೆಯ ಚಿರಪರಿಚಿತ ತೇಜೋಮಯ ಮೂರ್ತಿಯನ್ನು ಮೀರಿ ಮುಂಬರಿಯಲಾಗಲಿಲ್ಲ. ಏನು ಮಾಡಿದರೂ ಆಕೆ ಸಜೀವ ಸತ್ಯದಂತೆ ಸುಳಿದು ಅತೀತಕ್ಕೆ ಅಡ್ಡವಾಗುತ್ತಿದ್ದಳು. ಸಲಸಲವೂ ನಾನು ಅದ್ವೈತ ತತ್ತ್ವದಲ್ಲಿ ಮನಸ್ಸನ್ನು ನಿಲ್ಲಿಸಲು ಯತ್ನಿಸಿದಂತೆಲ್ಲ ಮಾತೆಯ ಮೂರ್ತಿ ಅಡ್ಡಬರುತ್ತಿತ್ತು. ಕಡೆಗೆ ಹತಾಶನಾಗಿ ಹೇಳಿದೆ: 'ಇಲ್ಲ, ನನ್ನಿಂದಾಗದು. ಏನು ಮಾಡಿದರೂ ಮನಸ್ಸು ನಿರ್ವಿಕಲ್ಪಕ್ಕೆ ಹೋಗದು. ನಿರ್ಗುಣಬ್ರಹ್ಮ ಸಾಕ್ಷಾತ್ಕಾರ ನನ್ನಿಂದ ಅಸಾಧ್ಯ!' . . . ನನ್ನ ಮಾತು ಕೇಳಿ ಆತನು ನಸುಕಿನಿಸಿಕೊಂಡು ಗಂಭೀರವಾಣಿಯಿಂದ 'ಏನು! ನಿನ್ನಿಂದಾಗದೆ? ಆಗಬೇಕು!' ಎಂದು ಹೇಳುತ್ತ ಸುತ್ತನೋಡಿ ಅಲ್ಲಿ ಬಿದ್ದಿದ್ದ ಒಂದು ಗಾಜಿನ ಚೂರನ್ನು ತೆಗೆದುಕೊಂಡು ನನ್ನ ಭ್ರೂಮಧ್ಯಕ್ಕೆ ತಿವಿದು 'ಇಲ್ಲಿ ಮನಸ್ಸನ್ನು ಧಾರಣೆಮಾಡಿ ಧ್ಯಾನ ಮಾಡು' ಎಂದನು. ನನ್ನ ಸಾಹಸವೆಲ್ಲವನ್ನೂ ಉಪಯೋಗಿಸಿ ಬಿಡಲು ಮನಸ್ಸು ಮಾಡಿ ಮತ್ತೊಮ್ಮೆ ಧ್ಯಾನಕ್ಕೆ ಕುಳಿತೆ. ಮರಳಿ ಜಗದಂಬೆಯ ರೂಪವು ಆವಿರ್ಭವಿಸಿತು. ವಿವೇಕ ಖಡ್ಗದಿಂದ ಅದನ್ನು ಎರಡಾಗಿ ಸೀಳಿದೆ. ಕಟ್ಟಕಡೆಯ ಬಂಧನ ಹರಿದುಹೋಯಿತು. ಆತ್ಮವು ಸವಿಕಲ್ಪಾವಸ್ಥೆಯನ್ನು ದಾಟಿ ನಿರ್ವಿಕಲ್ಪ ಸಮಾಧಿಯಲ್ಲಿ ಲಯಹೊಂದಿತು"

ತೋತಾಪುರಿ ಶಿಷ್ಯನ ನಿಷ್ಪಂದ ದೇಹವನ್ನು ನೋಡುತ್ತ ಕುಳಿತನು. ಸ್ವಲ್ಪ ಹೊತ್ತಾದ ಮೇಲೆ ಪರ್ಣಶಾಲೆಯ ಬಾಗಿಲನ್ನು ಹಾಕಿಕೊಂಡು ಹೊರಗೆ ಬಂದನು. ಎಷ್ಟು ಹೊತ್ತಾದರೂ ಶ್ರೀರಾಮಕೃಷ್ಣರು ಕರೆಯಲೇ ಇಲ್ಲ. ಹಗಲುರುಳಿ ಇರುಳಾಯಿತು. ಮರುದಿನವಾಯಿತು. ಮತ್ತೊಂದು ದಿನವೂ ಕಳೆಯಿತು! ಮೂರು ದಿನಗಳಾದ ಮೇಲೆ ತೋತಾಪುರಿ ಬೆಕ್ಕಸದಿಂದ ಏನಾಗಿದೆಯೋ ನೋಡುತ್ತೇನೆಂದು ಬಾಗಿಲು ತೆರೆದನು. ಶ್ರೀರಾಮಕೃಷ್ಣರು ತಾನು ಅವರನ್ನು ಬಿಟ್ಟಾಗ ಕುಳಿತಂತೆಯೇ ಕಲ್ಲಾಗಿ ಕುಳಿತಿದ್ದರು. ದೇಹದಲ್ಲಿ ಜೀವದ ಸೂಚನೆ ಇರಲಿಲ್ಲ; ವದನ ಮಾತ್ರ ಪ್ರಶಾಂತ ತೇಜೋಮಂಡಿತವಾಗಿತ್ತು. ತೋತಾಪುರಿ ಬೆರಗಾಗಿ ನಿಂತು ತನ್ನಲ್ಲಿ ತಾನೇ "ಇದು ನಿಜವೇ? ನಾನು ನಾಲ್ವತ್ತು ವರ್ಷಗಳ ಕಠೋರತಪಸ್ಸಿನಿಂದ ಸಾಧಿಸಿದ್ದನ್ನು ಈತನು ದಿನವೊಂದರೊಳೆ

ಸಾಧಿಸಲು ಸಾಧ್ಯವೇ ?" ಎಂದುಕೊಂಡನು. ಶರೀರದ ಚಿಹ್ನೆಗಳನ್ನು ಚೆನ್ನಾಗಿ ಪರೀಕ್ಷಿಸಿದನು. ಸಂದೇಹ ನಿವೃತ್ತಿಯಾಯಿತು. ಶಿಷ್ಯನಿಗೆ ಅದ್ವೈತಸಾಧನೆಯ ಉತ್ತಮೋತ್ತಮ ಸಿದ್ಧಿಯಾದ ನಿರ್ವಿಕಲ್ಪಸಮಾಧಿಯಾಗಿತ್ತು. "ಶಿವಶಿವಾ, ಎಂತಹ ಪವಾಡವಿದು!" ಎಂದು ಕೂಗಿಕೊಂಡನು.

ತರುವಾಯ ನಗ್ನ ಸಂನ್ಯಾಸಿಯ ಗಂಭೀರಕಂಠದಿಂದ ಹೊರಟ 'ಹರಿಃ ಓಂ!' 'ಹರಿಃ ಓಂ!' ಎಂಬ ಮಹಾ ಮಂತ್ರಘೋಷಣವು ಪರ್ಣಶಾಲೆಯನ್ನು ತುಂಬಿ ತುಳುಕಿತು. ಮೆಲ್ಲಮೆಲ್ಲಗೆ, ಬಹುಮೆಲ್ಲಗೆ ಸಮಾಧಿಯಿಂದ ಕೆಳಗಿಳಿದು ಬಂದು ಶ್ರೀರಾಮಕೃಷ್ಣರು ಕಣ್ಣು ತೆರೆದರು. ಗುರು ಪರಮಾನಂದದಿಂದ ಶಿಷ್ಯನನ್ನು ಆಲಿಂಗಿಸಿದನು.

ಮೂರು ದಿನಗಳು ಒಂದೆಡೆ ನಿಲ್ಲದ ಆತನು ದಕ್ಷಿಣೇಶ್ವರದಲ್ಲಿ ಹನ್ನೊಂದು ತಿಂಗಳು ವಾಸಿಸಿದನು.

ತೋತಾಪುರಿ ಮಹಾಮೇಧಾವಿಯಾದ ಸಿದ್ಧನಾದರೂ ಬ್ರಹ್ಮಮಂದಿರಕ್ಕೆ ಅನೇಕ ಮಾರ್ಗಗಳಿವೆ ಎಂಬುದು ಆತನಿಗೆ ತಿಳಿದಿರಲಿಲ್ಲ. ಜ್ಞಾನಮಾರ್ಗವಲ್ಲದ ಮಾರ್ಗ ಆತನಿಗೆ ತಿರಸ್ಕೃತವಾಗಿತ್ತು. ಭೈರವಿ ಭಕ್ತಿಭ್ರಾಂತೆಯಾಗಿದ್ದಂತೆಯೇ ತೋತಾಪುರಿ ಜ್ಞಾನಭ್ರಾಂತನಾಗಿದ್ದನು. ತೋತಾಪುರಿಯ ಗುರುತ್ವದಲ್ಲಿ ಅದ್ವೈತಸಾಧನೆಮಾಡುತ್ತೇನೆ ಎಂದು ಶ್ರೀರಾಮಕೃಷ್ಣರು ಹೇಳಿದಾಗ, ಭೈರವಿ ಅದ್ವೈತವೂ ಜ್ಞಾನವೂ ಶುಷ್ಕವಾದುವುಗಳೆಂದೂ ಅದ್ವೈತಿಗಳೆಲ್ಲ ಪ್ರಚ್ಛನ್ನ ಶೂನ್ಯವಾದಿಗಳೆಂದೂ ಬೋಧಿಸಿ ಪರಮಹಂಸರನ್ನು ಹಿಂದಕ್ಕೆ ತಿರುಗಿಸಲು ಪ್ರಯತ್ನಮಾಡಿದಳು. ಹಾಗೆಯೇ ತೋತಾಪುರಿ ತನ್ನ ಶಿಷ್ಯನ ಭಕ್ತಿಪ್ರದರ್ಶಕವಾದ ಆಚರಣೆಗಳನ್ನೆಲ್ಲ ಮೌಢ್ಯಮೂಲವಾದುವುಗಳೆಂದು ಪರಿಹಾಸ್ಯಮಾಡುತ್ತಿದ್ದನು. ಆದರೆ ಕೆಲದಿನಗಳಲ್ಲಿಯೆ ಶಿಷ್ಯನು ಗುರುವಿಗೆ ಗುರುವಾದನು. ತೋತಾಪುರಿ ಶ್ರೀರಾಮಕೃಷ್ಣರಿಂದ ಅನೇಕ ವಿಷಯಗಳನ್ನು ಕಲಿತು ಪರಿಪಕ್ವವಾದನು.

ತೋತಾಪುರಿ ಕಾಲಕ್ಕೆ ಸರಿಯಾಗಿ ಪ್ರತಿದಿನವೂ ಧ್ಯಾನಮಾಡದೆ ಇರುತ್ತಿರಲಿಲ್ಲ. ಒಂದು ದಿನ ಪರಮಹಂಸರು "ನೀವು ಮಹಾ ಜ್ಞಾನಿಗಳು; ಸಿದ್ಧಪುರುಷರು, ಆದರೂ ನಿಮಗೇಕೆ ಈ ಧ್ಯಾನಮಾಡುವ ಕರ್ಮದ ಕಟ್ಟು?" ಎನಲು, ತೋತಾಪುರಿ ತನ್ನ ಹತ್ತಿರವಿದ್ದ ಹಿತ್ತಾಳೆಯ ಕಲಶವನ್ನು ತೋರಿಸಿ

"ನೋಡು, ಇದೆಷ್ಟು ಬೆಳ್ಳಗೆ ಹೊಳೆಯುತ್ತಿದೆ? ದಿನವೂ ಇದನ್ನು ಉಜ್ಜದಿದ್ದರೆ ಕಾಂತಿ ಕೆಡುವುದು. ಮನಸ್ಸಿನ ವಿಚಾರದಲ್ಲಿಯೂ ಹಾಗೆಯೇ. ಅದನ್ನು ದಿನವೂ ಧ್ಯಾನದಿಂದ ಉಜ್ಜದಿದ್ದರೆ ಮುಸುಕಾಗುವುದು" ಎಂದನು. ಪರಮಹಂಸರು ಆ ಮಾತಿನ ಸತ್ಯವನ್ನು ಒಪ್ಪಿಕೊಂಡು "ಆದರೆ, ಅದು ಚಿನ್ನದ್ದಾಗಿದ್ದರೆ? ದಿನವೂ ಉಜ್ಜಬೇಕೇ ಅದನ್ನು?" ಎಂದು ಕೇಳಿದರು. ಗುರು ಮುಗುಳುನಗೆಯಿಂದ ಒಪ್ಪಿಗೆಯನ್ನು ಸೂಚಿಸಿ ಸುಮ್ಮನಾದನು.

ಒಂದು ದಿನ ಪರಮಹಂಸರು ಕೈಯಲ್ಲಿ ತಾಳಹಾಕುತ್ತ ದೇವರ ನಾಮಗಳನ್ನು ಹೇಳುತ್ತಿರಲು, ತೋತಾಪುರಿ ಜ್ಞಾನಿಯೂ ಮುಕ್ತನೂ ಆದವನು ಬದ್ಧಜೀವರಂತೆ ವರ್ತಿಸುವುದನ್ನು ಕಂಡು ವಿಸ್ಮಿತನಾಗಿ "ಏನಿದು! ಚಪಾತಿ ತಟ್ಟುತಿದ್ದೀಯಾ?'' ಎಂದು ಕೇಳಿದನು. ಶ್ರೀರಾಮಕೃಷ್ಣರು ಮುನಿದುಕೊಂಡು "ಛೇ ಎಂತಹ ಮಾತಿದು! ದೇವರ ನಾಮಗಳನ್ನು ಹೀಗೆ ಹಾಸ್ಯಮಾಡುವುದೆ?'' ಎಂದು ಗದರಿಸಿದರು. ಗುರು ಸ್ಮಿತವದನನಾಗಿ ಸುಮ್ಮನಾದನು. ಆ ಮೇಲೆ ಹಾಗೆ ಹೇಳುತ್ತಿರಲಿಲ್ಲ.

ಮತ್ತೊಂದು ದಿನ ತೋತಾಪುರಿ ತನ್ನ 'ಧುನಿ'ಯ (ಅಗ್ನಿಕುಂಡ) ಮುಂದೆ ಕುಳಿತಿದ್ದಾಗ ಸೇವಕನೊಬ್ಬನು ಹುಕ್ಕಾ ಹಚ್ಚಿಕೊಳ್ಳಲು ಅದರಿಂದ ಕೆಂಡ ತೆಗೆದುಕೊಂಡನು. ನಗ್ನ ಸಂನ್ಯಾಸಿಗೆ ಕೋಪ ಬಂದು ಅವನನ್ನು ಹೊಡೆಯುತ್ತೇನೆ ಎಂದು ಬೆದರಿಸಿದನು. ಶ್ರೀರಾಮಕೃಷ್ಣರು ಅದನ್ನು ಕಂಡು ಗಹಗಹಿಸಿ ನಕ್ಕುಬಿಟ್ಟರು. ತೋತಾಪುರಿ ನಗಲು ಕಾರಣವೇನೆಂದು ಕೇಳಿ, ಸೇವಕನು ಮಾಡಿದ್ದು ತಪ್ಪಲ್ಲವೇ ಎಂದನು. ಪರಮಹಂಸರು ನಗುನಗುತ್ತ "ಅದೇನೋ ಸರಿಯೇ. ಆದರೆ ನಾನು ನಿಮ್ಮ ಜ್ಞಾನದ ಆಳವನ್ನು ಅಳೆಯುತ್ತಿದ್ದೆ. ಈಗತಾನೇ ನನಗೆ ಹೇಳುತ್ತಿದ್ದಿರಿ, ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಎಂದು. ಮರುಕ್ಷಣವೇ ಅದನ್ನೆಲ್ಲಾ ಮರೆತುಬಿಟ್ಟು ಸೇವಕನನ್ನು ಹೊಡೆಯಲು ಹೋಗಿದ್ದಿರಿ! ಮಾಯೆಯ ಮಹಾಶಕ್ತಿಯನ್ನು ನೋಡಿ ನಕ್ಕುಬಿಟ್ಟೆ!'' ಎಂದರು. ತೋತಾಪುರಿ ಗಂಭೀರನಾಗಿ "ಹೌದು, ನೀನು ಹೇಳುವುದು ಸತ್ಯ. ಕೋಪದಲ್ಲಿ ಎಲ್ಲಾ ಮರೆತುಬಿಟ್ಟೆ. ಮಾಯೆ ನಿಜವಾಗಿಯೂ ಭಯಂಕರ ಶತ್ರು. ಇವತ್ತಿನಿಂದ ಕೋಪವನ್ನು ಬಿಟ್ಟೆ. ನಾನು ಕೋಪಗೊಳ್ಳುವುದನ್ನು ಇನ್ನು ಮುಂದೆ ನೀನು ನೋಡುವುದಿಲ್ಲ'' ಎಂದನು.

ಬ್ರಹ್ಮಜ್ಞಾನಿಯಾದ ತೋತಾಪುರಿಯೂ ದಕ್ಷಿಣೇಶ್ವರವನ್ನು ಬಿಟ್ಟು ಹೋಗುವ ಮೊದಲು ಶ್ರೀರಾಮಕೃಷ್ಣರ ಜಗನ್ಮಾತೆಯ ಮಹಾಶಕ್ತಿಯನ್ನು ಒಪ್ಪಿಕೊಂಡು ಮಣಿದು ನಮ್ರತೆಯಿಂದ ಹೋಗಬೇಕಾಯಿತು. ವಂಗದೇಶದ ಹವಕ್ಕೆ ಪಂಜಾಬಿಯಾದ ಆತನ ವಜ್ರದೇಹವೂ ಶಿಥಿಲವಾಯಿತು. ಆತನು ಹಿಂದೆ ಎಂದೂ ರೋಗಗ್ರಸ್ತನಾಗಿರಲಿಲ್ಲ. ಆತನ ಧೀರಗತಿಗೆ ಯಾವ ಎಡರೂ ಅಡ್ಡ ಬಂದಿರಲಿಲ್ಲ. ಜಗದಂಬೆಯ ಕೃಪೆಯಿಂದ ಹಾದಿ ಸರಾಗವಾಗಿತ್ತು. ಆದರೆ ಆತನು ಜಗದಂಬೆಯ ಕೃಪೆಯನ್ನು ಲಕ್ಷ್ಯಕ್ಕೆ ತಂದುಕೊಂಡಿರಲಿಲ್ಲ. ಎಲ್ಲವನ್ನೂ ಸ್ವಪ್ರಯತ್ನದಿಂದಲೇ ಸಾಧಿಸಿದೆನೆಂದು ತಿಳಿದಿದ್ದನು. ಬ್ರಹ್ಮಜ್ಞಾನಿಗೆ ಪರ್ವತವೂ ಹಾದಿಬಿಡುವುದೆಂದು ಆತನ ಭಾವನೆಯಾಗಿತ್ತು. ಜ್ಞಾನಗರ್ವಿಷ್ಠನಿಗೆ ಬುದ್ಧಿ ಗಲಿಸಲೋ ಎಂಬಂತೆ ತೋತಾಪುರಿಗೆ ಆಮಶಂಕೆ ಹಿಡಿಯಿತು. ಹಗಲಿರುಳೂ ಯಾತನೆ ಅತಿ ತೀವ್ರತರವಾಯಿತು. ಆತನ ಮನಸ್ಸು ಬ್ರಹ್ಮಧ್ಯಾನದಿಂದ ಶರೀರದ ಚಿಂತೆಗೆ ಇಳಿಯಿತು. ಏನು ಔಷಧಿಮಾಡಿದರೂ ಗುಣವಾಗಲಿಲ್ಲ. ದೇಹಪ್ರಜ್ಞೆ ಯಿಂದ ಮನಸ್ಸನ್ನು ಜಾರಿಸಿ ನಿರ್ವಿಕಲ್ಪಸಮಾಧಿಯಲ್ಲಿಡಲು ಸಾಹಸಮಾಡಿದನು. ಆಗಲಿಲ್ಲ! ಕಡೆಗೆ, ಈ ದರಿದ್ರ ದೇಹದಿಂದಲ್ಲವೇ ನನ್ನ ಮುಕ್ತಾತ್ಮವೂ ಮಾಯೆಗೆ ಶರಣಾಗಬೇಕಾಯಿತು ಎಂದು ಆಲೋಚಿಸಿ, ದೇಹತ್ಯಾಗಮಾಡಲು ಒಂದು ರಾತ್ರಿ ಯಾರಿಗೂ ತಿಳಿಯದಂತೆ ಗಂಗೆಗೆ ಇಳಿದನು! ಎಷ್ಟುದೂರ ಹೋದರೂ ನೀರು ಅವನು ಮುಳುಗುವಷ್ಟು ಇರಲಿಲ್ಲ! ಇದೇನು! ತೋತಾಪುರಿ ವಿಸ್ಮಿತ ನಾದನು. ಇರುಳಿನಲ್ಲಿ ಗಂಗೆ ಒತ್ತುವುದೇ? ಅಥವಾ ಇಂದ್ರಜಾಲವೋ? ಹೋಗುತ್ತ ಹೋಗುತ್ತ ಆಚೆಯ ದಡವೂ ಬಳಿಸಾರಿತು. ಅಯ್ಯೋ, ತೋತಾಪುರಿ ಯನ್ನು ಮುಳುಗಿಸುವಷ್ಟು ನೀರೂ ಇಲ್ಲವೇ ಹಿಮಾಲಯದಿಂದ ಹುಟ್ಟುವ ಗಂಗೆಯಲ್ಲಿ? ಬ್ರಹ್ಮಜ್ಞಾನಿ "ಇದೇನು, ಮಾಯಾಲೀಲೆ!" ಎಂದುಕೊಂಡನು. ಜ್ಞಾನಸೂರ್ಯನ ತಾಪದಿಂದ ಬಣಗಿಹೋಗಿದ್ದ ಆತನ ಹೃದಯ ಸರೋವರದಲ್ಲಿ ಭಕ್ತಿಜಲವು ಹಠಾತ್ತಾಗಿ ಚಿಮ್ಮಿತು. ನೋಡುತ್ತಾನೆ, ಎಲ್ಲೆಲ್ಲಿಯೂ ಜಗನ್ಮಾತೆ! ನೆಲವೂ ಆಕೆ, ಜಲವೂ ಆಕೆ. ದೇಹವೂ ಆಕೆ; ಮನಸ್ಸೂ ಆಕೆ. ಸುಖವೂ ದುಃಖವೂ ಜ್ಞಾನವೂ ಅಜ್ಞಾನವೂ ಮೃತವೂ ಅಮೃತವೂ ಎಲ್ಲವೂ ಆಕೆ. ನೋಡಿದರೆ ಆಕೆ; ಕೇಳಿದರೆ ಆಕೆ; ಆಲೋಚಿಸಿದರೆ ಆಕೆ; ಅನುಭವವೆಲ್ಲವೂ ಆಕೆ.

ಸತ್ತನ್ನು ಅಸತ್ತಾಗಿ ಮಾಡುವಳಾಕೆ; ಅಸತ್ತನ್ನು ಸತ್ತಾಗಿ ಮಾಡುವಳಾಕೆ. ದೇಹಬದ್ಧವಾದ ಜೀವವು ಆಕೆಯ ಇಚ್ಛೆಯಿಲ್ಲದೆ ಯಾವ ಎಲ್ಲೆಯನ್ನೂ ಮೀರ ಲಾರದು. ಸಾಯಲು ಕೂಡ ತೋತಾಪುರಿ ಸ್ವತಂತ್ರನಲ್ಲ! ಹಾ, ಮತ್ತೆ ಇದೇನು! ಸಗುಣಾತೀತವಾದ ನಿರ್ಗುಣಬ್ರಹ್ಮವೂ ಆಕೆಯೇ! ಯಾವುದನ್ನು ನಿರ್ಗುಣಬ್ರಹ್ಮವೆಂದು ತನ್ನ ಜೀವಮಾನದಲ್ಲೆಲ್ಲ ಅರ್ಚಿಸುತ್ತಿದ್ದನೋ ಅದೂ ಆಕೆಯೇ! ಬ್ರಹ್ಮವೇ ಶಕ್ತಿ, ಸತ್ಯವೇ ಮಾಯೆ! ಬ್ರಹ್ಮಶಕ್ತಿಗಳೆರಡೂ ಒಂದೇ ಸತ್ಯದ ತೋರಿಕೆಗಳು! ಎರಡೂ ಒಂದೇ!

ತೋತಾಪುರಿ ಎದೆತುಂಬ ಭಕ್ತನಾಗಿ ಹಿಂತಿರುಗಿದನು. ಅಂದು ಆತನಿಗೆ ನಿಜವಾದ ಜ್ಞಾನ ಲಭಿಸಿತು. ರಾತ್ರಿಯೆಲ್ಲಾ ಧುನಿಯ ಮುಂದೆ ಕುಳಿತು ದೇವಿಯ ನಾಮಸಂಕೀರ್ತನೆ ಮಾಡುತ್ತ ಧ್ಯಾನಮಾಡಿದನು. ಮರುದಿನ ಶ್ರೀರಾಮ ಕೃಷ್ಣರು ಗುರುವಿನ ಯೋಗಕ್ಷೇಮ ವಿಚಾರಣೆಗೆ ಬಂದಾಗ ಆತನ ರೀತಿಯೇ ಬೇರೆಯಾಗಿತ್ತು. ಮುಖಮಂಡಲವು ಆನಂದದಿಂದ ತೇಜಸ್ವಿಯಾಗಿತ್ತು. ರೋಗದ ಚಿಹ್ನೆಯೇ ಕಾಣುತ್ತಿರಲಿಲ್ಲ. ಗುರು ಶಿಷ್ಯನಿಗೆ ರಾತ್ರಿ ನಡೆದುದೆಲ್ಲವನ್ನೂ ಹೇಳಿ, ರೋಗವು ಮಾಯೆಯ ಶಾಪವಲ್ಲ, ಮಾತೆಯ ಆಶೀರ್ವಾದ ಎಂದನು. ಶ್ರೀರಾಮ ಕೃಷ್ಣರು ಮುಗುಳುನಗೆ ಬೀರಿ "ನೋಡಿದಿರಾ! ನಾನು ಹೇಳಿದರೆ ಜಗನ್ಮಾತೆ ಮಿಥ್ಯೆಯೆಂದು ನೀವು ವಾದಿಸುತ್ತಿದ್ದಿರಿ. ಈಗ ಗೊತ್ತಾಯಿತೇ ಆಕೆಯೂ ಸತ್ಯ ಎಂದು! ಹಿಂದೆಯೇ ತಾಯಿ ನನಗೆ ತೋರಿಸಿದ್ದಳು; ಬ್ರಹ್ಮ ಮತ್ತು ಶಕ್ತಿ ಎರಡೂ ಅಭೇದವಾದುವೆಂದು, ಬೆಂಕಿ ಮತ್ತು ಅದರ ಉರಿಯುವ ಗುಣದಂತೆ" ಎಂದರು.

ಇದನ್ನೇ ಕುರಿತು ಹೇಳುವ ಶ್ರೀರಾಮಕೃಷ್ಣರ ವಚನವಿದು:

"ಪರಬ್ರಹ್ಮವನ್ನು ಅಕರ್ಮಾವಸ್ಥೆಯಲ್ಲಿ ಆಲೋಚಿಸಿದರೆ—ಸೃಷ್ಟಿ, ಸ್ಥಿತಿ, ಲಯಕಾರಿಯಲ್ಲದ ಅವಸ್ಥೆಯಲ್ಲಿ—ಅದನ್ನು ಬ್ರಹ್ಮ, ಪುರುಷ, ನಿರ್ಗುಣ ಎಂದು ಕರೆಯುತ್ತೇನೆ. ಅದನ್ನೇ ಕರ್ಮಾವಸ್ಥೆಯಲ್ಲಿ ಆಲೋಚಿಸಿದರೆ—ಸೃಷ್ಟಿ, ಸ್ಥಿತಿ, ಲಯಕಾರಿಯಾದ ಅವಸ್ಥೆಯಲ್ಲಿ—ಶಕ್ತಿ, ಮಾಯೆ, ಪ್ರಕೃತಿ, ಈಶ್ವರ ಎಂದು ಕರೆಯುತ್ತೇನೆ. ಆದರೆ ನಿಜವಾಗಿ ನೋಡಿದರೆ, ಬ್ರಹ್ಮ ಮತ್ತು ಶಕ್ತಿಗಳಿಗಿರುವ ನಾಮಭೇದವು ವಸ್ತುಭೇದವಲ್ಲ. ನಿರ್ಗುಣ ಸಗುಣಗಳೆರಡೂ ಒಂದೇ, ಹಾಲೂ ಅದರ ಬಿಳಿಯ ಬಣ್ಣವೂ ಇರುವಂತೆ. ಹಾಲನ್ನು ಅದರ ಬಿಳಿಯ ಬಣ್ಣದಿಂದ

ಪ್ರತ್ಯೇಕವಾಗಿ ಯಾರೂ ತಿಳಿಯಲಾರರು. ಅವೆರಡೂ ಒಂದೇ, ರತ್ನವೂ ಅದರ ಕಾಂತಿಯೂ ಇರುವಂತೆ. ಹಾವನ್ನು ಅದರ ವಕ್ರಗತಿಯಿಂದ ಬೇರೆಯಾಗಿ ಭಾವಿಸಲಾಗದು. ಹಾವನ್ನು ಆಲೋಚಿಸಿದರೆ ಅದರ ವಕ್ರಗತಿಯನ್ನೂ ತಪ್ಪದೆ ಆಲೋಚಿಸಬೇಕಾಗುತ್ತದೆ. ಪರಬ್ರಹ್ಮಸಿಗೂ ಜಗನ್ಮಾತೆಗೂ ಅದೇ ಸಂಬಂಧವಿದೆ."

ಕೆಲವು ದಿನಗಳಾದ ಬಳಿಕ ತೋತಾಪುರಿ ಮನಸ್ಸಿಲ್ಲದ ಮನಸ್ಸಿನಿಂದ ಶ್ರೀರಾಮಕೃಷ್ಣರನ್ನು ಬೀಳ್ಕೊಂಡು ದಕ್ಷಿಣೇಶ್ವರದಿಂದ ಹೊರಟುಹೋದನು. ಸಿಂಹವು ಮರಳಿ ಅರಣ್ಯಪ್ರವೇಶಮಾಡಿ ಇತಿಹಾಸದಿಂದ ಕಣ್ಮರೆಯಾಯಿತು. ತರುವಾಯ ಶ್ರೀರಾಮಕೃಷ್ಣರು ಆರು ತಿಂಗಳಕಾಲ ಅವಿಚ್ಛಿನ್ನವಾಗಿ ಅದ್ವೈತ ಪಾರಿಧಿಯಲ್ಲಿ ಮಗ್ನರಾಗಿದ್ದರು. "ಸಾಧಾರಣರ ದೇಹವಾಗಿದ್ದರೆ ಮೂರೇ ವಾರಗಳಲ್ಲಿ ತರಗೆಲೆಯಂತೆ ಉದುರುತ್ತಿತ್ತು. ಹಗಲಿರುಳುಗಳ ಅರಿವೇ ನನಗಿರುತ್ತಿರಲಿಲ್ಲ. ನೊಣಗಳು ಹೆಣದ ಮೂಗು ಬಾಯಿಗಳಲ್ಲಿ ಪ್ರವೇಶಿಸುವಂತೆ ನನ್ನ ಮೂಗು ಬಾಯಿಗಳಲ್ಲಿ ನಿರಾತಂಕವಾಗಿ ಹೋಗುತ್ತಿದ್ದುವು. ತಲೆಕೂದಲು ಪಿಣಿಲಾಗಿ ಹೆಣೆದುಕೊಂಡು ಜಡೆಗಟ್ಟಿಹೋಗಿತ್ತು. ಆಗ ದಕ್ಷಿಣೇಶ್ವರಕ್ಕೆ ಬಂದಿದ್ದ ಸಾಧುವೊಬ್ಬನು ನನ್ನ ಅವಸ್ಥೆಯನ್ನರಿತು ಶುಶ್ರೂಷೆ ಮಾಡದಿದ್ದರೆ ದೇಹ ಬಿದ್ದುಹೋಗುತ್ತಿತ್ತು. ಆತನು ಬಹು ಶ್ರಮದಿಂದ, ಒಂದೊಂದು ಸಾರಿ ಬಡಿಗೆಯಿಂದಲೂ ಬಡಿದು, ನನಗೆ ಪ್ರಜ್ಞೆಬರುವಂತೆಮಾಡಿ ಆಹಾರವನ್ನು ಬಾಯಿಗೆ ಇಡುತ್ತಿದ್ದನು. ಅದರಲ್ಲಿ ಎಲ್ಲಾದರೂ ಒಂದು ಚೂರು ಹೊಟ್ಟೆಗೆ ಹೋಗುತ್ತಿತ್ತು. ಕಡೆಗೆ ಜಗನ್ಮಾತೆ 'ಭಾವಮುಖದಲ್ಲಿರು!' ಎಂದು ಬೆಸಸಿದಳು." ಕಠೋರ ಸಾಧನೆಯಿಂದಲೂ ಹೊತ್ತುಹೊತ್ತಿಗೆ ಸರಿಯಾದ ನಿದ್ರಾಹಾರಗಳು ತಪ್ಪಿದುದರಿಂದಲೂ ಶ್ರೀರಾಮಕೃಷ್ಣರಿಗೆ ಆಮಶಂಕೆ ರೋಗ ಪ್ರಾಪ್ತವಾಯಿತು. ಮಥುರನು ವೈದ್ಯರಿಂದ ಮದ್ದುಕೊಡಿಸಿ ಶುಶ್ರೂಷೆ ಮಾಡಿದನು. ಆರು ತಿಂಗಳಾದ ಮೇಲೆ ರೋಗ ಶಮನವಾಯಿತು.

ಅದ್ವೈತಸಾಧನೆಯಿಂದ ಶ್ರೀರಾಮಕೃಷ್ಣರ ದೃಷ್ಟಿ ಎಂದಿಗಿಂತಲೂ ಹೆಚ್ಚಾಗಿ ಉದಾರವಾಯಿತು. ಸಮದರ್ಶಿತ್ವವು ನೆಲೆಗೊಂಡಿತು. ಮುಕ್ತಿಗೆ ಎಲ್ಲ ಮತಗಳೂ ವಿವಿಧಪಥಗಳೆಂದು ತಿಳಿದರು. ಅವುಗಳನ್ನು ತಿಳಿಯುವ ಕುತೂಹಲವೂ ಹೆಚ್ಚಿತು. ಅನ್ಯಮತಸಾಧನೆಗೂ ಕೈಹಾಕಿದರು. ಏಕೆಂದರೆ, ಅವರ ಭಾಗಕ್ಕೆ

ಸ್ವಾನುಭವವೇ ಉತ್ತಮೋತ್ತಮ ಪ್ರಮಾಣವಾಗಿತ್ತು. ಮಾತು ಮಡಕೆಯ ತೂತು !

ಕ್ರಿ. ಶ. ೧೮೬೬ ನೆಯ ವರ್ಷದ ತುದಿಯಲ್ಲಿ ಗೋವಿಂದರಾಯ ಎಂಬೊಬ್ಬ ಮುಸಲ್ಮಾನ ಫಕೀರನು ದಕ್ಷಿಣೇಶ್ವರಕ್ಕೆ ಬಂದನು. ರಾಣಿ ರಾಸಮಣಿ ಉದಾರ ಹೃದಯಳಾದುದರಿಂದ ಮತಭೇದವಿಲ್ಲದೆ ಸಾಧು ಸಂತರಿಗೆ ವಸತಿಮಾಡಿದ್ದಳು. ಗೋವಿಂದರಾಯನು ದಕ್ಷಿಣೇಶ್ವರದ ಶಾಂತಸನ್ನಿವೇಶವನ್ನು ನೋಡಿ ಅಲ್ಲಿಯೇ ಕೆಲವು ಕಾಲ ಧರ್ಮಸಾಧನೆಯಲ್ಲಿ ನಿರತನಾಗಿದ್ದನು. ಶ್ರೀರಾಮಕೃಷ್ಣರು ಆತನಿಂದ ಇಸ್ಲಾಂ ದೀಕ್ಷೆಯನ್ನು ಕೈಕೊಂಡು ಸಾಧನೆಗೆ ಪ್ರಾರಂಭಿಸಿದರು. ಕಾಳಿ ಮೊದಲಾದ ದೇವದೇವತೆಗಳನ್ನು ಸಂಪೂರ್ಣವಾಗಿ ಮರೆತುಬಿಟ್ಟರು. ದೇವಸ್ಥಾನದ ಹೊರಗಿದ್ದುಕೊಂಡು ಮುಸಲ್ಮಾನರ ಉಡುಪನ್ನೇ ಉಟ್ಟು ' ಅಲ್ಲಾ ' ಮಂತ್ರವನ್ನು ಜಪಮಾಡುತ್ತ ಮಹಮ್ಮದೀಯ ಪದ್ಧತಿಯನ್ನೇ ಚಾಚೂ ತಪ್ಪದೆ ಅನುಸರಿಸಿದರು. ಹಿಂದುಗಳು ಪವಿತ್ರವೆಂದು ಆರಾಧಿಸುವ ಗೋಮಾತೆಯ ಮಾಂಸವನ್ನು ತಿನ್ನಲು ಸಿದ್ಧರಾದರು ! ಅದನ್ನು ಕೇಳಿದ ಮಥುರಬಾಬು ಭಯದಿಂದ ಮಿಂಚುಮುಟ್ಟಿದವನಂತೆ ಗಡಗಡನೆ ನಡುಗಿದನು. ಉಪಾಯದಿಂದ ಶ್ರೀರಾಮಕೃಷ್ಣರಿಗೆ ಗೊತ್ತಾಗದಂತೆ ಗೋವಿಂದರಾಯನ ಅಧ್ಯಕ್ಷತೆಯಲ್ಲಿ ಬ್ರಾಹ್ಮಣನೊಬ್ಬನಿಂದ ಆಹಾರವನ್ನು ತಯಾರಿಸಿ ಕೊಡಿಸಿದನು. ಕೆಲವು ದಿನಗಳಲ್ಲಿ ಬಿಳಿಯ ಗಡ್ಡದ ಗಂಭೀರವದನದ ಪೈಗಂಬರನು ಪ್ರತ್ಯಕ್ಷನಾಗಿ ಪರಮಹಂಸರ ದೇಹದಲ್ಲಿ ಐಕ್ಯವಾದನು. ಅಂತೂ ಮುಸಲ್ಮಾನರ ದೇವರೂ—ಸಗುಣ ಈಶ್ವರನು—ಶ್ರೀರಾಮಕೃಷ್ಣರಿಗೆ ಸಾಕ್ಷಾತ್ಕಾರವಾದನು. ಅಲ್ಲಿಂದ ಆತನೂ ಉಳಿದೆಲ್ಲರಂತೆ ನಿರ್ಗುಣಬ್ರಹ್ಮದಲ್ಲಿ ಮುಳುಗಿಹೋದನು. ಇಸ್ಲಾಂ ವಾಹಿನಿಯೂ ಇತರ ನದಿಗಳಂತೆ ಪರಮಹಂಸರನ್ನು ಬ್ರಹ್ಮವಾರಿಧಿಗೆ ತೇಲಿಸಿತು.

ಇದಾದ ಏಳು ವರ್ಷಗಳ ಮೇಲೆ ಪರಮಹಂಸರಿಗೆ ಕ್ರಿಸ್ತನೂ ಪ್ರತ್ಯಕ್ಷನಾದನು. ಕ್ರಿ. ಶ. ೧೮೭೪ ನೆಯ ನವಂಬರು ತಿಂಗಳಲ್ಲಿ ಶಂಭುಮಲ್ಲಿಕನೆಂಬೊಬ್ಬ ಭಕ್ತನು ಕಲ್ಕತ್ತೆಯಲ್ಲಿ ತನ್ನ ಮನೆಯಲ್ಲಿ ಶ್ರೀರಾಮಕೃಷ್ಣರಿಗೆ ಬೈಬಲನ್ನು ಓದಿ ಹೇಳಿದನು. ಪರಮಹಂಸರಲ್ಲಿ ಕ್ರೈಸ್ತಭಾವ ಪ್ರಫುಲ್ಲಿತವಾಯಿತು. ಆ ಮಹಾ ಹುತಾತ್ಮನ ಜೀವನಚರಿತ್ರೆ ಅವರ ಸರ್ವಸ್ವವನ್ನೂ ಆಕ್ರಮಿಸಿಬಿಟ್ಟಿತು. ಆ ಗುರು

ಮಾನವರ ಕಲ್ಯಾಣಕ್ಕಾಗಿ ಶಿಲುಬೆಯ ಮೇಲೆ ಚೆಲ್ಲಿದ ಪಾವನರಕ್ತವು ದಕ್ಷಿಣೇಶ್ವರದ ಯೋಗೀಶ್ವರನ ನಾಳನಾಳಗಳಲ್ಲಿ ಪ್ರವಹಿಸತೊಡಗಿತು. ಕ್ರೈಸ್ತಪ್ರೇಮದ ದವಾಗ್ನಿ ಹಿಂದೂ ದೇವದೇವತೆಗಳ ಮಹಾರಣ್ಯವನ್ನು ದಹಿಸಲಾರಂಭಿಸಿತು. ಹೀಗಿರುವಾಗಲೇ ಒಂದು ದಿನ ದಕ್ಷಿಣೇಶ್ವರಕ್ಕೆ ಸಮೀಪದಲ್ಲಿದ್ದ ಯದುಮಲ್ಲಿಕನೆಂಬೊಬ್ಬ ಭಕ್ತನ ಮನೆಯಲ್ಲಿ ಶ್ರೀರಾಮಕೃಷ್ಣರು ಶಿಶುವಾದ ಯೇಸು ಕ್ರಿಸ್ತನು ದೇವಮಾತೆಯಾದ ಮೇರಿಯ ಪ್ರೇಮಾಲಿಂಗನದಲ್ಲಿ ಇರುವ ಚಿತ್ರಪಟವನ್ನು ನೋಡಿದರು. ನೋಡೆ ನೋಡೆ ಚಿತ್ರಾರ್ಪಿತ ವ್ಯಕ್ತಿಗಳು ಸಜೀವವಾದಂತೆ ತೋರಿದುವು. ಆ ಮಹದ್ವ್ಯಕ್ತಿಗಳಿಂದ ಜ್ಯೋತಿಕಿರಣವೊಂದು ಹೊರಟು ಪರಮಹಂಸರ ಹೃದಯವನ್ನು ಪ್ರವೇಶಿಸಿತು. ಯೇಸು ಕ್ರಿಸ್ತನ ಒಲುಮೆ ಹೊನಲಿನಲ್ಲಿ ಹಿಂದಿನ ದೇವದೇವತೆಗಳೆಲ್ಲ ಕೊಚ್ಚಿಹೋದರು. ಪರಮಹಂಸರು ದಕ್ಷಿಣೇಶ್ವರಕ್ಕೆ ಹಿಂದಿರುಗಿದರು. ಆದರೆ ಕಾಳಿಯ ಆರಾಧನೆಗೆ ಹೋಗಲಿಲ್ಲ. ಮೂರು ದಿನಗಳು ಹಗಲೂ ಇರುಳೂ ಕ್ರೈಸ್ತಭಾವವು ಅವರನ್ನು ನುಂಗಿಬಿಟ್ಟಿತು. ನಾಲ್ಕನೆಯ ದಿನ ಅವರು ಭಾವದೀಪ್ತರಾಗಿ ಪಂಚವಟಿಯಲ್ಲಿ ತಿರುಗುತ್ತಿದ್ದಾಗ ಹಠಾತ್ತಾಗಿ ದಿವ್ಯಮೂರ್ತಿಯೊಂದು ಪ್ರತ್ಯಕ್ಷವಾಯಿತು. ಆ ಸುಂದರ ತೇಜೋಮೂರ್ತಿ ಅವರ ಒಳಿಸಾರಿ ತನ್ನ ಕರುಣಕಟಾಕ್ಷವನ್ನು ಬೀರಿತು. ವ್ಯಕ್ತಿ ವಿದೇಶೀಯನೆಂದು ಗೊತ್ತಾಯಿತು, ಆದರೆ ಅವರಿಗೆ ಪರಕೀಯನಾಗಿರಲಿಲ್ಲ. "ಈತನೇ ಮಹಾತ್ಮನಾದ ದೀನರಕ್ಷಕ ಯೇಸು ಕ್ರಿಸ್ತನು! ಜಗತ್ಕಲ್ಯಾಣಕ್ಕಾಗಿ ತನ್ನೆದೆಯ ರಕ್ತವನ್ನು ಸೂಸಿದ ಹುತಾತ್ಮನು! ಪ್ರೇಮಘನಮೂರ್ತಿಯಾದ ಸಜರೇತಿನ ಮಹಾಯೋಗಿ!" ಇಂತು ಶ್ರೀರಾಮಕೃಷ್ಣರು ಹೇಳಿಕೊಳ್ಳುತ್ತಿರಲು ಆ ಲಸದ್ರೂಪವು ಅವರ ಶರೀರವನ್ನು ಪ್ರವೇಶಿಸಿತು. ಪರಮಹಂಸರು ಸವಿಕಲ್ಪಸಮಾಧಿಮಗ್ನರಾದರು. ಭರತ ಖಂಡದ ಸಮಯುಗಾವತಾರನು ಕ್ರಿಸ್ತಾವತಾರವನ್ನು ಆಲಿಂಗಿಸಿದನು. ಯೇಸುವೂ ರಾಮ, ಕೃಷ್ಣ, ಬುದ್ಧ ಮೊದಲಾದವರಂತೆ ಅವತಾರಪುರುಷನೆಂಬುದು ಅವರಿಗೆ ಸ್ವಾನುಭವ ವೇದ್ಯವಾಯಿತು.

ದೇಹಸ್ಥಿತಿ ಗುಣಮುಖವಾದರೂ ಸಂಪೂರ್ಣವಾಗಿ ಗುಣವಾಗಲಿಲ್ಲ. ಹವದ ಬದಲಾವಣೆಯಿಂದ ಒಳ್ಳಿತಾಗುವುದೆಂದು ಊಹಿಸಿ ಮಥುರನಾಥನು ಶ್ರೀರಾಮಕೃಷ್ಣರನ್ನು ಕಾಮಾರಪುಕುರಕ್ಕೆ ಕಳುಹಿಸಿದನು. ಅವರು ತಮ್ಮ

ಹಳ್ಳಿಗೆ ಹೋಗದೆ ಎಂಟು ವರ್ಷಗಳಾಗಿತ್ತು. ತಮ್ಮ ಗದಾಧರನ ವಿಚಿತ್ರಾಚರಣೆಗಳ ಕಥೆಗಳನ್ನು ಕೇಳಿ ಉದ್ವಿಗ್ನರಾಗಿದ್ದ ಹಳ್ಳಿಯವರು ಪರಮಹಂಸರನ್ನು ಆತ್ಮಾನಂದದಿಂದ ಸ್ವೀಕರಿಸಿ ವಿಸ್ಮಿತರಾದರು. ಇಂದಿನ ಗದಾಧರನು ಅಂದಿನ ಗದಾಧರನಂತೆಯೇ ಇದ್ದನು. ಮಾತುಕತೆಗಳಲ್ಲಿ ಹುಚ್ಚಿನ ಚಿಹ್ನೆಯೇ ಇರಲಿಲ್ಲ. ಹಿಂದಿದ್ದ ಸರಳತೆ, ಹಿಂದಿದ್ದ ವಿನೋದಶೀಲತೆ, ಅದೇ ಸತ್ಯನಿಷ್ಠೆ, ಅದೇ ಭಕ್ತಿ, ಅದೇ ಭಾವ, ಅದೇ ಪ್ರೇಮರವು! ಎಲ್ಲವೂ ಹಿಂದಿನಂತೆಯೇ! ಹಳ್ಳಿಗರು ಪರಮಹಂಸರ ಮಾತು ಕೇಳಲು ರಾಮೇಶ್ವರನ ಮನೆಯಲ್ಲಿ ಕಿಕ್ಕಿರಿಯುತ್ತಿದ್ದರು. ಶ್ರೀರಾಮಕೃಷ್ಣರು ಗೃಹಕೃತ್ಯದ ಮಾತುಕತೆಗಳೊಡನೆ ಧರ್ಮಜೀವನವನ್ನೂ ಪ್ರಿಯವಾಗುವಂತೆ ಬೋಧಿಸುತ್ತಿದ್ದರು. ಕಲ್ಕತ್ತೆಯ ವಿದ್ವಾಂಸರಿಗಿಂತಲೂ ದಕ್ಷಿಣೇಶ್ವರದ ಪುರೋಹಿತರಿಗಿಂತಲೂ ಕಾಮಾರಪುಕುರದ ಹಳ್ಳಿಗರಿಗೇ ಪರಮಹಂಸರ ಮಾತು ಹೆಚ್ಚಾಗಿ ಅರ್ಥವಾಗುತ್ತಿತ್ತು.

ಇಲ್ಲಿ ನಾವು ಜಗತ್ತಿನ ಧರ್ಮಜೀವನದ ಇತಿಹಾಸದಲ್ಲಿ ಅಭೂತಪೂರ್ವವಾಗಿರುವ ಮಂಗಳಮಯ ಗೌರವಪೂರ್ಣವಾದ ಒಂದು ಮಹತ್ತರ ಸನ್ನಿವೇಶವನ್ನು ಎದುರುಗೊಳ್ಳುತ್ತೇವೆ. ಅದರ ಮಹಿಮೆ ಬಣ್ಣಿಸಲಸದಳವಾಗಿದೆ. ಶ್ರೀರಾಮಕೃಷ್ಣರು ತಮ್ಮ ಪಂಚವತ್ಸರದ ಶಿಶುಪತ್ನಿಯನ್ನು ಬಿಟ್ಟುಹೋಗಿ ಎಂಟು ವರ್ಷಗಳಾಗಿತ್ತು. ಶ್ರೀಶಾರದಾಮಣಿದೇವಿ ಹದಿನಾಲ್ಕು ವರ್ಷದ ಕುಮಾರಿಯಾಗಿ ಜಯರಾಮಬಾಟಿಯ ತನ್ನ ತಂದೆಯ ಮನೆಯಲ್ಲಿದ್ದಳು. ಆಕೆ ತನ್ನ ಪತಿಯ ವಿಚಾರವಾಗಿ ಚಿತ್ರವಿಚಿತ್ರವಾದ ಕಥೆಗಳನ್ನು ಕೇಳಿದ್ದಳು. ಕೆಲವರು ಆತನಿಗೆ ಹುಚ್ಚು ಹಿಡಿದಿದೆ ಎನ್ನುವರು; ಕೆಲವರು ಪಿಶಾಚಿ ಆವರಿಸಿದೆ ಎನ್ನುವರು; ಮತ್ತೆ ಕೆಲವರು ಮೂರ್ಛೆರೋಗ ಎನ್ನುವರು, ಕೆಲವರಂತೂ ಪುಟ್ಟ ಶಾರದೆಯನ್ನು 'ಹುಚ್ಚನ ಹೆಂಡತಿ' ಎಂದು ಕರೆದು ಪರಿಪರಿಯಾಗಿ ಹಾಸ್ಯ ಮಾಡುತ್ತಿದ್ದರು. ಇದನ್ನೆಲ್ಲ ಕೇಳಿ ಆ ಶಿಶುಸರಳ ಹೃದಯದ ಬಾಲೆ ನೊಂದುಕೊಂಡು, ತನ್ನ ಪತಿಗೆ ಕ್ಷೇಮವಾಗುವಂತೆ ಮಾಡು ಎಂದು ಭಗವಂತನನ್ನು ಪ್ರಾರ್ಥಿಸುತ್ತಿದ್ದಳು. ಆಕೆಯ ಮುಗ್ಧ ಹೃದಯದಲ್ಲಿ ವಯಸ್ಸಿಗೆ ಮೀರಿದ ಮಹತ್ತು ಮೊಳೆಯುತ್ತಿತ್ತು. ಪತಿ ಕಾಮಾರಪುಕುರಕ್ಕೆ ಬಂದುದನ್ನು ಕೇಳಿ, ಆತನ ಸೇವೆಗೈದು ಪುನೀತೆಯಾಗುವೆನೆಂದು ಶಾರದಾದೇವಿಯೂ ಅಲ್ಲಿಗೆ ಬಂದಳು. ಈಶ್ವರ

ಪ್ರೇಮೋನ್ಮತ್ತ ಪತಿಯನ್ನು ನೋಡಿ ಹಿಗ್ಗಿದಳು. ಕೆಲದಿನಗಳಲ್ಲಿಯೇ ಪತಿಯ ಹೃದಯದ ನಿಗೂಢ ಭಾವಗಳನ್ನು ಚೆನ್ನಾಗಿ ಅರಿತಳು. ತನ್ನ ಇನಿಯನು ಲೋಕ ಸಂಗ್ರಹಕಾರ್ಯಕ್ಕಾಗಿ ಅವತರಿಸಿರುವ ಜಗನ್ಮಹಾವ್ಯಕ್ತಿ ಎಂದು ಆಕೆಯ ಸೂಕ್ಷ್ಮಪ್ರತಿಭೆಗೆ ಹೊಳೆಯಿತು. ತನ್ನನ್ನು ಅಂತಹ ಮಹಾತ್ಮನ ಸಹಧರ್ಮಿಣಿ ಯನ್ನಾಗಿ ಮಾಡಿದ ವಿಧಿಯನ್ನು ಮನಮುಟ್ಟಿ ಕೊಂಡಾಡಿ, ತಾನು ಆತನ ಮಹಾ ಕಾರ್ಯಕ್ಕೆ ಪ್ರತಿಬಂಧಕವಾಗದೆ ಅನುಕೂಲೆಯಾಗುವೆನೆಂದು ನಿಶ್ಚಯಿಸಿದಳು. ಶ್ರೀರಾಮಕೃಷ್ಣರೂ ಪತ್ನಿಯನ್ನು ಆದರದಿಂದ ಸ್ವೀಕರಿಸಿದರು. ಸಂನ್ಯಾಸಗ್ರಹಣ ಮಾಡಿದ್ದರೂ ಕಾಮಿನೀಕಾಂಚನಗಳನ್ನು ಹೃತ್ಪೂರ್ವಕವಾಗಿ ತ್ಯಜಿಸಿದ್ದರೂ ಸರ್ವದಾ ಪಾರಲೌಕಿಕ ಜೀವಿಯಾಗಿದ್ದರೂ ಜಿತೇಂದ್ರಿಯರಾಗಿದ್ದರೂ ಆಜನ್ಮ ಬ್ರಹ್ಮಚರ್ಯದ ವ್ರತವನ್ನು ಕೈಕೊಂಡಿದ್ದರೂ ಪರಮಹಂಸರು ಶಾರದಾಮಣಿ ದೇವಿಯನ್ನು ಕೈಬಿಡಲಿಲ್ಲ. ಆಕೆಯ ಮನಃಪೂರ್ವಕವಾದ ಸಮ್ಮತಿಯಿಂದಲ್ಲದೆ ಮುಂದಿನ ಜೀವನಕ್ರಮವನ್ನು ಕೈಕೊಳ್ಳಲಿಲ್ಲ. ವಿವಾಹಬಂಧನದ ಋಣವನ್ನು ಲೌಕಿಕವಾಗಿಯೂ ತೀರಿಸಲು ಸಿದ್ಧರಾಗಿದ್ದರು! ಪತ್ನಿಯನ್ನು ಕುರಿತು "ನಾನು ಸ್ತ್ರೀಯರನ್ನೆಲ್ಲಾ ಜಗನ್ಮಾತಾಸ್ವರೂಪಿಣಿಯೆಂದು ನೋಡಲು ಕಲಿತಿದ್ದೇನೆ. ನಿನ್ನನ್ನೂ ಅದೇ ದೃಷ್ಟಿಯಿಂದಲ್ಲದೆ ಬೇರೆಯ ರೀತಿಯಿಂದ ನೋಡಲಾರೆ. ಆದರೆ ನೀನು ನನ್ನನ್ನು ಲೌಕಿಕಕ್ಕೆ (ಮಾಯೆಗೆ) ಎಳೆಯಲಾಸಿಸಿದರೆ ವಿವಾಹಧರ್ಮಕ್ಕೆ ಅನುಗುಣವಾಗಿ ನಿನ್ನಿಚ್ಛೆಯಂತೆ ನಡೆಯಲು ಸಿದ್ಧನಿದ್ದೇನೆ" ಎಂದರು. ಪತಿಯ ವಚನಗಳನ್ನು ಕೇಳಿ ಆ ಮಹಾಮಾತೆ "ನಾನು ನಿಮ್ಮ ಸಹಧರ್ಮಿಣಿ. ನಿಮ್ಮ ಧರ್ಮಜೀವನಕ್ಕೆ ಅನುಕೂಲೆಯಾಗುವುದೇ ನನ್ನ ಪರಮಕರ್ತವ್ಯ. ನಿಮ್ಮ ಮಹಾದರ್ಶವೇ ನನ್ನ ಆದರ್ಶ. ನಿಮ್ಮನ್ನು ಮಾಯೆಗೆಳೆಯಲು ನಾನೆಂದೂ ಬಯಸೆನು. ನನಗೂ ನಿಮ್ಮ ಪಾದಾರವಿಂದದಲ್ಲಿ ಎಡೆಗೊಟ್ಟು ನಾನೂ ಮಾಯೆ ಯನ್ನು ದಾಟುವಂತೆ ಅನುಗ್ರಹಿಸಬೇಕೆಂದು ಬೇಡುತ್ತೇನೆ. ನಿಮ್ಮ ಸೇವೆಯೇ ನನ್ನ ಜೀವನದ ಪರಮ ಪೂಜೆಯಾಗಿರಲಿ!" ಎಂದು ಆಶೀರ್ವಾದ ವಾಣಿಯನ್ನು ಬೀರಿದಳು. ಸತಿಪತಿಗಳಿಬ್ಬರೂ ಎಂತಹ ತ್ಯಾಗಮೂರ್ತಿಗಳು! ಶ್ರೀಶಾರದಾ ದೇವಿ ತಮಗಿತ್ತ ಮಹಾಭಿಕ್ಷೆಗೆ ಪರಮಹಂಸರು ಕೃತಜ್ಞತೆಯಿಂದ ಕಣ್ಣೀರು

ಕರೆದರು. ಮಹಾಭಿಕ್ಷೆಯನ್ನು ನೀಡುವ ಶಕ್ತಿ ಔದಾರ್ಯಗಳು ಮಹಾಮಾತೆ ಗಲ್ಲದೆ ಇನ್ನಾರಿಗಿರುವುವು ?

ಜಗತ್ತಿನಲ್ಲಿ ತ್ಯಾಗಿಗಳನೇಕರು ಒಂದು ಸಂದಿದ್ದಾರೆ. ರಾಜ್ಯಪರಿತ್ಯಾಗ ಮಾಡಿದವರಿದ್ದಾರೆ ; ಕಾಮಿನೀಕಾಂಚನ ತ್ಯಾಗಮಾಡಿದವರಿದ್ದಾರ ; ಪತ್ನಿ ಪುತ್ರ ಬಂಧುಮಿತ್ರರನ್ನು ತ್ಯಾಗಮಾಡಿದವರಿದ್ದಾರೆ ; ಐಹಿಕ ಭೋಗಗಳೆಲ್ಲವನ್ನೂ ತ್ಯಾಗ ಮಾಡಿದವರಿದ್ದಾರೆ ; ಶರೀರಜೀವಗಳನ್ನೇ ತ್ಯಾಗಮಾಡಿದವರಿದ್ದಾರೆ. ಆದರೆ ತ್ಯಾಗವನ್ನೇ ತ್ಯಾಗಮಾಡಲು ಸಿದ್ಧರಾಗಿದ್ದವರು ಯಾರಿದ್ದಾರೆ? ನಿರಂತರ ಸಾಹಸದಿಂದ ಭಾವಸಾಧನೆಗಳಲ್ಲಿ ಸಿದ್ಧಿಹೊಂದಿ, ಸಂನ್ಯಾಸಗ್ರಹಣಮಾಡಿ, ವೇದಾಂತಸಾಧನೆಯಿಂದ ನಿರ್ವಿಕಲ್ಪಸಮಾಧಿಸ್ಥರಾಗಿ, ಬ್ರಹ್ಮಸಾಕ್ಷಾತ್ಕಾರ ಮಾಡಿದವರಾಗಿ, ಜಗತ್ತನ್ನೆಲ್ಲ ಮಿಥ್ಯೆಯೆಂದು ಸ್ವಾನುಭವದಿಂದ ಅರಿತವರಾಗಿ, ಕಾಮಿನೀಕಾಂಚನ ಮೋಹವನ್ನು ಸಂಪೂರ್ಣವಾಗಿ ಜಯಿಸಿದವರಾಗಿ, ಉತ್ತ ಮೋತ್ತಮ ಆದರ್ಶಜೀವಿಗಳಾಗಿ ಬಹು ಕಠೋರ ತಪಸ್ಸಿನಿಂದ ಉಪಾರ್ಜಿಸಿದ ಮಹಾತ್ಯಾಗವನ್ನೇ ತ್ಯಾಗಮಾಡಲು ಸಿದ್ಧರಾಗಿದ್ದ ಶ್ರೀರಾಮಕೃಷ್ಣರಂತಹ ಜೀವಜ್ಯೋತಿಗಳು ಯಾರಿದ್ದಾರೆ? ಯಾರಿದ್ದಾರೆ! ಯಾರೂ ಇಲ್ಲ!

ಶ್ರೀರಾಮಕೃಷ್ಣ ಮತ್ತು ಶಾರದಾದೇವಿಯರ ಪವಿತ್ರಸಂಬಂಧವು ಜಗ ಜ್ಜೀವನಜಾಲದಲ್ಲಿ ಒಂದು ನೂತನ ಜ್ಯೋತಿಸ್ಸೂತ್ರವಾಗಿದೆ. ಕಾಮವಾಸನೆ ಲೇಶಮಾತ್ರವೂ ಇಲ್ಲದ ಆ ಪಾವನ ಪ್ರೇಮಸ್ರೋತವು ಗಂಗೆಗೆ ಗಂಗೆಯಾಗಿದೆ. ಪರಮಹಂಸರು ತಮ್ಮ ಜೀವಮಾನದಲ್ಲೆಲ್ಲ ಶಾರದಾದೇವಿಯನ್ನು ತಂಗಿಯಂತೆ ಅಕ್ಕರೆಯಿಂದ ಲಾಲಿಸಿ ಪಾಲಿಸಿದರು ; ಸಹೋದರನಂತೆ ವ್ಯವಹಾರದ ವಿಷಯ ಗಳನ್ನು ಕಲಿಸಿದರು ; ಗುರುವಿನಂತೆ ದಿವ್ಯಜ್ಞಾನವನ್ನು ಬೋಧಿಸಿದರು ; ಶಿಶು ತಾಯಿಯನ್ನು ಪೂಜಿಸುವಂತೆ ಪೂಜಿಸಿಯೂ ಪೂಜಿಸಿದರು. ಅದರ ವೈಭವ ವೈಚಿತ್ರ್ಯಗಳನ್ನು ಮುಂದೆ ಕಾಣುತ್ತೇವೆ.

ಕಾಮಾರಪುಕುರ ಗ್ರಾಮದಲ್ಲಿ ಆರು ತಿಂಗಳು ಕಳೆದುವು. ಪರಮಹಂಸರು ಆರೋಗ್ಯಶಾಲಿಗಳಾದರು. ಕ್ರಿ. ಶ. ೧೮೬೭ ನೆಯ ಸಂವತ್ಸರದ ಕಡೆಯ ಭಾಗ ದಲ್ಲಿ ದಕ್ಷಿಣೇಶ್ವರಕ್ಕೆ ಮರಳಿದರು.

ಕ್ರಿ. ಶ. ೧೮೬೮ ನೆಯ ವರ್ಷದ ಪ್ರಥಮಭಾಗದಲ್ಲಿ ಮಥುರನಾಥನು

ಶ್ರೀರಾಮಕೃಷ್ಣರನ್ನು ಕೂಡಿಕೊಂಡು ಕಾಶಿ, ಪ್ರಯಾಗ, ಬೃಂದಾವನ ಮೊದಲಾದ ಪವಿತ್ರ ಕ್ಷೇತ್ರಗಳಿಗೆ ತೀರ್ಥಯಾತ್ರೆ ಹೋದನು. ಆ ಸಮಯದಲ್ಲಿ ಪರಮಹಂಸರಿಗಾದ ಆನಂದಾತಿಶಯವನ್ನೂ ಭಾವಸಮಾಧಿಗಳನ್ನೂ ವಾಚಕರೇ ಊಹಿಸಿಕೊಳ್ಳಬಹುದು. ಕಾಶಿ ಅವರ ಕಣ್ಣಿಗೆ ಸಗ್ಗದಿಂದ ಇಳಿದುಬಂದು ಇಳೆಯಲ್ಲಿ ವಜ್ರಮಯವಾಗಿ ನಿಂದ ಧರ್ಮಾಮೃತವೋ ಎಂಬಂತೆ ರಂಜಿಸಿತು. ಆ ಪವಿತ್ರಸ್ಥಾನದ ಶ್ಮಶಾನಗಳಲ್ಲಿ ಧವಳದೇಹಿಯಾದ ಶಿವನನ್ನೂ ಉರಿಯುವ ಸೂಡುಗಳ ಮೇಲೆ ಬಾಗಿ ಜೀವರ ಬಂಧವಿಮೋಚನೆಮಾಡುವ ಜಗನ್ಮಾತೆಯನ್ನೂ ನೋಡಿ ಮೈಮರೆತರು. ಬೃಂದಾವನದಲ್ಲಿ ಸಂಜೆಯ ಹೊಮ್ಮಳೆಯಲ್ಲಿ ಮಿಂದು ಮಿರುಗುವ ಹಸುರಾದ ಮನೋಹರ ನಿಕುಂಜವನಗಳಲ್ಲಿ ದನಗಳನ್ನು ಮೇಯಿಸುವ ದನಗಾಹಿಗಳನ್ನು ಕಂಡು "ಕೃಷ್ಣನೆಲ್ಲಿದ್ದಾನೆ? ಅಯ್ಯೋ, ನನ್ನ ಕೃಷ್ಣನೆಲ್ಲಿದ್ದಾನೆ?" ಎಂದು ಭಾವೋನ್ಮಾದದಿಂದ ಕುಣಿದಾಡಿದರು. ಅಲ್ಲದೆ ಯಾತ್ರೆಯ ಕಾಲದಲ್ಲಿ ತ್ರೈಲಿಂಗಸ್ವಾಮಿಯೇ ಮೊದಲಾದ ಭಕ್ತಶ್ರೇಷ್ಠರನ್ನೂ ಸಿದ್ಧಪುರುಷರನ್ನೂ ಕಂಡು ಮಾತಾಡಿದರು.

ಎಲ್ಲಕ್ಕಿಂತಲೂ ಅತಿಶಯವಾದುದೆಂದರೆ—ಪರಮಹಂಸರ ದರಿದ್ರನಾರಾಯಣ ಸೇವೆಯನ್ನು ತೋರಿಸುವ ಒಂದು ಘಟನೆ. ನಿರ್ವಿಕಲ್ಪಸಮಾಧಿಯಲ್ಲಿ ಜಗತ್ತು ಮಿಥ್ಯೆಯೆಂದು ತಿಳಿದಿದ್ದರೂ ಅವರು ಕೋಟಿಕೋಟಿ ಮಾನವಜೀವಿಗಳ ಕಷ್ಟಸಂಕಟಗಳಿಗೆ ಕಣ್ಣುಮುಚ್ಚಿರಲಿಲ್ಲ. ಜ್ಞಾನಜ್ಯೋತಿಯಿಂದ ಅಂಧರಾಗಿರಲಿಲ್ಲ. ತಮ್ಮ ಶ್ರೀಮಂತ ಮಿತ್ರನೊಡನೆ ಅವರು ದೇವಗಡಕ್ಕೆ ಬಂದಾಗ ಅಲ್ಲಿ ಪ್ರಬಲ ಕ್ಷಾಮವು ಕಾಲಿಟ್ಟಿತ್ತು. ಹಸಿವಿನಿಂದ ನೊರಗಿ ಕೊರಗಿ ನರಳಿ, ಉಡಲು ಬಟ್ಟೆಯಿಲ್ಲದೆ, ಬತ್ತಲೆಯಾಗಿ ಬಯಲಿನಲ್ಲಿ ಬಿದ್ದು ಸಾಯುತ್ತಲಿದ್ದ ಸಂತಾಲರೆಂಬ ಜಾತಿಯ ನೂರಾರು ಮಂದಿಗಳನ್ನು ಕಂಡು ಪರಮಹಂಸರು ಕರಗಿ ನೀರಾದರು. ಅವರೆಲ್ಲರಿಗೂ ಊಟ ಕೊಟ್ಟು, ಉಡಲು ಬಟ್ಟೆಕೊಡಬೇಕೆಂದು ಮಥುರನಿಗೆ ತಿಳಿಸಿದರು. ಮಥುರನು "ಲೋಕದ ಮೇಲಿರುವ ದರಿದ್ರರಿಗೆಲ್ಲ ಹೊಟ್ಟೆಬಟ್ಟೆಗೆ ಕೊಡಲು ನನ್ನಲ್ಲಿ ಹಣವಿಲ್ಲ" ಎಂದುಬಿಟ್ಟನು. ಪರಮಹಂಸರು "ಹಾಗಾದರೆ, ನಾನು ನಿನ್ನೊಡನೆ ಬರುವುದಿಲ್ಲ. ಇವರೊಂದಿಗೇ ಇರುತ್ತೇನೆ" ಎಂದು ಹೇಳಿ ನರಳುತ್ತಿದ್ದ ಸಂತಾಲರ ನಡುವೆ ಹೋಗಿ ಕುಳಿತು ಅಳತೊಡಗಿದರು. ಇಕ್ಕಳದ ನಡುವೆ

ಸಿಕ್ಕಿದಂತಾದ ಮಧುರನು ಮುಂದುಗಾಣದೆ ಶ್ರೀರಾಮಕೃಷ್ಣರ ಇಚ್ಛೆಯನ್ನು ನೆರವೇರಿಸಿ ಅವರೊಡನೆ ಮುಂದುವರಿದನು.

ದರಿದ್ರರನ್ನೂ ದುಃಖಿಗಳನ್ನೂ ಕಂಡರೆ ಶ್ರೀರಾಮಕೃಷ್ಣರಿಗೆ ಸಂತಾಪ ಮಿತಿಮೀರುತಿತ್ತು. ಶುಷ್ಕವೇದಾಂತಿಯಾದವನಂತೆ ಅಥವಾ ಹೊಟ್ಟೆ ತುಂಬಿದ ಪಂಡಿತನಂತೆ ಎಲ್ಲವೂ ಮಾಯೆ, ಅವರ ಕರ್ಮಫಲವನ್ನು ಅವರು ಅನುಭವಿಸು ತ್ತಾರೆ ಎಂದು ಸುಮ್ಮನಿರುತ್ತಿರಲಿಲ್ಲ. ಒಂದು ಸಾರಿ ಮಧುರನು ತನ್ನ ಜಮೀನು ದಾರಿಗೆ ಕಂದಾಯ ವಸೂಲು ಮಾಡಲು ಹೋಗುವಾಗ ಪರಮಹಂಸರನ್ನೂ ಜೊತೆಯಲ್ಲಿ ಕರೆದೊಯ್ದನು. ಮಳೆಯಾಗದೆ ಬೆಳೆ ಸರಿಯಾಗಿ ಬಂದಿರಲಿಲ್ಲ; ರೈತರು ಬಹಳ ಕಷ್ಟದಲ್ಲಿದ್ದರು. ಅದನ್ನು ಕಂಡು ಶ್ರೀರಾಮಕೃಷ್ಣರು ಕಂದಾಯ ವನ್ನು ಬಿಟ್ಟುಬಿಡುವಂತೆಯೂ ಅವರೆಲ್ಲರಿಗೂ ಧನಧಾನ್ಯಗಳನ್ನು ಹಂಚು ವಂತೆಯೂ ಒಂದು ಸಮಾರಾಧನೆ ಮಾಡಿಸಿ ಅವರನ್ನು ಉಪಚರಿಸುವಂತೆಯೂ ಮಧುರನಿಗೆ ಬೆಸಸಿದರು. ಮಧುರಬಾಬು ಒಪ್ಪಲಿಲ್ಲ.

"ಹಾಗೆಂದರೇನು? ಈ ಭೂಮಿ ನಿನ್ನದೇ? ನೀನೇನು ದುಡಿಯುತ್ತೀ ಯೇನು? ಅವರಲ್ಲವೇ ಗೆಯ್ಯುವರು? ನೀನು ಬರಿಯ ಜಗನ್ಮಾತೆಯ ಮೇಸ್ತ್ರಿ! ಅವರೆಲ್ಲ ಆಕೆಯ ಒಕ್ಕಲು! ಆಕೆಯ ಹಣವನ್ನು ಆಕೆಯ ಮಕ್ಕಳ ಕ್ಷೇಮಕ್ಕಾಗಿ ವ್ಯಯಮಾಡಲೇ ಬೇಕು. ಅವರೆಲ್ಲರೂ ಗೋಳಾಡುತ್ತಿದ್ದಾರೆ! 'ಒಲ್ಲೆ' ಎನ್ನಲು ನಿನಗೆ ಹೇಗೆ ಮನಸ್ಸು ಬರುತ್ತದೆ? ನೀನು ಮಾಡಲೇ ಬೇಕು!" ಎಂದು ಶ್ರೀರಾಮಕೃಷ್ಣರು ಗದರಿ ಹರಿಹಿಡಿದರು. ಕಡೆಗೆ ಮಧುರನು ಅವರು ಹೇಳಿದಂತೆ ಮಾಡಬೇಕಾಯಿತು.

ಇನ್ನೊಂದು ಸಾರಿ ಬಡವರಿಗೆ ಉಪಕಾರಮಾಡಬೇಕು! ಎಂದು ಹೇಳಿದ ಶಿಷ್ಯನೊಬ್ಬನನ್ನು ತರಾಟೆಗೆ ತೆಗೆದುಕೊಂಡು ಪರಮಹಂಸರು ಹೀಗೆಂದರು: "ಜೀವನೇ ಶಿವ, ಎಲ್ಲ ಜೀವದಲ್ಲಿಯೂ ಈಶ್ವರನಿದ್ದಾನೆ. ಹೀಗಿರಲು 'ಉಪಕಾರ' ವೆನ್ನುವುದು ಎಂತಹ ಗರ್ವದ ಮಾತು! 'ಉಪಕಾರ' ಎನ್ನಬಾರದು! 'ಸೇವೆ, ಸೇವೆ, ಸೇವೆ,' ಎನ್ನಬೇಕು. ನರನನ್ನೂ ನಾರಾಯಣ ಎಂದು ಭಾವಿಸಬೇಕು!"

ಮಧುರನಾಥನು ಪರಮಹಂಸರನ್ನು ಎಡೆಬಿಡದೆ, ಗೊಣಗುಟ್ಟದೆ, ಜಿಪುಣ ನಾಗದೆ ಮೂರ್ತಿಮತ್ತಾದ ತನ್ನ ಇಷ್ಟದೇವತೆಯನ್ನು ಅನನ್ಯ ಭಕ್ತಿವಿಶ್ವಾಸ

ಗಳಿಂದ ಸೇವೆಮಾಡಿ, ಅವರ ಉಪದೇಶದಂತೆ ತನ್ನ ಅತುಲ ಶ್ರೀಯನ್ನು ದರಿದ್ರ ನಾರಾಯಣರ ಸೇವೆಯಲ್ಲಿ ಸಮೆಸಿ ಕೃತಾರ್ಥನಾದನು. ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದ ಮೇಲೆ ಮಥುರನು ಇದ್ದಕ್ಕಿದ್ದ ಹಾಗೆ ಅಸ್ವಸ್ಥನಾದನು. ಒಂದು ವಾರದೊಳಗೆ ರೋಗ ವಿಷಮಶೀತಜ್ವರವಾಗಿ ಪರಿಣಮಿಸಿತು. ಜೀವನ ನಾಟಕದ ಕೊನೆಯ ಅಂಕದ ಯವನಿಕೆ ತಮ್ಮ ಶ್ರೀಮಂತ ಭಕ್ತನ ಮೇಲೆ ಬೀಳುತ್ತಿರುವುದು ಪರಮಹಂಸರಿಗೆ ಗೊತ್ತಾಯಿತು. ರೋಗ ಪ್ರಬಲವಾಯಿತು. ಮಥುರಬಾಬುವನ್ನು ಕಾಳಿಘಟ್ಟಕ್ಕೆ ಸಾಗಿಸಿದರು. ಕ್ರಿ. ಶ. ೧೮೭೧ ನೆಯ ವರ್ಷದ ಜುಲೈ ತಿಂಗಳಲ್ಲಿ ಆತನು ಜಗನ್ಮಾತೆಯ ಹೃದಯಾಧೀನವಾದನು. ಪರಮಹಂಸರ ಜೀವಮಾನ ರಂಗದಲ್ಲಿದ್ದ ಬಹು ಮುಖ್ಯ ವ್ಯಕ್ತಿಯೊಂದು ಕಣ್ಮರೆಯಾಯಿತು. ಬಹು ಕಾಲದ ಮೇಲೆ "ಸ್ವಾಮಿ, ಮರಣಾನಂತರ ಆತನಿಗೆ ಯಾವ ಪದವಿ ಲಭಿಸಿತು? ಆತನಿಗಂತೂ ಪುನರ್ಜನ್ಮವಿಲ್ಲ?" ಎಂದು ಪ್ರಶ್ನಿಸಿದ ಭಕ್ತನೊಬ್ಬನಿಗೆ ಪರಮಹಂಸರು ಹೀಗೆ ಹೇಳಿದರಂತೆ: "ಬಹುಶಃ ಆತನು ರಾಜವಂಶದಲ್ಲಿ ಜನಿಸಿದ್ದಾನೆ. ಮಥುರನಿಗೆ ಇನ್ನೂ ಅತಿಶಯವಾದ ಭೋಗಾಭಿಲಾಷೆಯಿತ್ತು."

ಮಥುರನ ನಿಧನಾನಂತರ ಕ್ರಿ. ಶ. ೧೮೭೨ ರಲ್ಲಿ ಶ್ರೀ ಶಾರದಾದೇವಿ ದಕ್ಷಿಣೇಶ್ವರಕ್ಕೆ ಬಂದಳು. ಆಗ ರಾತ್ರಿ ಒಂಬತ್ತು ಗಂಟೆ ಹೊಡೆದಿತ್ತು. ಶಾರದಾದೇವಿಗೆ ಮೈ ಸ್ವಸ್ಥವಿರಲಿಲ್ಲ. ರೋಗವಿದ್ದರೂ ಸಹಿಸಿಕೊಂಡು ತಮ್ಮಲ್ಲಿಗೆ ಬಂದ ಸಹಧರ್ಮಿಣಿಯನ್ನು ಕಂಡು ಪರಮಹಂಸರಿಗೆ ಬಹು ದುಃಖವಾಯಿತು. ತಮ್ಮ ಕೊಟಡಿಯಲ್ಲಿಯೇ ಬೇರೊಂದು ಹಾಸಿಗೆ ಮಾಡಿ ರೋಗಿಯನ್ನು ಮಲಗಿಸಿ, ತಾವು ಇರುಳೆಲ್ಲ ಪಕ್ಕದಲ್ಲಿ ಕುಳಿತು ಶುಶ್ರೂಷೆ ಮಾಡಿದರು. ನಡುವೆ ನಡುವೆ ಅನೇಕ ಸಾರಿ "ಅಯ್ಯೋ, ನೀನು ತಡವಾಗಿ ಬಂದೆ. ನಿನ್ನನ್ನು ನೋಡಿಕೊಳ್ಳಲು ನನ್ನ ಮಥುರನಿಲ್ಲ!" ಎಂದು ನಿಟ್ಟುಸಿರು ಬಿಡುತ್ತಿದ್ದರಂತೆ. ಮರುದಿನ ಪತ್ನಿಯನ್ನು ತಮ್ಮ ತಾಯಿಯ ಬಳಿಗೆ ಕಳುಹಿಸಿದರು. ಮೂರು-ನಾಲ್ಕು ದಿನಗಳಲ್ಲಿ ರೋಗ ಗುಣವಾಯಿತು. ಶಾರದಾದೇವಿ ಹರ್ಷಚಿತ್ತೆಯಾದಳು. ಪರಮಹಂಸರು ಅಕ್ಕರೆಯಿಂದ ಆಕೆಗೆ ವಿದ್ಯಾಬುದ್ಧಿಗಳನ್ನು ಹೇಳಿಕೊಡತೊಡಗಿದರು. ಆಕೆಯ ಆತ್ಮವು ಸದಾ ಈಶ್ವರಚಿಂತನೆಯಲ್ಲಿ ನಿಲ್ಲುವಂತೆ ಮಾಡಿದರು. ಆ ದೇವದಂಪತಿಗಳ ಪವಿತ್ರ

ಸಂಬಂಧದ ಮಹಿಮೆ, ಅದರ ಮಾಧುರ್ಯ, ಅದರ ಕರುಣೆ, ಅದರ ಗೌರವ, ಅದರ ದಿವ್ಯತೆ, ಅದರ ಭವ್ಯತೆ, ಅದರ ಕಾಮಗಂಧ ವಿಹೀನವಾದ ಅನಿರ್ವಚನೀಯ ಶುದ್ಧ ಪ್ರೇಮ—ಇವುಗಳನ್ನು ಲೇಖಿಸಿ ಒರೆದು ಮುಗಿಸಲಾರದು ಎಂದು ಮತ್ತೆ ಮತ್ತೆ ಹೇಳಬೇಕಾಗಿದೆ.

ಆಲೋಚನೆಗೆ ಸಿಲುಕದ, ಕಲ್ಪನೆಗೂ ಅತೀತವಾದ ಅದರ ಮಹಾ ಆದರ್ಶವನ್ನು ಸೂಚಿಸಲು ಒಂದು ಉದಾಹರಣೆಯನ್ನು ಮಾತ್ರ ಕೊಡುತ್ತೇವೆ :

ಕ್ರಿ. ಶ. ೧೮೭೨ ನೆಯ ಸಂವತ್ಸರದ ಮೇ ತಿಂಗಳು ಜ್ಯೇಷ್ಠ ಬಹುಳ ಅಮಾವಾಸ್ಯೆಯ ಘನ ನಿಬಿಡ ರಾತ್ರಿ. ಕಾಳಿಕಾಪೂಜೆಗೆ ಪ್ರಶಸ್ತವಾದ ಶುಭಸಮಯಗಳಲ್ಲಿ ಅದೊಂದಾಗಿತ್ತು. ಪರಮಹಂಸರು ಪೂಜೆಗೆ ಬೇಕಾದ ಸಾಮಗ್ರಿಗಳನ್ನೆಲ್ಲ ಒಟ್ಟುಗೂಡಿಸಿದರು, ದೇವಿಯ ಮಂದಿರದಲ್ಲಲ್ಲ, ತಮ್ಮ ಕೊಟಡಿಯಲ್ಲಿ. ಪೂಜಾ ಕಾಲದಲ್ಲಿ ಬಂದಿರಬೇಕೆಂದು ಶಾರದಾದೇವಿಗೆ ಮೊದಲೇ ತಿಳಿಸಿದ್ದರು. ಆದ್ದರಿಂದ ಆಕೆ ರಾತ್ರಿ ಒಂಬತ್ತು ಗಂಟೆಯ ಹೊತ್ತಿಗೆ ಶ್ರೀರಾಮಕೃಷ್ಣರ ಕೊಟಡಿಗೆ ಬಂದಳು. ಅಲ್ಲಿ ಪರಮಹಂಸರಲ್ಲದೆ ಬೇರೆ ಯಾರೂ ಇರಲಿಲ್ಲ. ಎಲ್ಲವೂ ಪೂಜೆಗೆ ಅಣಿಯಾಗಿತ್ತು. ದೇವಿಯನ್ನು ಕೂಡಿಸುವ ಪೀಠವೂ ಅಲಂಕೃತವಾಗಿ ಸಿದ್ಧವಾಗಿತ್ತು. ಆದರೆ ಪೀಠದ ಮೇಲೆ ದೇವಿಯ ವಿಗ್ರಹವಿರಲಿಲ್ಲ ! ಆದರೂ ಪೂಜೆಗೆ ಪ್ರಾರಂಭವಾಯಿತು. ಕಲಶಾರ್ಚನೆ ಶಂಖಾರ್ಚನೆಗಳು ಪೂರೈಸಿದುವು. ತರುವಾಯ ಪರಮಹಂಸರು ತಮ್ಮ ಪತ್ನಿಯ ಕಡೆಗೆ ತಿರುಗಿ ದೇವಿಗೆಂದು ಸಮೆದಿದ್ದ ಪೀಠದ ಮೇಲೆ ಕುಳಿತುಕೊಳ್ಳುವಂತೆ ಸನ್ನೆ ಮಾಡಿದರು ! ಆಗಲೇ ಆಕೆ ಭಾವಾವಿಷ್ಟಳಾಗಿದ್ದಳು. ಮರುಮಾತಾಡದೆ ಪತಿಯ ಆಣತಿಯಂತೆ ಜಗದಂಬೆಯು ಪೀಠದ ಮೇಲೆ ಪದ್ಮಾಸನ ಹಾಕಿ ಕುಳಿತಳು ! ಇಷ್ಟರಲ್ಲಿ ದಿನನಾಥನೆಂಬೊಬ್ಬ ವಿಷ್ಣುದೇವಾಲಯದ ಪೂಜಾರಿ ಪರಮಹಂಸರಿಗೆ ಕುಮಾರಿ ಪೂಜೆಯಲ್ಲಿ ಸಹಾಯ ಮಾಡಲು ಅಲ್ಲಿಗೆ ಬಂದನು. ನೋಡಿ ದಿಙ್ಮೂಢನಾದನು. ಪರಮಹಂಸರು ಯಥಾವಿಧಿಯಾಗಿ ಭವತಾರಿಣಿಯನ್ನು ಅರ್ಚಿಸುವಂತೆ ತಮ್ಮ ಸಹಧರ್ಮಿಣಿಗೆ ಷೋಡಶೋಪಚಾರ ಪೂಜೆಯನ್ನು ಮಾಡಿ ಮಂತ್ರಗಳನ್ನು ಹೇಳುತ್ತ ಹೇಳುತ್ತ ಸಮಾಧಿಮಗ್ನರಾದರು. ಶಾರದಾದೇವಿ ಪೀಠದ ಮೇಲೆ ಭಾವತಲ್ಲೀನಳಾಗಿದ್ದಳು. ಭಕ್ತನೂ ದೇವಿಯೂ ಇಂದ್ರಿಯಾತೀತ ಪ್ರೇಮದಲ್ಲಿ ಸಾಯುಜ್ಯ ಹೊಂದಿದ್ದರು.

ಹೊತ್ತು ಕಳೆಯಿತು. ನಡುರಾತ್ರಿಯಲ್ಲಿ ಪರಮಹಂಸರು ಮರಳಿ ಪ್ರೈತಿಳಿದು ಮಂತ್ರೋಚ್ಚಾರಣೆ ಮಾಡುತ್ತ ಪೀಠಸ್ಥಳಾಗಿದ್ದ ಮಹಾ ಮಾತೆಯ ಪದತಲದಲ್ಲಿ ಜಪಮಾಲೆ ಮೊದಲಾದ ಸಮಸ್ತಸಾಧನ ಸಾಮಗ್ರಿಗಳನ್ನೂ ತಮ್ಮ ಎಲ್ಲಾ ಸಾಧನೆಗಳ ಸಿಖಿಲ ಫಲವನ್ನೂ ನಿವೇದಿಸಿ—

ಸರ್ವಮಂಗಳ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಕೇ |
ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ||

ಎಂದು ಮಂಗಳ ಸಾಮಗಾನಮಾಡಿ ಸಾಷ್ಟಾಂಗಪ್ರಣಾಮಮಾಡಿದರು. ಆ ಕ್ಷಣದಿಂದ ದಿವ್ಯಮಾತೆಯ ಮಹಾಪೀಠದಲ್ಲಿ ಮಂಡಿಸಿ ನವಯುಗಾವತಾರ ಪರಮಹಂಸ ಶ್ರೀರಾಮಕೃಷ್ಣರಿಂದ ಪೂಜಿತಳಾಗಿ ಶ್ರೀಶಾರದಾದೇವಿ ಲೋಕಕ್ಕೆಲ್ಲ "ಮಹಾಮಾತೆ"ಯಾದಳು. ಮುಂದೆ ಆಕೆ "ಮಹಾಮಾತೆ" ಎಂಬ ಹೆಸರಿನಿಂದಲೇ ಲೋಕಪೂಜಿತೆಯಾದಳು. ಸಾಧನೆಗಳಿಗೆಲ್ಲ ಕಿರೀಟಪ್ರಾಯವಾದ ಈ ಸಾಧನೆಯಲ್ಲಿ ಶ್ರೀರಾಮಕೃಷ್ಣರ ಜೈತ್ರಯಾತ್ರೆಯು ಜ್ಯೋತಿರ್ಮಯವಾಗಿ ಕೊನೆಮುಟ್ಟಿತು.

ಆದರೂ ಸಿಂಹಾವಲೋಕನ ರೀತಿಯಿಂದ ಹೇಳಬಹುದಾದ ಕೆಲವು ವಿಷಯಗಳಿವೆ.

ಇದುವರೆಗೆ ಶ್ರೀರಾಮಕೃಷ್ಣರ ಸಾಧನೆಗಳ ಕಥೆಯನ್ನು ಆಲಿಸಿದ ಓದುಗರು ಇಷ್ಟನ್ನು ಮನಗಂಡಿರಬಹುದು. ಪರಮಹಂಸರು ಬರಿಯ ಸಿದ್ಧಾಂತ ಲೋಲುಪರಲ್ಲ; ಪ್ರಯೋಗಪ್ರವೀಣರು. ಸತ್ಯಪರೀಕ್ಷೆಗೆ ಸಾಕ್ಷಾತ್ಕಾರಣವೇ ಪರಮ ಪ್ರಮಾಣ. ಅವರಿವರ ಮಾತುಗಳಿಗಿಂತಲೂ ಧರ್ಮಗ್ರಂಥಗಳ ವಾಕ್ಯಗಳಿಗಿಂತಲೂ ಸ್ವಾನುಭವವೇ ಅತ್ಯುತ್ತಮ ಸಾಕ್ಷಿ. ಪರೀಕ್ಷಿಸಿ ಸಾಧಿಸಿ ನೋಡದೆ ಯಾವುದನ್ನಾದರೂ ಅಲ್ಲಗಳೆಯುವುದಾಗಲಿ ಸ್ವೀಕರಿಸುವುದಾಗಲಿ ತಪ್ಪು. ಪ್ರಯತ್ನಶೀಲವಲ್ಲದ ಸಂಶಯವು ಅಂಧ ಶ್ರದ್ಧೆಯಂತೆಯೇ ನೀರಸವಾದುದು. ಸ್ವಾನುಭವಸಿದ್ಧವಾದ ಜ್ಞಾನವೇ ಸರ್ವಶ್ರೇಷ್ಠವಾದುದು. ಅದುವೆ ಸರ್ವೋಚ್ಚ ಪ್ರಮಾಣ, ಮತ್ತು ಸರ್ವೋತ್ತಮ ಅಧಿಕಾರಿ. ಉಳಿದುದೆಲ್ಲವೂ ಜಳ್ಳು.

ಆದ್ದರಿಂದಲೇ ಅವರು ಸರ್ವಮತ ಸಿದ್ಧಾಂತಗಳನ್ನೂ ಸಾಧನೆಯ ಶಾಲೆಯಲ್ಲಿ

ಅನುಸಾಧನದಿಂದಲೂ ವಿಶಾಲಹೃದಯದಿಂದಲೂ ಪರೀಕ್ಷಿಸಿ ಸಮನ್ವಯ ತತ್ತ್ವಸಿದ್ಧರಾದರು; ಸರ್ವಧರ್ಮಸಮನ್ವಯಾಚಾರ್ಯರಾದರು. ಎಲ್ಲಮತಗಳೂ ಒಂದೇ ಸತ್ಯದೆಡೆಗೆ ಹೋಗುವ ಬೇರೆ ಬೇರೆ ಹಾದಿಗಳೆಂಬುದನ್ನು ಅವರು ಬರಿಯ ಗ್ರಂಥಾಧ್ಯಯನದಿಂದ ಸಂಗ್ರಹಿಸಲಿಲ್ಲ; ಅದು ಅವರಿಗೆ ಪುಸ್ತಕದ ಬದನೆಕಾಯಿ ಆಗಿರಲಿಲ್ಲ, ಪ್ರತ್ಯಕ್ಷವಾದ ಸತ್ಯಸ್ವಸತ್ಯವಾಗಿತ್ತು. ಆದ್ದರಿಂದಲೇ ಅವರಿಗೆ ಈ ಪರಿ ಹೇಳಲು ಸಾಧ್ಯವಾಯಿತು: "ನಾನು ಎಲ್ಲ ಮತಗಳನ್ನೂ ಹಿಂದೂ ಕ್ರೈಸ್ತ ಇಸ್ಲಾಂ ಧರ್ಮಗಳನ್ನೂ ಇನ್ನುಳಿದ ಅನೇಕ ವಿಧವಿಧವಾದ ಪಂಥಗಳನ್ನೂ ಸಾಧಿಸಿದ್ದೇನೆ. ಭಿನ್ನಭಿನ್ನಮಾರ್ಗಗಳಿಂದ ಸರ್ವರೂ ಏಕಮಾತ್ರ ಸತ್ಯದೆಡೆಗೆ ಹೋಗುತ್ತಿದ್ದಾರೆ ಎಂಬುದನ್ನು ಕಂಡು ತಿಳಿದಿದ್ದೇನೆ. ನೀವೂ ಎಲ್ಲ ಮತಗಳನ್ನೂ ಪರೀಕ್ಷಿಸಬೇಕು; ಒಂದು ಸಾರಿಯಾದರೂ ಎಲ್ಲ ಹಾದಿಗಳಲ್ಲಿಯೂ ತಿರುಗಾಡಿ ಬರಬೇಕು. ಎಲ್ಲಿ ನೋಡಿದರೂ ಜನರು ಮತದ ಹೆಸರಿನಲ್ಲಿ ಹೊಡೆದಾಡುತ್ತಿದ್ದಾರೆ. ಹಿಂದುಗಳು, ಮುಸಲ್ಮಾನರು, ಬ್ರಾಹ್ಮಸಮಾಜಿಗಳು, ವೈಷ್ಣವಪಂಥಿಗಳು ಎಲ್ಲರೂ ಸುಮ್ಮನೆ ಕಚ್ಚಾಡುತ್ತಿದ್ದಾರೆ. ಆದರೆ ಅವರಲ್ಲಿ ಯಾರೊಬ್ಬರೂ ಸ್ವಲ್ಪವಾದರೂ ಆಲೋಚಿಸುವುದಿಲ್ಲ. ಯಾವನು ಕೃಷ್ಣನೋ ಅವನೇ ಶಿವನು, ಅದೇ ಕಾಳಿ, ಆದಿಶಕ್ತಿ; ಆತನೇ ಯೇಸು, ಆತನೇ 'ಅಲ್ಲಾ'—ಒಬ್ಬ ರಾಮನಿಗೆ ನೂರು ನಾಮಗಳು. ಸರೋವರಕ್ಕೆ ಅನೇಕ ಘಟ್ಟಗಳಿವೆ. ಒಂದು ಘಟ್ಟದಲ್ಲಿ ಹಿಂದುಗಳು ಕಲಶಗಳಲ್ಲಿ ನೀರು ಮೊಗೆದು ಅದನ್ನು 'ಜಲ' ಎಂದು ಕರೆಯುತ್ತಾರೆ; ಮತ್ತೊಂದರಲ್ಲಿ ಮುಸಲ್ಮಾನರು ಏಕಾಲಿಗಳಲ್ಲಿ ನೀರು ತುಂಬಿಕೊಂಡು ಅದನ್ನು 'ಪಾನಿ' ಎಂದು ಕರೆಯುತ್ತಾರೆ. ಮೂರನೆಯದರಲ್ಲಿ ಕ್ರೈಸ್ತರು 'ವಾಟರ್' ಎಂದು ಕರೆಯುತ್ತಾರೆ. ಹೀಗಿರಲು ನೀರು 'ಜಲ'ವಲ್ಲ 'ಪಾನಿ' ಎಂದಾಗಲಿ, ಅಥವಾ 'ಪಾನಿ' 'ಜಲ ವಲ್ಲ 'ವಾಟರ್' ಎಂದಾಗಲಿ ಹೇಳಬಹುದೇ? ಎಂತಹ ತಿಳಿಗೇಡಿತನ! ಬೇರೆ ಬೇರೆ ಹೆಸರುಗಳಿದ್ದರೂ ವಸ್ತುವೊಂದೇ; ಆ ಒಂದೇ ವಸ್ತುವನ್ನೇ ಎಲ್ಲರೂ ಅರಸುತ್ತಿರುವುದು. ಭೇದವೆಂಬುದೆಲ್ಲ ಹೆಸರಿನಲ್ಲಿ, ರುಚಿಯಲ್ಲಿ, ಭಾವದಲ್ಲಿ. ಒಬ್ಬೊಬ್ಬನೂ ಅವನವನ ದಾರಿಯನ್ನೇ ಹಿಡಿದು ನಡೆಯಲಿ. ಈಶ್ವರನನ್ನು ಸಂದರ್ಶಿಸಬೇಕೆಂಬ ನೈಜವ್ಯಾಕುಲತೆ ತೀವ್ರವಾಗಿದ್ದರೆ ಆತನೇ ಧನ್ಯ! ಅಂಥವನಿಗೆ ಈಶ್ವರ ಸಾಕ್ಷಾತ್ಕಾರ ಕಟ್ಟಿಟ್ಟ ಬುತ್ತಿ."

ಓದುಗರಿಗೆ ಇನ್ನೊಂದು ವಿಷಯ ಹೊಳೆದಿರಬಹುದು. ಅದಾವುದೆಂದರೆ—ಶ್ರೀರಾಮಕೃಷ್ಣರಲ್ಲಿ ಕಂಡುಬರುವ ಜ್ಞಾನ ಭಕ್ತಿ ಕರ್ಮಗಳ ಸಮನ್ವಯ. ಪರಮಹಂಸರು ಜ್ಞಾನಗಂಗೆಯ ಮತ್ತು ಭಕ್ತಿಯಮುನೆಯ ಪ್ರಯಾಗಕ್ಷೇತ್ರವಾಗಿದ್ದರು. ವಿಚಾರವೂ ಪ್ರೇಮವೂ ಅವರಲ್ಲಿ ಕೂಡಿದ್ದುವು. ನಿರ್ಗುಣಬ್ರಹ್ಮಸಾಕ್ಷಾತ್ಕಾರಮಾಡಿದ ಮೇಲೆಯೂ ಅವರು ಕೀರ್ತನೆಗಳನ್ನು ಹಾಡುತ್ತ ಭಕ್ತಿಭಾವಾವಿಷ್ಟರಾಗುತ್ತಿದ್ದರು. ನಿರ್ಗುಣವೆನ್ನ ತಂದೆ, ಸಗುಣವೆನ್ನ ತಾಯಿ ಎಂದು ಹೇಳುತ್ತಿದ್ದರು. ಅವರ ದೃಷ್ಟಿಗೆ ದ್ವೈತ ವಿಶಿಷ್ಟಾದ್ವೈತ ಅದ್ವೈತಗಳು ಪರಸ್ಪರ ವಿರೋಧಿಗಳಾಗಿರಲಿಲ್ಲ. ಒಂದು ಇನ್ನೊಂದಕ್ಕೆ ಮೆಟ್ಟಲಾಗಿತ್ತು. ಬ್ರಹ್ಮವೇ ಶಕ್ತಿ, ಶಕ್ತಿಯೇ ಬ್ರಹ್ಮ. 'ನೇತಿ ನೇತಿ' ಎಂದು ಹೇಳಿದಂತೆಯೇ 'ಇತಿ ಇತಿ' ಎಂದೂ ಸಾರಿದರು. "ಅದ್ವೈತವು ಸಾಧನೆಯ ಕಟ್ಟಕಡೆಯ ಮಾತು ಅಥವಾ ಮೌನ. ಅದನ್ನು ಬಾಯಿಂದಾಡಲು ಆಗುವುದಿಲ್ಲ. ಸಮಾಧಿಯಲ್ಲಿ ಅನುಭವಿಸಬೇಕು. ಏಕೆಂದರೆ, ಅದು ಮನಸ್ಸಿಗೂ ಮಾತಿಗೂ ಮೀರಿದೆ." "ಮನಸ್ಸು ಬುದ್ಧಿಗಳಿಗೆ ವಿಶಿಷ್ಟಾದ್ವೈತವೇ ತತ್ತ್ವತುದಿಯ ಸಿದ್ಧಿ. ಮುಕ್ತಿಯಲ್ಲಿ ನಿರ್ಗುಣಸಗುಣಗಳೆರಡೂ ನಿಜವೆಂಬುದು ಗೊತ್ತಾಗುತ್ತದೆ. ಈಶ್ವರನಿವಾಸವೂ ಈಶ್ವರನಾಮವೂ ಈಶ್ವರನೂ ಎಲ್ಲವೂ ಚೈತನ್ಯ." "ಇಂದ್ರಿಯಬದ್ಧನಾದ ಸಾಧಾರಣ ಮಾನವನಿಗೆ ದ್ವೈತವಲ್ಲದೆ ಬೇರೆ ಸಾಧ್ಯವಲ್ಲ. ಆತನಿಗೆ ಮೂರ್ತಿಪೂಜೆ, ಸಂಕೀರ್ತನೆ, ಸಂಗೀತ ಮೊದಲಾದ ಸ್ಥೂಲಗಳು ಬೇಕಾಗುತ್ತವೆ." ಕರ್ಮದ ವಿಚಾರದಲ್ಲಿ ಹೀಗೆ ಹೇಳಿದ್ದಾರೆ: "ಕೇವಲ ಸಾತ್ತ್ವಿಕನು ಕರ್ಮಕ್ಕೆ ಅತೀತನಾಗುತ್ತಾನೆ. ಕರ್ಮಮಾಡಲು ಪ್ರಯತ್ನಿಸಿದರೂ ಅವನಿಂದ ಆಗುವುದಿಲ್ಲ; ಅಥವಾ ಈಶ್ವರನು ಕರ್ಮಮಾಡಲು ಬಿಡುವುದಿಲ್ಲ.—ಸೊಸೆ ಮನೆಗೆ ಬಂದಾಗ ಚೆನ್ನಾಗಿ ಕೆಲಸಮಾಡಿಸುವರು. ಗರ್ಭಿಣಿಯಾಗುತ್ತಲೆ ಕೆಲಸ ಕಡಮೆಯಾಗುತ್ತ ಬಂದು ಕಡೆಗೆ ನಿಂತೇ ಹೋಗುವುದು. ಮಗುವನ್ನು ಹಡೆದ ಮೇಲೆ ಆಕೆ ಮನೆಗೆಲಸವನ್ನು ಸಂಪೂರ್ಣವಾಗಿ ಬಿಟ್ಟು ಹಸುಳೆಯ ಲಾಲನೆಪಾಲನೆಗಳಲ್ಲಿ ಮಾತ್ರವೇ ತೊಡಗುತ್ತಾಳೆ. ಮನೆಗೆಲಸ ಮಾಡಲು ಅಪೇಕ್ಷೆಪಟ್ಟರೂ ಸಮಯವಿರುವುದಿಲ್ಲ ಅಥವಾ ಮಗು ಬಿಡುವುದಿಲ್ಲ.—ಆದರೆ ಸಾಧಾರಣನು ಈಶ್ವರ ನಿರ್ಭರನಾಗಿ ನಿಷ್ಕಾಮಬುದ್ಧಿಯಿಂದ ಕರ್ತವ್ಯ ಕರ್ಮವನ್ನು ಮಾಡಬೇಕು, ತನ್ನ ಮನೆಯಲ್ಲವೆಂದು ಗೊತ್ತಿದ್ದರೂ

ಯಜಮಾನನ ಮನೆಯ ಎಲ್ಲ ಕೆಲಸಗಳನ್ನೂ ಶ್ರದ್ಧೆಯಿಂದ ಮಾಡುವ ದಾಸಿಯಂತೆ. ಅದನ್ನೇ ಕರ್ಮಯೋಗ ಎನ್ನುತ್ತಾರೆ. ಮನುಷ್ಯನು ದೇವರ ಹೆಸರಿನಲ್ಲಿ ಎಲ್ಲ ಕರ್ತವ್ಯಗಳನ್ನೂ ನಿಸ್ಸಂಗಿಯಾಗಿ ನಿರ್ವಹಿಸಬೇಕು.''

ಪರಮಹಂಸರ ಸಾಧನೆಗಳಲ್ಲಿ ಕಂಡುಬಂದಿರುವ ಮತ್ತೊಂದು ವಿಷಯ ವೆಂದರೆ—ಹೊನ್ನು ಹೆಣ್ಣು ಮಣ್ಣುಗಳ ತ್ಯಾಗ. ಕಾಮಿನಿಯ ತ್ಯಾಗ ಎಂದರೆ ಸ್ತ್ರೀ ದ್ವೇಷ ಅಥವಾ ತಿರಸ್ಕಾರ ಎಂದು ಅವರು ತಿಳಿಯಲಿಲ್ಲ. ಹಾಗಿದ್ದರೆ ಅವರು ತಮ್ಮ ಸಹಧರ್ಮಿಣಿಯನ್ನು ಆದರಿಸಿ ಸೇವಿಸಿ ಪೂಜಿಸುತ್ತಿರಲಿಲ್ಲ. ಕಾಮಿನೀ ತ್ಯಾಗವೆಂದರೆ ಕಾಮತ್ಯಾಗ ಅಥವಾ ಇಂದ್ರಿಯ ನಿಗ್ರಹ. ಸ್ತ್ರೀಯನ್ನು ದ್ವೇಷಿಸುವುದರಿಂದಾಗಲಿ ಅಥವಾ ದೂರ ಮಾಡುವುದರಿಂದಾಗಲಿ ಕಾಮಜಯ ಸಾಧ್ಯವಲ್ಲ ; ಆಕೆಯನ್ನು ಜಗನ್ಮಾತೆಯ ಸ್ವರೂಪವೆಂದು ಆರಾಧಿಸುವುದರಿಂದಲೇ ಅದು ಸುಲಭಸಾಧ್ಯ ಎಂಬುದು ಅವರ ಮತವಾಗಿದೆ. ಪುರುಷರಿಗೆ ಕಾಮಿನೀ ತ್ಯಾಗವನ್ನು ಬೋಧಿಸಿದರ ಸ್ತ್ರೀಯರಿಗೆ ಪುರುಷತ್ಯಾಗವನ್ನು ಬೋಧಿಸುತ್ತಿದ್ದರು.

ಅಂತೆಯೇ ಕಾಂಚನತ್ಯಾಗವೆಂದರೆ ದಾರಿದ್ರ್ಯಲೋಲುಪತೆ ಎಂದು ತಿಳಿಯ ಬಾರದು ; ಐಶ್ವರ್ಯವನ್ನು ಸನ್ಮಾರ್ಗದಿಂದ ಆರ್ಜಿಸಿ ಸದುಪಯೋಗಪಡಿಸು ವುದು ಎಂದು ತಿಳಿಯಬೇಕು. ದೇವರು ಕೊಟ್ಟ ಧನವನ್ನು ದೇವರ ಸೇವೆಗೆ ಉಪಯೋಗಿಸಬೇಕು. ದುಃಖಾರ್ತರಾದವರ ಸೇವೆಯೂ ದೇವರ ಸೇವೆಯೇ. ಈ ಸಂದರ್ಭದಲ್ಲಿ ಪರಮಹಂಸರು ಮಥುರನಾಥನಿಗೆ ಹೇಳಿದ ಮಾತುಗಳು ನೆನಪಿಗೆ ಬಾರದಿರವು.

ಕಡೆಯದಾದರೂ ಬಹು ಮುಖ್ಯವಾದುದೆಂದರೆ—ದರಿದ್ರನಾರಾಯಣ ಸೇವೆ. ಶ್ರೀರಾಮಕೃಷ್ಣರು ಕೆಲವು ಜ್ಞಾನಪಾಷಂಡಿಗಳಂತೆ ಶುಷ್ಕಹೃದಯರಾಗಿರಲಿಲ್ಲ. ದುಃಖಿಗಳನ್ನು ಕಂಡರೆ ದುಃಖಪಡುತ್ತಿದ್ದರು. ಅಳುವವರೊಡನೆ ಅಳುತ್ತಿದ್ದರು. ಅವರಿಗೆ ಜೀವವೇ ಶಿವವಾಗಿತ್ತು. ಮಥುರನೊಡನೆ ಯಾತ್ರೆಗೆ ಹೋಗಿ ದಾರಿಯಲ್ಲಿ ಕ್ಷಾಮಪೀಡಿತರನ್ನು ಕಂಡಾಗ ಅವರು ಹೇಗೆ ವರ್ತಿಸಿದರೆಂಬುದು ಇದಕ್ಕೆ ಸಾಕ್ಷಿ. ಉಪಕಾರ ಮಾಡುತ್ತೇನೆ, ಸಹಾಯ ಮಾಡುತ್ತೇನೆ, ಕಾಪಾಡುತ್ತೇನೆ ಎಂದು ಹೆಮ್ಮೆ ಪಡುವುದು ಈಶ್ವರನಿಂದೆಗೆ ಸಮನಾದುದು. ಆದ್ದರಿಂದ ಸೇವೆಮಾಡುತ್ತೇನೆ ಎಂದು ನಮ್ರಭಾವದಿಂದ ಕೆಲಸ ಮಾಡಬೇಕು. ಪರಮಹಂಸರು " ಲೋಕವೆಲ್ಲ

ಮಾಯೆ, ರೋಗ ರುಜನ ದುಃಖಗಳೆಲ್ಲ ಮಾಯೆ, ಕಷ್ಟಪಡುವುದು ಅವರವರ ಕರ್ಮ, ನಾವೇನು ಮಾಡಲಾಗುತ್ತದೆ, ಎಲ್ಲವೂ ಜಗದೀಶ್ವರನ ಇಚ್ಛೆ." ಎಂದು ತತ್ತ್ವಪ್ರತಿಪಾದನೆ ಮಾಡುತ್ತ, ಹೆರರ ನೆತ್ತರು ಹೀರಿ ಕೊಬ್ಬಿಬೆಳೆದು ಭೋಗ ಲೋಲುಪರಾಗಿ ಚಕ್ಕಂದದಿಂದ ಅಶ್ಲೀಲವಾದ ಆಮೋದ ಪ್ರಮೋದಗಳಲ್ಲಿ ಮಗ್ನರಾಗಿರುವ ಜ್ಞಾನಾಂಧರಂತೆ ಉಪಾಯವೇದಾಂತಿಯಾಗಿರಲಿಲ್ಲ. ಓ ಒಣ ವೇದಾಂತಿ, ದುಃಖ ಮಾಯೆಯಾದರೆ ನಿನ್ನ ಜ್ಞಾನ ಮಾಯೆಗಿಂತಲೂ ಮಾಯೆ!

ಪರಮಹಂಸರು ಜೈತ್ರಯಾತ್ರೆಯಲ್ಲಿ ಜಯಶೀಲರಾದರು. ಮುಕ್ತರಾದರು; ಭಕ್ತರಾದರು; ಪರಿಪಕ್ವವಾದರು; ಸಿದ್ಧರಾದರು. ಸರ್ವಮತಸಾಧನೆಗಳಲ್ಲಿ ಸಿದ್ಧಿಹೊಂದಿ ಸರ್ವಧರ್ಮಸಮನ್ವಯಾಚಾರ್ಯರಾದರು; ನವಯುಗಾವತಾರ ರಾದರು. 'ಒಂದೆಡೆಯೊಳಂ ತನಗೆ ನಿಲವಿಲ್ಲದತಿವೇಗದಿಂದೆ' ತಂಗಾಳಿ ತೀಡಿತು. ಮರಗಿಡುಗಳೆಲ್ಲ ತಳಿತು ನನೆಕೊನೆಯೇರಿದುವು. ದಿಕ್ಕುಗಳು ಪ್ರಸನ್ನವಾದುವು. ನೂತನ ವಸಂತಚೇತನವು ಭೂಮಿಯಲ್ಲಿ ಸಂಚರಿಸಿತು. ಯುಗಯುಗಾಂತರ ತಪಸ್ವಿಯಾದ ತುಷಾರಧವಳ ದುಕೂಲ ಶೋಭಿತವಾದ ಹಿಮಾಚಲದ ಪಾವನ ಶಿರಸ್ಸಿನಲ್ಲಿ, ಸರ್ವದಾ ಸಂಪೂರ್ಣವಾದ ಗಭೀರ ಗಂಭೀರ ಮಾನಸ ಸರಸ್ಸಿನಲ್ಲಿ, ತರುಣಾರುಣರಾಗರಂಜಿತ ಭುವನಮನಮೋಹನ ಮಹಾಪದ್ಮವು ಸಹಸ್ರದಲ ಸೌಂದರ್ಯದಿಂದ ವಿಕಸಿತವಾಯಿತು.

ದುಂಬಿಗಳೆಲ್ಲಿ? ಮಕರಂದ ಪಾನಮಾಡುವ ಮತ್ತ ಮಧುಕರಗಳೆಲ್ಲಿ?

---

# ೪. ಯಾತ್ರಿಕರು

ಶ್ರೀರಾಮಕೃಷ್ಣರೆಂಬ ಲೋಕದ್ಯೋತಕ ಸೂರ್ಯಮಂಡಲವು ಹಿಮಾಲಯದ ಧವಳಗಿರಿಯ ಮೇಲೆ ಮೈದೋರುವ ಮೊದಲು, ಭಾರತೀಯ ಉಷಃಕಾಲದ ನೀಲಾಕಾಶದಲ್ಲಿ ಕೆಲವು ಮಹಾ ನಕ್ಷತ್ರಗಳು ಮೂಡಿ ತಮ್ಮ ಮಿತದೀಪ್ತಿಯಿಂದ ಜಗತ್ತನ್ನು ಬೆಳಗುತ್ತಿದ್ದುವು ಎಂಬ ವಿಷಯವು ಈ ಗ್ರಂಥದ ಉಪಕ್ರಮಣಿಕೆಯಲ್ಲಿ ವಿದಿತವಾಗಿದೆ. ಆ ಆಧ್ಯಾತ್ಮ ಗಗನದ ಯಾತ್ರಿಕರಲ್ಲಿ ರಾಮಮೋಹನರಾಯನು ಅಸ್ತನಾಗಿದ್ದನು. ಉಳಿದವರಲ್ಲಿ ಕೆಲವರನ್ನು ಪರಮಹಂಸರು ಹೋಗಿ ಕಂಡರು; ಕೆಲವರು ಪರಮಹಂಸರೆಡೆಗೆ ಬಂದು ಕಂಡರು. ಶ್ರೀರಾಮಕೃಷ್ಣರ ಸತ್ಯಾನ್ವೇಷಣೆಯಲ್ಲಿ ಕರುಬಿನ ಕುರುಹಾಗಲಿ, ಹೆಮ್ಮೆಯ ಔದಾಸೀನ್ಯವಾಗಲಿ ಇರಲಿಲ್ಲ. ಧರ್ಮಜೀವಿಗಳು ಯಾರೇ ಆಗಲಿ ಅವರಿಗೆ ಪೂಜ್ಯರಾಗಿದ್ದರು. ಈಶ್ವರನ ಅಸಂಖ್ಯ ಕಿರಣಗಳಲ್ಲಿ ತಮಗೆ ಕಾಣದುದು ಇತರರಿಗೆ ಕಂಡಿರಬಾರದೇಕೆ? ಎಂಬ ಭಾವನೆಯಿಂದ ಅನೇಕ ಸಾಧಕರನ್ನು ಸಂದರ್ಶಿಸಿದರು. ಅವರಲ್ಲಿ ಒಬ್ಬೊಬ್ಬರನ್ನೂ ವಿಷಮ ಪರೀಕ್ಷೆಗೆ ಗುರಿಮಾಡದಿರಲಿಲ್ಲ. ಒರಗಲ್ಲಿಗೆ ಹಚ್ಚಿ ನೋಡದೆ ಅವರು ಯಾವುದನ್ನೂ ಚಿನ್ನವೆಂದು ಪರಿಗ್ರಹಿಸುತ್ತಿರಲಿಲ್ಲ. ಎಷ್ಟೋ ಸಾರಿ ಅಂಥ ಜಗತ್ತು ಸ್ವರ್ಣವೆಂದು ಕೊಂಡಾಡುತ್ತಿದ್ದ ಲೋಹಮೂರ್ತಿಗಳನ್ನು ಪರಮಹಂಸರು ಪರೀಕ್ಷೆಮಾಡಿ ಕಾಗೆಬಂಗಾರವೆಂದು ತಿಳಿದು ಮುಗುಳಿಸಿ ಮುಗುಳುನಗೆ ನಕ್ಕು ಹಿಂದಿರುಗಿದ್ದಾರೆ. ಅವರ ಔದಾರ್ಯವು ಸದಾ ಸಮುದ್ರವಾಗಿದ್ದಂತೆಯೆ ಅವರ ವಿಮರ್ಶಕ ಬುದ್ಧಿಯೂ ಸರ್ವದಾ ತೀಕ್ಷ್ಣವಾಗಿತ್ತು. ಬಾಹ್ಯಾಡಂಬರಕ್ಕಾಗಲಿ, ಲೌಕಿಕ ವಿಖ್ಯಾತಿಗಾಗಲಿ, ಮೇಧಾಶಕ್ತಿ ವಿದ್ವತ್ತುಗಳಿಗಾಗಲಿ ಅಥವಾ ಲೋಕವನ್ನೆ ಮಂತ್ರಮುಗ್ಧವನ್ನಾಗಿ ಮಾಡಿಬಿಡುವ ವಾಚಾಲತೆಗಾಗಲಿ ಅವರೆಂದಿಗೂ ಮರುಳಾದುದಿಲ್ಲ. ವ್ಯಕ್ತಿಯ ಹೃದಯದಲ್ಲಿ ಈಶ್ವರ ಜ್ಯೋತಿಯನ್ನು ಕಂಡಲ್ಲದೆ ಅವರು ಪ್ರಶಂಸೆಮಾಡುತ್ತಿರಲಿಲ್ಲ. ಖೋಟಾನಾಣ್ಯಗಳನ್ನು ಕಂಡುಹಿಡಿಯುವುದರಲ್ಲಿ ಅವರು ಅದ್ವಿತೀಯ ಪಂಡಿತರಾಗಿದ್ದರು. ಅವರ ಅನ್ವೇ

ಷಕ ದೃಷ್ಟಿ ವ್ಯಕ್ತಿಗಳ ದೇಹವನ್ನು ಭೇದಿಸಿ ಹೃದಯದ ರಹಸ್ಯಗಳನ್ನು ಕ್ಷಣ ಮಾತ್ರದಲ್ಲಿ ಅರಿಯಬಲ್ಲುದಾಗಿತ್ತು. ಧರ್ಮನಟತ್ವವನ್ನಾಗಲಿ, ಬೂಟಾಟಿಕೆ ಯನ್ನಾಗಲಿ ಕಂಡ ಕೂಡಲೆ ದೊಡ್ಡ ಮನುಷ್ಯರೆನ್ನದೆ, ವಿದ್ವಾಂಸರೆನ್ನದೆ, ಕೀರ್ತಿ ವಂತರೆನ್ನದೆ, ಸಮಾಜಸನ್ನಿವೇಶವನ್ನೂ ಪರಿಗಣಿಸದೆ, ಮಕ್ಕಳಂತೆ ಮೊಸೆಯಿಲ್ಲದೆ ಗಹಗಹಿಸಿ ನಗೆದೋರಿ ಅಲ್ಲಿಂದ ಹೊರಟು ಹೋಗುತ್ತಿದ್ದರು. ಅಕುಟಿಲವಾದ ದೈವಿಕಭಾವವನ್ನು ಸಂದರ್ಶಿಸಿದಾಗ ಕೈಮುಗಿದು ಮುಕ್ತಕಂಠದಿಂದ ಸ್ತುತಿಸಿ ಒರುತ್ತಿದ್ದರು.

ದರಿದ್ರ ಪರಮಹಂಸರು ಶ್ರೀಮಂತ ಮಹರ್ಷಿಯಾದ ದೇವೇಂದ್ರನಾಥ ಠಾಕೂರನನ್ನು ಸಂದರ್ಶಿಸಿದ್ದು ಒಂದು ಸರಸವಿನೋದ ಕಥೆಯಂತಿದೆ.

ಒಂದು ಸಾರಿ ಪರಮಹಂಸರು ಮಥುರನಾಥನೊಡನೆ "ದೇವೇಂದ್ರ ಠಾಕೂರನು ಮಹಾ ಭಕ್ತನೆಂದು ಕೇಳಿದ್ದೇನೆ. ನಾನು ಆತನನ್ನು ನೋಡಬೇಕು." ಎಂದರು. ಮಥುರನು ಕಲ್ಕತ್ತೆಯ ಹಿಂದೂ ಕಾಲೇಜಿನಲ್ಲಿ ದೇವೇಂದ್ರನಾಥನ ಸಹಾಧ್ಯಾಯಿಯಾಗಿದ್ದನು. ಕರೆಯದೆ ಮಥುರನು ಎಲ್ಲಿಗೂ ಹೋಗುತ್ತಿರಲಿಲ್ಲ. ಆದರೆ ಶ್ರೀರಾಮಕೃಷ್ಣರ ಮಾತು ಮೀರಲಾರದೆ ಅವರನ್ನೂ ಒಡಗೊಂಡು ದೇವೇಂದ್ರನಲ್ಲಿಗೆ ಹೋದನು. ಶ್ರೀರಾಮಕೃಷ್ಣರು ಅತಿ ಸಾಧಾರಣವಾಗಿ ಉಡುಪು ಧರಿಸಿದ್ದರು. ಮಥುರನು "ಈಶ್ವರೋನ್ಮತ್ತಸಾಧಕರು!" ಎಂದು ಪರಿ ಚಯಮಾಡಿಕೊಟ್ಟನು. ದೇವೇಂದ್ರನು ಅತಿಥಿಗಳನ್ನು ಅತ್ಯಾದರದಿಂದ ಸ್ವೀಕರಿಸಿ ಸತ್ಕರಿಸಿದನು. ಆತನಲ್ಲಿ ಅಹಂಭಾವವಿದ್ದಂತೆ ತೋರಿತು. ಆತನಿಗೆ ವಿದ್ಯೆ, ಖ್ಯಾತಿ, ಐಶ್ವರ್ಯ ಎಲ್ಲವೂ ಸಮೃದ್ಧಿಯಾಗಿತ್ತು. ಆದರೆ ಆತನಲ್ಲಿ ಯೋಗಭೋಗಗಳೆರಡೂ ಸಮನಾಗಿದ್ದುವು. ಕೆಲವು ಮಾತುಕತೆಗಳಾದ ಮೇಲೆ ಪರಮಹಂಸರು ಬಟ್ಟೆ ಬಿಚ್ಚಿ ಎದೆಯನ್ನು ತೋರಿಸುವಂತೆ ಹೇಳಿದರು. ದೇವೇಂದ್ರನು ಹಾಗೆಯೇ ಮಾಡಿದನು. ವಕ್ಷಸ್ಥಳ ಕೆಂಪಗಿತ್ತು. ದಕ್ಷಿಣೇಶ್ವರದ ಗುರುದೇವನು ಸಂತೃಪ್ತನಾಗಿ "ನಿಜ ವಾಗಿಯೂ ನೀನು ಕಲಿಯುಗದ ಜನಕಮಹಾರಾಜನೇ ಹೌದು. ಜನಕನೂ ಯೋಗಭೋಗಗಳೆರಡನ್ನೂ ಸಾಧಿಸುತ್ತಿದ್ದನು. ನಿನ್ನ ಆತ್ಮ ದೇವರಲ್ಲಿದೆ, ದೇಹ ಸಂಸಾರದಲ್ಲಿದೆ. ಆದ್ದರಿಂದಲೇ ನಾನು ನಿನ್ನ ದರ್ಶನಮಾಡಲು ಬಂದೆ. ಈಶ್ವರನ ವಿಷಯವಾಗಿ ನೀನು ನನಗೇನಾದರೂ ಹೇಳಬೇಕು." ಎಂದನು. ದೇವೇಂದ್ರನು

ವೇದಗಳಿಂದ ಹಲವು ಮಂತ್ರಗಳನ್ನು ಉಚ್ಚರಿಸಿದನು. ಮಹರ್ಷಿ ಪರಮಹಂಸರ ಕಣ್ಣಿನ ಕಾಂತಿಯನ್ನು ಕಂಡು ಬೆರಗಾದನು. ಅತಿಥಿಗಳು ಬೀಳ್ಕೊಳ್ಳುವ ಸಮಯದಲ್ಲಿ ದೇವೇಂದ್ರನು ಮರುದಿನ ನಡೆಯಲಿದ್ದ ಬ್ರಾಹ್ಮಸಮಾಜದ ಬಿಂದು ಮಹೋತ್ಸವಕ್ಕೆ ಪರಮಹಂಸರನ್ನು ಆಹ್ವಾನಿಸಿದನು. ಅವರು "ಈಶ್ವರೇಚ್ಛೆ!" ಎಂದರು. ಮಹರ್ಷಿ "ದಯವಿಟ್ಟು ಇದಕ್ಕಿಂತಲೂ ಸ್ವಲ್ಪ ಒಳ್ಳೆ ಬಟ್ಟೆ ಹಾಕಿಕೊಂಡು ಚೆನ್ನಾಗಿ ಮೈಮುಚ್ಚಿಕೊಂಡು ಬನ್ನಿ!" ಎಂದನು. ಶ್ರೀರಾಮಕೃಷ್ಣರು "ಅದು ಮಾತ್ರ ನನ್ನಿಂದಾಗದು. ನಾನು ಬಾಬುಗಳಂತೆ ಉಡುಪು ಹಾಕಿಕೊಳ್ಳಲಾರೆ." ಎಂದರು. ಅದನ್ನು ಕೇಳಿ ಮಥುರನೂ ದೇವೇಂದ್ರನೂ ಅಲ್ಲಿದ್ದವರೆಲ್ಲರೂ ಗೊಳ್ಳೆಂದು ನಕ್ಕರು. ಮರುದಿನ ಮಥುರನಿಗೆ ದೇವೇಂದ್ರನಿಂದ ಒಂದು ಕಾಗದ ಬಂದಿತು. ಅದರಲ್ಲಿ 'ಶ್ರೀರಾಮಕೃಷ್ಣರು ಬಟ್ಟೆಯಿಲ್ಲದೆ ಬರುವುದು ಚೆನ್ನಾಗಿಲ್ಲ; ಆದ್ದರಿಂದ ಬರುವುದು ಬೇಡ.' ಎಂದು ಬರೆದಿತ್ತು. ಶ್ರೀಮಂತ ಮಹರ್ಷಿಗೆ ದರಿದ್ರ ಪರಮಹಂಸನು ಸಾಕಾದಷ್ಟು ನಾಗರಿಕವಾಗಿರಲಿಲ್ಲ; ಅಥವಾ ನಾಟಕೀಯವಾಗಿರಲಿಲ್ಲ!

ಇದು ನಡೆದ ಕೆಲ ಕಾಲದ ಮೇಲೆ ಕೇಶವಚಂದ್ರಸೇನನು ಗುರುದೇವನನ್ನು ಕುರಿತು "ಯೋಗಭೋಗಗಳನ್ನು ಒಟ್ಟಿಗೆ ಸಾಧಿಸಲು ಸಾಧ್ಯವಲ್ಲವೇ? ಮಹರ್ಷಿ ದೇವೇಂದ್ರನಾಥರ ವಿಚಾರವಾಗಿ ಏನು ಹೇಳುತ್ತೀರಿ?" ಎಂದು ಕೇಳಲು, ಅವರು ನಿಧಾನವಾಗಿ "ದೇವೇಂದ್ರನಾಥ ಠಾಕೂರ . . . ದೇವೇಂದ್ರನಾಥ . . . . ದೇವೇಂದ್ರ . . . . ಎಂದು ಉಚ್ಚರಿಸಿ, ಯಾವನೋ ಅಶರೀರಿಗೆ ಪುನಃ ಪುನಃ ನಮಸ್ಕರಿಸಿ ಇಂತೆಂದರು:

"ಆತನ ವಿಚಾರವೇನು ಎಂಬೆಯಾ? ಒಬ್ಬನು ದುರ್ಗಾಪೂಜೆಯನ್ನು ಬಹಳ ಸಂಭ್ರಮದಿಂದ ನೆರವೇರಿಸುತ್ತಿದ್ದನು. ಬೆಳಗಿನಿಂದ ಬೈಗಿನವರೆಗೂ ಬೇಕಾದಷ್ಟು ಕುರಿಗಳು ಬಲಿಯಾಗುತ್ತಿದ್ದುವು. ಕೆಲವು ಕಾಲದ ಮೇಲೆ ಉತ್ಸಾಹ ಹಳಸಿಹೋಗಿ ಉತ್ಸವದ ತೇಜಸ್ಸು ಮಸುಳಾಯಿತು. ಯಾರೋ ಕೇಳಿದರಂತೆ 'ಇದೇನು ಸ್ವಾಮಿ, ಉತ್ಸವದ ಸಂಭ್ರಮ ಇಷ್ಟರ ಮಟ್ಟಿಗೆ ಇಳಿದುಹೋಯಿತು?' ಎಂದು. ಅದಕ್ಕೆ ಆತನು 'ಅಯ್ಯೋ, ಇದ್ದ ಹಲ್ಲುಗಳೆಲ್ಲ ಉದುರಿಹೋದುವು!' ಎಂದನು.

"ಅದರಂತೆಯೆ ಮುದುಕನಾದ ಮೇಲೆ ಈಶ್ವರ ಧ್ಯಾನ್ಯಮಾಡುವುದು

ದೇವೇಂದ್ರನಿಗೆ ಸ್ವಾಭಾವಿಕವಾದ್ದು . . . . ಆದರೆ ಆತನು ಮಹಾಪುರುಷ ನೆಂಬುದರಲ್ಲಿ ಸಂದೇಹವಿಲ್ಲ.''

ಶ್ರೀರಾಮಕೃಷ್ಣರು ಹೋಗಿ ಕಂಡ ಇನ್ನೊಬ್ಬ ಮಹಾವ್ಯಕ್ತಿ ದಯಾನಂದ ಸರಸ್ವತಿ. ಕ್ರಿ. ಶ. ೧೮೭೩ ನೆಯ ಉತ್ತರಾರ್ಧದಲ್ಲಿ ಆ ಪ್ರತಿವಾದಿ ಭಯಂಕರನು ಕಲ್ಕತ್ತೆಗೆ ಬಂದನು. ಆರ್ಯಸಮಾಜ ಇನ್ನೂ ಸ್ಥಾಪಿತವಾಗಿರಲಿಲ್ಲ. ಪರಮ ಹಂಸರು ದೇವೇಂದ್ರನಾಥನ ವಕ್ಷಸ್ಥಲವನ್ನು ಪರೀಕ್ಷಿಸಿದಂತೆಯೆ ಆತನನ್ನೂ ಪರೀಕ್ಷಿಸಿ, ಆತನಲ್ಲಿಯೂ "ಕಿಂಚಿತ್ ದಿವ್ಯಶಕ್ತಿ" ಇದೆಯೆಂದು ಹೇಳಿದರು. ಆದರ ಆತನ ವಾದಪ್ರಿಯತೆಯನ್ನೂ ಸ್ವಮತ ಭ್ರಾಂತಿಯನ್ನೂ ರಾಜಸವನ್ನೂ ಕಂಡು ಪರಮಹಂಸರು ಬನುಸುಯ್ದರು. ಆತನು ನೂತನ ಪಂಥ ನಿರ್ಮಾಣದಲ್ಲಿ ದೃಢ ನಿಶ್ಚಯನಾಗಿದ್ದಂತೆ ತೋರಿತು.

ಗ್ರಂಥದ ಉಪಕ್ರಮಣಿಕೆಯಲ್ಲಿ ಓದುಗರಿಗೆ ಕೇಶವಚಂದ್ರಸೇನನ ಪರಿಚಯ ವಾಗಿದೆ. ಶ್ರೀರಾಮಕೃಷ್ಣ ಮತ್ತು ಕೇಶವಚಂದ್ರಸೇನರ ಸಂಬಂಧ ಅತಿ ಮನೋಹರವಾದುದು; ಚಿರವಾದುದು. ಪ್ರಥಮತಃ ಮಿತ್ರನಂತೆ ಪರಮಹಂಸರ ಬಳಿಗೆ ಬಂದ ಕೇಶವನು ಬರಬರುತ್ತ ಭಕ್ತನಾಗಿ ಕಟ್ಟಕಡೆಗೆ ಶಿಷ್ಯನೂ ಆದನೆಂದು ಹೇಳಿದರೆ ಅತಿಶಯೋಕ್ತಿಯಾಗದು. ಕೇಶವನ ಉಗ್ರಾಭಿಪ್ರಾಯಗಳು ಪರಮ ಹಂಸರ ಸಾನ್ನಿಧ್ಯ ಸಹವಾಸ ಪ್ರಭಾವಗಳಿಂದ ಸೌಮ್ಯವಾದುವು. ಆತನಲ್ಲಿದ್ದ ಖಂಡನೆ ಸಹಾನುಭೂತಿಯಾಗಿ ಪರಿಣಮಿಸಿತು, ಹುಳಿ ಸಿಹಿಯಾಯಿತು; ಕಾಯಿ ಹಣ್ಣಾಯಿತು. ಕೇಶವನು ಸ್ವಾಮಿವಿವೇಕಾನಂದ ಮೊದಲಾದವರಂತೆ ಪರಮಹಂಸರಿಂದ ಮಂತ್ರೋಪದೇಶ ಪಡೆದು, ಅವರನ್ನು 'ಗುರು' ಎಂದು ಸ್ವೀಕರಿಸಿರಲಿಲ್ಲ ಎಂಬುದೇನೋ ನಿರ್ವಿವಾದವಾದುದು. ಆತನೇ ಬ್ರಾಹ್ಮಸಮಾ ಜದ ಸಾವಿರಾರು ಮಂದಿಗೆ ಆಚಾರ್ಯನಾಗಿದ್ದನು. ಆದರೆ ಸಣ್ಣ ನೊಡರು ಮಹಾ ಜ್ಯೋತಿಯನ್ನು ಅಸಡ್ಡೆಮಾಡುವನಿತು ಆತನು ಗರ್ವಿಯಾಗಿರಲಿಲ್ಲ. ಆದ್ದರಿಂದ ಆತನು ತನ್ನ ಕೆಲವರು ಶಿಷ್ಯರ ಆಗ್ರಹಕ್ಕೆ ಪಾತ್ರನಾದರೂ ಗಮನಿಸದೆ ದಕ್ಷಿ ಣೇಶ್ವರದ ದೇವಮಾನವನ ಪದತಲದಲ್ಲಿ ಕುಳಿತು ಪರಿಪಕ್ವವಾದನು.

ಕ್ರಿ. ಶ. ೧೮೭೫ ರಲ್ಲಿ ಕಲ್ಕತ್ತೆಯಲ್ಲಿ, ಬ್ರಾಹ್ಮಸಮಾಜಕ್ಕೆ ಸೇರಿದ ಜಯ

ಗೋಪಾಲಸೇನನ ತೋಟದ ಮನೆಯಲ್ಲಿ ಪರಮಹಂಸ ಕೇಶವರ ಭೇಟಿಯಾಯಿತು. ಶ್ರೀರಾಮಕೃಷ್ಣರು ಕೇಶವನಿಗೆ "ನಿನಗೆ ಈಶ್ವರದರ್ಶನವಾಗುತ್ತದೆ ಎಂದು ಕೇಳಿದ್ದೆ ; ಅದನ್ನು ನೋಡಲು ಬಂದಿದ್ದೇನೆ." ಎಂದರು. ಮಾತುಕತೆಗೆ ಪ್ರಾರಂಭವಾಯಿತು. ನಡುವೆ ಶ್ರೀರಾಮಕೃಷ್ಣರು ಕಾಳಿಯ ಸ್ತುತಿಯನ್ನು ಹಾಡಿ ಸಮಾಧಿಮಗ್ನರಾದರು. ಕೇಶವನಿಗೂ ಇತರ ಶಿಷ್ಯರಿಗೂ ಅದೇನು ಅಷ್ಟು ರುಚಿಸಲಿಲ್ಲ. ಹೃದಯನು ಮಾವನ ಕಿವಿಯಲ್ಲಿ 'ಓಂಕಾರ' ಉಚ್ಚಾರಣೆಮಾಡಿ ಬಾಹ್ಯಪ್ರಜ್ಞೆ ಬರುವಂತೆ ಮಾಡಿದನು. ಅದನ್ನು ಕಂಡು ಅಲ್ಲಿದ್ದವರಿಗೆಲ್ಲಾ ಆಶ್ಚರ್ಯವಾಯಿತು. ಇದಾದ ತರುವಾಯ ಪರಮಹಂಸರು ಆವೇಶರಾಗಿ ಪೂರ್ಣವಾದ ವಚನವರ್ಷವನ್ನು ಕರೆದರು. ಅವರ ಮುಖವು ಉದ್ದೀಪ್ತವಾಗಿತ್ತು. ಅಲ್ಲಿದ್ದವರೆಲ್ಲರೂ ಶಿಶುಗಳಂತೆ ಮೂಕರಾಗಿ ಆಲಿಸಿದರು. ಕೇಶವನು ತನ್ಮಯನಾಗಿ ಕೇಳಿದನು. ಆನೆಯನ್ನು ನೋಡಲೆಂದು ಹೋದ ಕುರುಡರ ಕಥೆ ಹೇಳಿ, ಒಬ್ಬೊಬ್ಬರು ಈಶ್ವರನ ಒಂದೊಂದು ವಿಭೂತಿಯನ್ನು ದರ್ಶಿಸಿ ಈಶ್ವರನೆಲ್ಲವೂ ಅದೊಂದೇ ವಿಭೂತಿ ಎಂದು ಬಿಡುತ್ತಾರೆ ; ಆಯಾ ದೃಷ್ಟಿಯಿಂದ ಅವರವರ ಮಾತು ಸರಿ ; ಸಮದೃಷ್ಟಿಯಿಂದ ಮಾತ್ರ ತಪ್ಪಾಗುತ್ತದೆ ; ಮಾನವನ ಕ್ಷುದ್ರಮನಸ್ಸು ಈಶ್ವರನ ಅನಂತಭಾವಗಳನ್ನು ಗ್ರಹಿಸಲರಿಯದು ; ಸಕ್ಕರೆಯ ಪರ್ವತದಿಂದ ಸಣ್ಣ ಕಣವೊಂದನ್ನು ಕಚ್ಚಿಕೊಂಡು ಹೋಗುವ ಇರುವೆ ಪರ್ವತವನ್ನೇ ಎತ್ತಿಕೊಂಡು ಬಂದೆನೆಂದು ತಿಳಿಯುತ್ತದೆ. ಈಶ್ವರನ ಕೃಪೆಯಿಲ್ಲದೆ ಏನೂ ಸಾಧ್ಯವಿಲ್ಲ.—ಎಂದು ನಾನಾವಿಧವಾಗಿ ಬೋಧಿಸಿದರು. ಅವರ ಮಾತಿನಲ್ಲಿ ಮಿಂಚಿನ ಶಕ್ತಿಯಿತ್ತು ; ವ್ಯಕ್ತಿತ್ವದಲ್ಲಿ ಭವ್ಯವಾದ ಓಜಸ್ಸಿತ್ತು. ಬ್ರಾಹ್ಮಸಮಾಜದ ಪ್ರಧಾನಾಚಾರ್ಯನು ಸ್ತಂಭೀಭೂತವಾದನು. ಪರಮಹಂಸರ ಮುಂದೆ ತಾನೊಂದು ಶಿಶು ಎಂದು ಭಾವಿಸಿದನು. ಬೀಳ್ಕೊಳ್ಳುವಾಗ ಗುರುದೇವನು ಕೇಶವನನ್ನು ಕುರಿತು "ನಿನ್ನ ಬಾಲ ಬಿದ್ದುಹೋಗಿದೆ." ಎಂದನು. ಅದನ್ನು ಕೇಳಿ ತಮ್ಮ ಆಚಾರ್ಯವರ್ಯನಿಗೆ ಅವಮಾನವಾಯಿತೆಂದು ಅಲ್ಲಿದ್ದವರೆಲ್ಲರೂ ಅಪ್ರತಿಭರಾದರು. ಪರಮಹಂಸರು ಮುಗುಳುನಗೆ ನಕ್ಕು ತಮ್ಮ ಮಾತಿನ ಅಭಿಪ್ರಾಯವನ್ನು ವಿವರಿಸಿದರು. "ಕೆರೆಗಳಲ್ಲಿ ಗೊದಮಟ್ಟೆಗಳನ್ನು ನೀವು ನೋಡಿರಬಹುದು. ಬಾಲವಿರುವ ವರೆಗೆ ಅವು ನೆಲದ ಮೇಲೆ ಸಂಚರಿಸಲಾರವು. ಬಾಲ ಬಿದ್ದುಹೋದ ಮೇಲೆ ನೀರಿನಲ್ಲಿಯೂ

ನೆಲದಲ್ಲಿಯೂ ಬದುಕಬಲ್ಲುವು. ಕೇಶವ, ನಿನ್ನ ಮನಸ್ಸು ಈಗ ಆ ಸ್ಥಿತಿಯಲ್ಲಿದೆ—ಪ್ರಪಂಚದಲ್ಲಿಯೂ ಇದ್ದು ಈಶ್ವರನಲ್ಲಿಯೂ ಇರಬಲ್ಲೆ."

ಪ್ರಥಮದರ್ಶನವಾದ ದಿನದಿಂದ ಕೇಶವನು ಗುರುದೇವನನ್ನು ಪುನಃ ಪುನಃ ನೋಡಲಾರಂಭಿಸಿದನು. ಬ್ರಾಹ್ಮಸಮಾಜದ ಉತ್ಸವಗಳಿಗೆ ಪರಮಹಂಸರನ್ನು ಎಷ್ಟೋ ಸಾರಿ ಆಹ್ವಾನಿಸಿದನು. ಅವರಿಬ್ಬರ ಮೈತ್ರಿ ಗಾಢವಾಯಿತು. ಕೇಶವನು ಶ್ರೀರಾಮಕೃಷ್ಣರ ಮಹಿಮೆಯನ್ನು ಪ್ರಾರ್ಥನಾಮಂದಿರಗಳಲ್ಲಿಯೂ ಉಪಾಸನೆಗಳಲ್ಲಿಯೂ ಉಪದೇಶಗಳಲ್ಲಿಯೂ ಉಪನ್ಯಾಸಗಳಲ್ಲಿಯೂ ಪತ್ರಿಕಾ ಲೇಖನಗಳಲ್ಲಿಯೂ ಮಿತ್ರರ ಸಂಭಾಷಣೆಗಳಲ್ಲಿಯೂ ಭಾವಪೂರ್ವಕವಾಗಿ ಪ್ರಚುರ ಪಡಿಸಿದನು. ಪರಮಹಂಸರ ಯಶಸ್ಸಿಗಾಗಿ ತನ್ನ ಕೀರ್ತಿಯನ್ನೆ ಸಂಚಕಾರ ಕೊಟ್ಟನು. ಬ್ರಾಹ್ಮಸಮಾಜಕ್ಕೆ ಮಹಾಚಾರ್ಯನಾಗಿ, ವಿದ್ವತ್ತಿನಲ್ಲಿಯೂ ಯಶಸ್ಸಿನಲ್ಲಿಯೂ ಮಹಾಶ್ರೀಮಂತನಾಗಿ, ಅನೇಕ ಶಿಷ್ಯಪರಿವೃತನಾಗಿದ್ದ ಕೇಶವನು ಹೆಸರಿಲ್ಲದ, ಗ್ರಂಥವಿದ್ಯೆಯಿಲ್ಲದ, ಗೀರ್ವಾಣಭಾಷೆಯೂ ಬಾರದ, ಬಂಗಾಳಿ ಭಾಷೆಯೂ ಕುರುಡುಕುರುಡಾಗಿದ್ದ ಪರಮಹಂಸರ ಪದತಳದಲ್ಲಿ ಕುಳಿತುದು ಆತನ ಔದಾರ್ಯದ ವೈಶಾಲ್ಯವನ್ನೂ ನಮ್ರತೆಯ ಅಗಾಧತೆಯನ್ನೂ ಸೂಚಿಸುತ್ತದೆ. ಆತನ ಮಹಾನುಭಾವತೆಗೆ ಪರಿಧಿಯೆಲ್ಲಿ? ಕಾರಣವೇನೆಂದರೆ—ಗುರುದೇವನಲ್ಲಿ ತಾನು ಬಹುಕಾಲದಿಂದ ಹುಡುಕುತ್ತಿದ್ದ ಪರಂಜ್ಯೋತಿಯ ದರ್ಶನವಾಯಿತು.

ಶ್ರೀರಾಮಕೃಷ್ಣರ ಸಂಸರ್ಗದಿಂದ ಕೇಶವನ ಬ್ರಾಹ್ಮಸಮಾಜದಲ್ಲಿ ನೂತನ ಚೇತನ ಸಂಚಾರವಾಯಿತು. ಈಶ್ವರನನ್ನು ಜಗನ್ಮಾತೆ, ತಾಯಿ ಎಂಬ ಮಧುರ ನಾಮದಿಂದ ಸಂಬೋಧಿಸ ತೊಡಗಿದರು. ಪರಮತಖಂಡನೆ ಬಾಯಿಮುಚ್ಚಿತು. ಸರ್ವಧರ್ಮ ಸಮನ್ವಯ ತತ್ತ್ವ ಪ್ರಚುರವಾಯಿತು. ಅಷ್ಟೇ ಅಲ್ಲದೆ ಪರಮಹಂಸರ ವಿಮರ್ಶೆಯಿಂದಲೂ ಉಪದೇಶದಿಂದಲೂ ಬ್ರಾಹ್ಮಸಮಾಜಿಗಳು ಧನ್ಯರಾದರು. ಏಕೆಂದರೆ, ಅವರ ನಾಲಗೆಯಲ್ಲಿ ಬೆಂಕಿಯಿತ್ತು, ಮಳೆಯೂ ಇತ್ತು.

ಪರಮಹಂಸರು ಮೊದಲನೆಯ ಸಾರಿ ಬ್ರಾಹ್ಮಸಮಾಜಕ್ಕೆ ಹೋದಾಗ ಆಚಾರ್ಯನು "ಧ್ಯಾನಮಾಡೋಣ" ಎಂದು ನೆರೆದ ಶಿಷ್ಯರಿಗೆ ಹೇಳಿದನು. ಪರಮಹಂಸರು ಭಕ್ತರೆಲ್ಲರೂ ಬಹಳ ಕಾಲ ಧ್ಯಾನಲೀನರಾಗುವರೇನೊ ಎಂದು

ತಿಳಿದಿದ್ದರು. ಆದರೆ ನಾಲ್ಕೈದು ನಿಮಿಷಗಳಲ್ಲಿಯೆ ಎಲ್ಲರೂ ಕಣ್ಣುತೆರೆದು ಮೊದಲಿನಂತೆ ಮಾತಿಗೆ ತೊಡಗಿದರು. ಪರಮಹಂಸರಿಗೆ ಆಶ್ಚರ್ಯವಾಯಿತು, ಇಷ್ಟು ಸ್ವಲ್ಪದರಲ್ಲಿಯೆ ಯಾರಿಗಾದರೂ ಈಶ್ವರದರ್ಶನವಾಗುವುದೆ ಎಂದು! ಎಲ್ಲರೂ ಮಂದಿರವನ್ನು ಬಿಟ್ಟ ಮೇಲೆ ಕೇಶವನಿಗೆ ಹೇಳಿದರು: "ಎಲ್ಲರೂ ಕಣ್ಣು ಮುಚ್ಚಿ ಕುಳಿತುದನ್ನು ಕಂಡೆ. ನನಗೇನು ನೆನಪಿಗೆ ಬಂತು, ಹೇಳಲೇನು? ದಕ್ಷಿಣೇಶ್ವರದ ತೋಟದ ಕೆಲವು ಸಾರಿ ನೂರಾರು ಕಪಿಗಳು ಮರದ ಮೇಲೆ ನಿಶ್ಚಲವಾಗಿ ಮುಗ್ಧತೆಯೇ ಮೂರ್ತಿವೆತ್ತಿರುವಂತೆ ಕುಳಿತಿರುವುದನ್ನು ನೋಡಿದ್ದೇನೆ.... ಅವುಗಳೆಲ್ಲ ಇಷ್ಟು ಸ್ವಲ್ಪ ಹೊತ್ತಿನಲ್ಲಿ ಯಾವ ತೋಟದ ಯಾವ ಹಣ್ಣಿನ ಮರಗಳನ್ನು ಹೇಗೆ ಲೂಟಿಮಾಡಬೇಕು ಎಂಬುದನ್ನು ಆಲೋಚಿಸುತ್ತ ಇರುತ್ತವೆ. ನಿನ್ನ ಶಿಷ್ಯರ ಧ್ಯಾನವೂ ಅದಕ್ಕಿಂತ ಹೆಚ್ಚಾಗೇನೂ ಪ್ರಮಾದಕರವಾಗಿರುವಂತೆ ತೋರಲಿಲ್ಲ!"

ಇನ್ನೊಂದು ಸಾರಿ ಸಮಾಜದಲ್ಲಿ "ಸರ್ವದಾ ಈಶ್ವರಧ್ಯಾನಮಾಡಬೇಕು" ಎಂಬರ್ಥದ ಗೀತೆಯೊಂದನ್ನು ಹಾಡುತ್ತಿದ್ದರು. ಪರಮಹಂಸರು ನಡುವೆ ಬಾಯಿಹಾಕಿ "ನೀವು ಆ ಗೀತೆಯನ್ನು ಸ್ವಲ್ಪ ಬದಲಾಯಿಸಿಕೊಳ್ಳಬೇಕು. ದಿನಕ್ಕೆ ಎರಡೇ ಸಾರಿ ಆತನನ್ನು ಪ್ರಾರ್ಥಿಸಿ ಪೂಜಿಸಿ ಎಂದಿದ್ದರೆ ಸಾಕು. ನೀವೇನು ಮಾಡುತ್ತಿದ್ದೀರೋ ಅದನ್ನೇ ಹೇಳಿ. ಈಶ್ವರನೊಡನೆ ಈ ಚೌಕಾಸಿ ಏಕೆ?" ಎಂದರು.

ಬ್ರಾಹ್ಮಸಮಾಜಿಗಳು ನಿಗ್ರಹಾರಾಧನೆಯನ್ನು ಹಳಿಯುತ್ತಿದ್ದರೂ ಈಶ್ವರನ ಐಶ್ವರ್ಯಗಳ ನಾಮಮಾಲಿಕೆಯನ್ನು ಕೀರ್ತಿಸಿ ಸ್ತುತಿಸುತ್ತಿದ್ದರು. ಒಂದು ದಿನ ಪರಮಹಂಸರು ಕೇಶವನು ಹಾಗೆ ಮಾಡುವುದನ್ನು ಆಲಿಸಿ ಇಂತೆಂದರು:

"ಅಯ್ಯೋ, ಈ ಮಾರುದ್ದ ಲೆಕ್ಕದ ಪಟ್ಟಿ ಏಕಯ್ಯಾ? ಪುತ್ರನೆಲ್ಲಿಯಾದರೂ ಪಿತನನ್ನು ಕುರಿತು: 'ಅಪ್ಪಾ, ನಿನಗೆ ನೂರು ಮನೆಗಳಿವೆ; ಇನ್ನೂರು ಎಕರೆ ಜಮೀನಿದೆ; ಸಾವಿರ ಕುದುರೆಗಳಿವೆ' ಎಂದು ಕೀರ್ತನೆಮಾಡುತ್ತಾನೆಯೇ? ತಂದೆ ಮಗನಿಗೆ ತನ್ನ ಐಶ್ವರ್ಯವನ್ನು ಕೊಡುವುದು ಸ್ವಾಭಾವಿಕ. ನೀನು ಯಾವಾಗಲೂ ಈಶ್ವರನ ದಾನಗಳನ್ನೆ ಅತಿಶಯವೆಂದು ಹೊಗಳುತ್ತಿದ್ದರೆ ಎಂದಿಗೂ ಆತನೊಡನೆ ಸಲಿಗೆಯಿಂದಿರಲಾರೆ; ಎಂದಿಗೂ ಸಾಮೀಪ್ಯ ಪಡೆಯಲಾರೆ. ಅವನು ನಿನ್ನಿಂದ ದೂರವಾಗಿದ್ದಾನೆ ಎಂದು ಆಲೋಚಿಸಬೇಡ. ಅತಿ ನಿಕಟನಾಗಿದ್ದಾನೆ

ಎಂದು ಚಿಂತಿಸು! . . . ಅವನ ಐಶ್ವರ್ಯವನ್ನು ಆರಾಧಿಸಿದರೆ ವಿಗ್ರಹಾರಾಧನೆ ಮಾಡಿದಂತಾಗುವುದಿಲ್ಲವೇ ? ”

ಕೇಶವನು ತಾನು ವಿಗ್ರಹಾರಾಧಕನಲ್ಲವೆಂದೂ ತನ್ನ ದೇವರು ನಿರಾಕಾರನೆಂದೂ ಪ್ರತಿಭಟಿಸಿದನು. ಪರಮಹಂಸರು ಮೆಲ್ಲಗೆ ಹೇಳಿದರು :

“ ದೇವರು ನಿರಾಕಾರನೂ ಹೌದು ; ಸಾಕಾರನೂ ಹೌದು. ವಿಗ್ರಹಗಳೂ ಇತರ ಪ್ರತೀಕಗಳೂ ನೀನು ಆರಾಧಿಸುವ ಈಶ್ವರನ ಗುಣಗಳಷ್ಟೇ ಸತ್ಯ. ಗುಣಗಳ ಆರಾಧನೆಗೂ ವಿಗ್ರಹಗಳ ಆರಾಧನೆಗೂ ಹೆಚ್ಚು ಅಂತರವಿಲ್ಲ. ವಿಗ್ರಹ ಎಂದರೆ ಘನೀಭೂತವಾದ ಗುಣವಲ್ಲದೆ ಬೇರೆಯಲ್ಲ.''

ಇನ್ನೊಂದು ಸಾರಿ ಹೀಗೆಂದರು :

“ ನೀನೇನೊ ಈಶ್ವರನ ಒಂದು ಪಕ್ಷವನ್ನೇ ವಹಿಸಿಕೊಂಡು ಪಕ್ಷಪಾತ ಮಾಡುತ್ತಿದ್ದೀಯೆ. ಆತನನ್ನು ನಾನಾವಿಧವಾಗಿ ಪೂಜಿಸಬೇಕೆಂದು ನನ್ನಾಸೆ. ಕೋಟಿ ವಿಧದಿಂದ ಪೂಜಿಸಿದರೂ ನನಗೆ ತೃಪ್ತಿಯಾಗದು. ಹೂವು ಹಣ್ಣುಗಳನ್ನು ನಿವೇದಿಸಿ, ನಾಮಸಂಕೀರ್ತನೆ ಮಾಡಿ, ಏಕಾಂತದಲ್ಲಿ ಧ್ಯಾನಿಸಿ, ದಿವ್ಯಾನಂದದಲ್ಲಿ ಮುಳುಗಿತೇಲಿ ನಲಿದಾಡಿ ಆತನನ್ನು ಪೂಜಿಸಬೇಕು ಎಂದು ನನ್ನ ಬಯಕೆ. ಈಶ್ವರನು ನಿರಾಕಾರನೆಂದು ನಂಬುವವರೂ ಸಾಕಾರವನ್ನು ಪೂಜಿಸುವವರಂತೆ ಆತನನ್ನು ಹೊಂದುತ್ತಾರೆ. ಮುಖ್ಯವಾಗಿ ಬೇಕಾದುದೆಂದರೆ—ಶ್ರದ್ಧಾ ಭಕ್ತಿ.

“ ನೀರಿಗೇನೋ ರೂಪವಿಲ್ಲ, ನಿಜ. ಆದರೆ ಅದು ಶೈತ್ಯದಿಂದ ಗಡ್ಡೆಗಟ್ಟಿದರೆ ಆಗ ರೂಪವಿದೆ. ಹಾಗೆಯೇ ನಿರಾಕಾರಬ್ರಹ್ಮವು ಸಾಧಕನ ಭಕ್ತಿಯ ಪ್ರಭಾವದಿಂದ ವಿವಿಧರೂಪಗಳನ್ನು ತಾಳುತ್ತದೆ. ಗೊಂಬೆಯ ಹಣ್ಣು ನಿಜವಾದ ಹಣ್ಣನ್ನು ಮನಸ್ಸಿಗೆ ತರುವಂತೆ, ಭಾವಚಿತ್ರವು ತೀರಿಹೋದ ತಂದೆಯ ನೆನಪು ತರುವಂತೆ, ಮೂರ್ತಿಗಳೂ ಪ್ರತೀಕಗಳೂ ಭಕ್ತನಿಗೆ ನಿಜವಾದ ದೇವರ ದರ್ಶನವಾಗಲು ನೇರವಾಗುತ್ತವೆ.''

ಕೇಶವನು ಸಾಯಂಕಾಲದ ಹೊತ್ತು ತನ್ನ ನೌಕೆಯಲ್ಲಿ ದಕ್ಷಿಣೇಶ್ವರಕ್ಕೆ ಬಂದು ಪರಮಹಂಸರನ್ನು ಕರೆದುಕೊಂಡು ಗಂಗಾನದಿಯಲ್ಲಿ ಸಂಚಾರ ಹೋಗುತ್ತಿದ್ದನು. ಆತನೊಡನೆ ಶಿಷ್ಯರೂ ಬರುತ್ತಿದ್ದರು. ಎಲ್ಲರೂ ಪರಮಹಂಸರ ವಚನಗಳನ್ನು ಬಾಯಿಬಿಟ್ಟುಕೊಂಡು ಎವೆಯಿಕ್ಕದೆ ಕೇಳುತ್ತಿದ್ದರು. ಒಂದೊಂದು ಸಾರಿ

ಮುಂದಿಗೆ ದೋಣಿಯೇ ಸಾಕಾಗುತ್ತಿರಲಿಲ್ಲ. ಗುರುದೇವನ ಸಾನ್ನಿಧ್ಯ, ತೇಜಸ್ಸು, ಮಧುರವಾಣಿ, ಮುಗ್ಧನಯನ ದೃಷ್ಟಿ, ಮರುಳು ಮಾಡುವ ಮುಗುಳ್ನಗೆ, ಪ್ರೌಢ ವಾಕ್ಯ ಸರಣಿ—ಇವುಗಳ ಜೇನಿನಲ್ಲಿ ಜನರು ಮೈಮರೆತು ಮುಳುಗುತ್ತಿದ್ದರು.

ಒಂದು ಸಂಜೆ ನೌಕಾಯಾತ್ರೆಯಲ್ಲಿ ಪರಮಹಂಸರು ಅದು ಇದು ಮಾತಾಡುತ್ತ ನಿರಾಕಾರಬ್ರಹ್ಮದ ವಿಷಯಕ್ಕ ಬಂದರು. ಎರಡು-ಮೂರು ಸಾರಿ 'ನಿರಾಕಾರ', 'ನಿರಾಕಾರ' ಎಂದು ನುಡಿದು ಸಮಾಧಿಸ್ಥರಾದರು. "ಮೊದಲು ದೇಹವು ಸಡಿಲವಾದಂತೆ ತೋರಿ ಕಡೆಗೆ ನಿಷ್ಪಂದ ಸ್ಥಿರವಾಯಿತು. ಅಂಗೋಪಾಂಗಗಳಲ್ಲಿ ಎಲ್ಲಿಯೂ ಯಾವ ಚಲನೆಯೂ ಕಂಡುಬರಲಿಲ್ಲ. ಕೈಗಳೆರಡೂ ತೊಡೆಯ ಮೇಲೆ ಮಲಗಿದ್ದುವು; ಬೆರಳು ನಸು ಹೆಣೆದುಕೊಂಡಿದ್ದುವು. ದೇಹವು ಸಂಪೂರ್ಣ ಅಚಲವಾಗಿದ್ದರೂ ಪದ್ಮಾಸನವು ಸುಲಭವಾಗಿತ್ತು. ಮುಖಮಂಡಲವು ಸ್ವಲ್ಪ ಊರ್ಧ್ವ ಮುಖವಾಗಿ ಪ್ರಶಾಂತವಾಗಿತ್ತು. ಕಣ್ಣುಗಳು ಮುಚ್ಚಿದಂತೆ ಕಂಡರೂ ನಸುಬಿಟ್ಟಿದ್ದುವು. ದೃಷ್ಟಿ ಅತ್ತಿತ್ತ ಅಲುಗದೆ ಸ್ಥಿರವಾಗಿತ್ತು. ತುಟಿಗಳು ಬಂದಿನಿತು ತೆರೆದುಕೊಂಡು ಯಾವುದೋ ಅನಿರ್ವಚನೀಯ ಆನಂದದಿಂದ ಮಂದಸ್ಮಿತವಾದಂತಿದ್ದುವು. ಧವಳ ದಂತಪಂಕ್ತಿ ಸ್ವಲ್ಪ ತೋರುತಿತ್ತು. ಯಾವ ಭಾವಚಿತ್ರವೂ ಪ್ರತಿಬಿಂಬಿಸಲರಿಯದ ಕಮನೀಯತೆ ಆ ವಿಸ್ಮಿತ ಸ್ಮಿತದಲ್ಲಿ ರಂಜಿಸಿತ್ತು." ಉಳಿದವರೆಲ್ಲರೂ ಭಗವನ್ನಾಮಸಂಕೀರ್ತನೆ ಮಾಡಿದರು. "ಕಣ್ಣು ತೆರೆದು ಎಲ್ಲಿಯೋ ಇದ್ದಂತೆ ಬೆರಗಾಗಿ ನೋಡಿದರು. ಕೀರ್ತನೆ ನಿಂತಿತು. ಪರಮಹಂಸರು ನಮ್ಮನ್ನೆಲ್ಲ ನೋಡಿ 'ಯಾರಿವರು?' ಎಂದರು. ತರುವಾಯ ತಮ್ಮ ನೆತ್ತಿಯನ್ನು ತಾವೇ ತಟ್ಟಿಕೊಳ್ಳುತ್ತ 'ಕೆಳಗಿಳಿ! ಕೆಳಗಿಳಿ!' ಎಂದುಕೊಂಡರು. ಸ್ವಲ್ಪ ಹೊತ್ತಾದ ಮೇಲೆ ಬಾಹ್ಯಪ್ರಜ್ಞೆ ಯುಂಟಾಗಿ ಕಾಳಿಯನ್ನು ಕುರಿತು ನವಿದನಿಯಲ್ಲಿ ಒಂದು ಕೀರ್ತನೆ ಹಾಡಿದರು."

ಕಡೆಗೆ ಹೇಳಿದರು:

"ಜಗತ್ತು ಮಾತೆಯ ಲೀಲೆ. ಹಾರಾಡುವ ಸಾವಿರಾರು ಗಾಳಿಪಟಗಳಲ್ಲಿ ಒಂದೆರಡನ್ನು ದಾರ ಕಡಿದುಬಿಡುವುದೂ ಆಕೆಯ ಲೀಲೆ. ಕಣ್ಣು ಮಿಟುಕಿಸಿ ಹೇಳುತ್ತಾಳೆ ಮನುಷ್ಯನಿಗೆ: 'ಹೋಗು, ಸಂಸಾರಮಾಡು; ನಾನು ಬೇರೆ ಕೆಲಸ ಹೇಳುವವರೆಗೆ ಅದನ್ನು ಮಾಡು'—ಕೇಶವಾ, ನೀನು ಸಂಸಾರದಲ್ಲಿದ್ದೀಯೆ.

ಇರು ಅಲ್ಲಿಯೇ! ಅದನ್ನು ಬಿಡಲು ನಿನಗೆ ಹಕ್ಕಿಲ್ಲ. ನೀನು ಏನಾಗಿದ್ದೀಯೋ
ಅದೇ ಲೇಸು; ತುಸು ಹಿತ್ತಾಳೆ ಮಿಶ್ರವಾದ ಹೊನ್ನು! . . . ಪಗಡೆ ಆಡುವು
ದಿಲ್ಲವೇ ಕಾಯಿಗಳೆಲ್ಲ ಹಣ್ಣಾಗುವ ವರೆಗೆ? ನನ್ನ ಕಾಯಿಗಳೆಲ್ಲ ಹಣ್ಣಾಗಿವೆ.
ನನ್ನಾಟ ಪೂರೈಸಿದೆ. ಆದರೆ ನೀವೆಲ್ಲ ಜಾಣರು. ಎಲ್ಲ ಕಾಯಿಗಳನ್ನೂ ಹಣ್ಣಿನ
ಮನೆಗೆ ಸೇರಿಸಿಲ್ಲ. ಆದ್ದರಿಂದ ಇನ್ನೂ ಆಡಬಹುದು. . . . ನಿಜವಾಗಿ ನೋಡಿ
ದರೆ, ಸಂಸಾರದಲ್ಲಿ ಇದ್ದರೆ ತಾನೆ ಏನು? ಈಶ್ವರ ಚಿಂತೆ ಇದ್ದರಾಯಿತು.''

ಶ್ರೀರಾಮಕೃಷ್ಣರು ಇಂತಹ ನೂರಾರು ಹಿತವಚನಗಳಿಂದ ಯುಕ್ತಿವಾದ
ವೆಂಬ ಕುಳಿಗಾಳಿಯಲ್ಲಿ ಮರವಟ್ಟುಹೋಗಿದ್ದ ಕೇಶವನ ಮತ್ತು ಆತನ ಅನು
ಯಾಯಿಗಳ ಅಂಗೋಪಾಂಗಗಳಿಗೆ ನೆಕೆಕೊಟ್ಟು ಅವುಗಳಲ್ಲಿ ಚೇತನ ಸಂಚಾರ
ವಾಗಿ ಸಜೀವವಾಗುವಂತೆ ಮಾಡಿದರು. ಕೇವಲ ವಾದನಿರತರಾಗಿದ್ದ ಅವರನ್ನು
ಸ್ಮೃತಿವಿಭ್ರಮಕಾರಿಯಾದ ಶಬ್ದಜಾಲ ಮಹಾರಣ್ಯದಿಂದ ಹೊರಗೆ ತಂದರು.
ರಾಮ, ಕೃಷ್ಣ, ಬುದ್ಧ, ಯೇಸು, ಚೈತನ್ಯ ಎಲ್ಲರೂ ಅಭಿನ್ನ ವಿಶ್ವಶಕ್ತಿಯ
ಭಿನ್ನರೂಪಗಳೆಂದು ಮನಗಾಣಿಸಿದರು. ಕೇಶವಚಂದ್ರಸೇನನಂತೂ ತನ್ನ ಅಂತ್ಯ
ಕಾಲದಲ್ಲಿ ಸಂಪೂರ್ಣವಾಗಿ ವ್ಯತ್ಯಾಸಹೊಂದಿದ್ದನು. ಪರಮಹಂಸರ ಜಗ
ನ್ಮಾತೆ ಅವನನ್ನು ನುಂಗಿಬಿಟ್ಟಿದ್ದಳು. ಕೇಶವನು ರೋಗಶಯ್ಯೆಯಲ್ಲಿ ಮೃತ್ಯು
ಮುಖನಾಗಿದ್ದಾಗ ಪರಮಹಂಸರು ಅವನನ್ನು ನೋಡಲು ಹೋದರು. "ಆಚಾ
ರ್ಯನು ಯಾವಾಗಲೂ ಜಗನ್ಮಾತೆಯ ಹತ್ತಿರ ಏನೇನೋ ಮಾತಾಡುತ್ತಿರು
ತ್ತಾನೆ" ಎಂದು ಹೇಳಿದ ಅನುಯಾಯಿಗಳ ಮಾತುಕೇಳಿ ಪರಮಹಂಸರು ಆನಂದ
ನಿಮಗ್ನರಾದರು. ತರುವಾಯ ಜರುಗಿದ ಹೃದಯ ವಿದ್ರಾವಕವಾದ ದೃಶ್ಯವು
ಕೇಶವ ಪರಮಹಂಸರ ಸಂಬಂಧದಲ್ಲಿ ಒಂದು ಅನರ್ಘ್ಯರತ್ನದಂತಿದೆ. ಶ್ರೀರಾಮ
ಕೃಷ್ಣರು ಕೇಶವನ ರುಗ್ಣಶಯ್ಯೆಯಿದ್ದ ಕೊಟಡಿಗೆ ಹೋದರು. ಮೃತ್ಯುಮುಖ
ನಾದ ಕೇಶವಚಂದ್ರನು ಅತಿ ದಾರುಣವಾಗಿ ಕೆಮ್ಮುತ್ತ ಕೆಮ್ಮುತ್ತ ಏಳಲಾರದೆ
ಎದ್ದು ಗೋಡೆಯನ್ನು ಆತುಕೊಳ್ಳುತ್ತ ತೂಗಿ ತೊನೆದು ತತ್ತರಿಸುತ್ತ ಬಂದು ಗುರು
ದೇವನ ಚರಣತಲದಲ್ಲಿ ಮಣಿದು ಉರುಳಿಬಿಟ್ಟನು. ಗುರುದೇವನು ಇನ್ನೂ ಭಾವ
ದಲ್ಲಿಯೇ ಇದ್ದನು; ತನ್ನೊಳಗೆ ತಾನೇ ಏನನ್ನೋ ಹೇಳಿಕೊಳ್ಳುತ್ತಿದ್ದನು. ರೋಗ
ಸಂತಪ್ತನಾದ ಕೇಶವನು ಮೌನವಾಗಿ ಆ ದೇವಮಾನವನ ಸುಖಶೀತಲವಚನಾ

ಮೃತವನ್ನು ಪಾನಮಾಡಿದನು. ಸ್ವಲ್ಪ ಹೊತ್ತಿನಲ್ಲಿ ಪರಮಹಂಸರು ಎಚ್ಚತ್ತು ಸುತ್ತಲೂ ಕಣ್ಣು ತಿರುಗಿಸಿ ಅಲಂಕೃತವಾಗಿದ್ದ ಸುಂದರ ಮಂದಿರವನ್ನು ನೋಡಿ ಮುಗುಳುನಗೆ ನಕ್ಕು, ತಮ್ಮಲ್ಲಿಯೇ "ಹೌದು, ಆಗ ಇವೆಲ್ಲ ಬೇಕಾಗಿತ್ತು; ಈಗ ಅವುಗಳಿಂದ ಏನೂ ಉಪಯೋಗವಿಲ್ಲ . . . . ತಾಯಿ, ನೀನೂ ಇಲ್ಲಿಗೆ ಬಂದಿರುವೆ ಯೇನು? ನಿನ್ನದೆಂತಹ ಭುವನಮೋಹನ ಮೂರ್ತಿ! . . ." ಎನ್ನುತ್ತಿರಲು, ಕೇಶವನು ನಮಸ್ಕರಿಸಿ "ನಾನಿಲ್ಲಿಯೇ ಇದ್ದೇನೆ." ಎಂದನು. ಪರಮಹಂಸರು ಆತನ ಹೃದಯದಲ್ಲಿ ನಿಗೂಢವಾಗಿದ್ದ ಪ್ರಚ್ಛನ್ನ ತುಮುಲತೆಯನ್ನು ನಿಮಿಷಾರ್ಧ ದಲ್ಲಿ ತಿಳಿದುಕೊಂಡು ಮೃದುವಾಗಿ ಹೇಳಿದರು:

"ನಿನಗೆ ಕಾಯಿಲೆಯಾಗಿದೆ. ಅದು ಸುಮ್ಮನೆ ಬಂದಿಲ್ಲ. ನಿನ್ನ ಶರೀರವು ಈಶ್ವರಪ್ರೇಮದ ಪ್ರಚಂಡತರಂಗಗಳಿಂದ ತಾಡಿತವಾಗಿದೆ. ನಿನ್ನ ಭಾವತೀಕ್ಷ್ಣ ತೆಗೆ ನಿನಗೆ ಬಂದಿರುವ ರೋಗವೇ ಸಾಕ್ಷಿ. ಭಾವಾವೇಗದಿಂದ ಶರೀರಕ್ಕೆ ಎಷ್ಟು ಅಪಾಯವಾಗುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಗಂಗಾನದಿಯಲ್ಲಿ ಒಂದು ನಾವೆ ಹೋದರೆ ಆಗ ಏನೂ ಗೊತ್ತಾಗುವುದಿಲ್ಲ. ತುಸು ಹೊತ್ತಿನ ಮೇಲೆ ಅಲೆ ದಡವನ್ನು ಅಪ್ಪಳಿಸುತ್ತದೆ, ಕೊರೆದು ಕೆಡಹುತ್ತದೆ. ಈಶ್ವರ ಭಕ್ತಿಯ ಬೆಂಕಿ ಬಿದ್ದಿತೆಂದರೆ ಮೊದಲು ರಾಗದ್ವೇಷಗಳನ್ನು ಸುಡುತ್ತದೆ, ಆ ಮೇಲೆ ಅಹಂಕಾರವನ್ನು ದಹಿಸುತ್ತದೆ, ಕಡೆಗೆ ನಶ್ವರ ಶರೀರವನ್ನೇ ಭಸ್ಮಮಾಡಿಬಿಡು ತ್ತದೆ. . . . ನಿನ್ನ ರುಜೆಯಿನ್ನೂ ಕೊನೆಗಂಡಿಲ್ಲ. . . . ರೋಗ ಗುಣವಾದ ಮೇಲೆಯೇ ವೈದ್ಯನು ನಿನ್ನನ್ನು ಹೊರಗೆ ಬಿಡುತ್ತಾನೆ. ಆಸ್ಪತ್ರೆಗೆ ಸೇರಿದ ಮೇಲೆ ಹೊರಗೆ ಬರಲು ರೋಗಿಯ ಇಚ್ಛೆಯಿಲ್ಲ. ರೋಗವು ಸಂಪೂರ್ಣ ಗುಣಹೊಂದಿದ ಮೇಲೆಯೇ ರೋಗಿಗೆ ಮುಕ್ತಿ. . . . ತೋಟಗಾರನು ಗುಲಾಬಿ ಗಿಡದ ಬುಡ ವನ್ನು ಅಗೆಯುತ್ತಾನೆ ಬೇರಿಗೆ ಇಬ್ಬನಿ ಬೀಳಲಿ ಎಂದು. ನಿನ್ನ ವಿಷಯವೂ ಹಾಗೆಯೇ ಎಂದು ಕಾಣುತ್ತದೆ."

ಕೇಶವನು ರೋಗದ ಯಾತನೆಯನ್ನು ಮರೆತು ಸಂತೋಷಚಿತ್ತನಾದನು. ಗುರುದೇವನ ವಚನಾಮೃತ ಮತ್ತು ಮಂದಸ್ಮಿತಗಳ ಮಾಯಾಮಯ ಗಾಂಭೀ ರ್ಯವು ಮಂದಿರವನ್ನೆಲ್ಲ ಬೆಳಗಿತ್ತು.

ಪರಮಹಂಸರು ಮತ್ತೆ ಹೇಳಿದರು—

"ನಿನಗೆ ಕಾಯಿಲೆಯಾದಾಗಲೆಲ್ಲ ನಾನು ಉದ್ವಿಗ್ನನಾಗುತ್ತೇನೆ. ಹಿಂದೊಂದು ಸಾರಿ ನೀನು ಕಾಯಿಲೆ ಬಿದ್ದಾಗ ನಾನು ಕಂಬನಿಗರೆದು ಮಾತೆಯನ್ನು ಕುರಿತು 'ಅಮ್ಮಾ, ನಾನು ಇನ್ನಾರೊಡನೆ ಮಾತಾಡಲಿ ಕೇಶವನಿಗೆ ಏನಾದರೂ ಕೇಡಾದರೆ?' ಎಂದು ಅಳುತ್ತಿದ್ದೆ."

ಬೀಳ್ಕೊಳ್ಳುವಾಗ ಗುರುದೇವನು ಆಚಾರ್ಯನನ್ನು ಕುರಿತು ಗಂಭೀರ ವಾಣಿಯಿಂದ "ಹೆಂಗಸರು ಮಕ್ಕಳೊಡನೆ ಹೆಚ್ಚಾಗಿರಬೇಡ, ರೋಗವಿನ್ನೂ ಪ್ರಬಲವಾಗುತ್ತದೆ. ಈಶ್ವರ ವಿಷಯಕವಾದ ಮಾತುಕತೆಗಳನ್ನೇ ಕೇಳುತ್ತಿರು; ಅದರಿಂದ ಒಳ್ಳೆಯದಾಗುತ್ತದೆ." ಎಂದು ಬುದ್ಧಿ ಹೇಳಿದರು. ಇಹಲೋಕವನ್ನು ಬಿಟ್ಟುಹೋಗುವ ಸಮಯದಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಸಾನ್ನಿಧ್ಯ ಸಂವಾದ ಸದುಪದೇಶಗಳು ಲಭಿಸಿದುದೇ ಶ್ರೀಯುತ ಕೇಶವ ಚಂದ್ರಸೇನನ ಗಾಢ ಭಕ್ತಿಗೆ ದೊಡ್ಡ ಸಾಕ್ಷಿಯಲ್ಲವೇ?

ಕೇಶವನಲ್ಲದೆ ಇತರ ಬ್ರಾಹ್ಮ ಸಮಾಜಿಗಳೂ ಪರಮಹಂಸರಲ್ಲಿಗೆ ಬಂದು ಅವರ ಪುಣ್ಯಸಂಗದಿಂದ ಕೃತಾರ್ಥರಾದರು. ಅವರಲ್ಲಿ ಮುಖ್ಯರಾದವರೆಂದರೆ—ಪ್ರತಾಪ ಚಂದ್ರ ಮುಜುಮದಾರ, ವಿಜಯಕೃಷ್ಣಗೋಸ್ವಾಮಿ, ಪಂಡಿತ ಶಿವನಾಥಶಾಸ್ತ್ರಿ, ತ್ರೈಲೋಕ್ಯನಾಥ ಸಂನ್ಯಾಲ.

ಪ್ರತಾಪಚಂದ್ರನು ಪಾಶ್ಚಾತ್ಯದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಓದಿ ಕೃತವಿದ್ಯನಾಗಿದ್ದನು. ಯುಕ್ತಿವಾದಿಯಾಗಿದ್ದ ಆತನು ಭಕ್ತಿಯನ್ನು ಸಂಯಮ ಹೀನ ಭಾವೋನ್ಮಾದವೆಂದು ಪರಿಗಣಿಸಿ ಹೇಸಿದ್ದನು. ಆದರೆ ಶ್ರೀರಾಮಕೃಷ್ಣರ ಸಂಸರ್ಗದಿಂದ ಆತನ ಅಭಿಪ್ರಾಯಗಳೆಲ್ಲವೂ ವ್ಯತ್ಯಾಸಹೊಂದಿದುವು. ಆತನಿಗೆ ಗುರುದೇವನಲ್ಲಿದ್ದ ಗೌರವವು ಆರಾಧನೆಗೆ ಸಮನಾಗಿತ್ತು. ಶ್ರೀರಾಮಕೃಷ್ಣರ ವಿಷಯಕವಾದ ತನ್ನ ಅನುಭವಗಳನ್ನು ಭಾವಪೂರ್ಣವಾದ ಉದ್ದಾಮ ಭಾಷೆಯಲ್ಲಿ ಲೇಖನವಾಗಿ ಬರೆದು ಇಂಗ್ಲಿಷ್ ಮಾಸಪತ್ರಿಕೆಯೊಂದರಲ್ಲಿ ಪ್ರಕಟಿಸಿದನು.

ವಿಜಯಕೃಷ್ಣಗೋಸ್ವಾಮಿ ಸಂಪ್ರದಾಯ ಬ್ರಾಹ್ಮಣಕುಲದಲ್ಲಿ ಬೆಳೆದವನು. ಚಿಕ್ಕಂದಿನಲ್ಲಿಯೆ ಆತನಿಗೆ ಧರ್ಮತೃಷ್ಣೆಯುಂಟಾಗಿ ಮಹರ್ಷಿ ದೇವೇಂದ್ರನಾಥ ಠಾಕೂರನ ಪ್ರೇರಣೆಯಿಂದ ಬ್ರಾಹ್ಮಸಮಾಜಕ್ಕೆ ಸೇರಿದನು. ಆತನ ಮೇಲೆ ಕೇಶವಚಂದ್ರಸೇನನ ಪ್ರಭಾವವೂ ಚೆನ್ನಾಗಿತ್ತು. ಕಡೆಗೆ ಕೇಶವನ ಅನುಯಾಯಿ

ಯಾದನು. ಕೇಶವನಿಗೂ ಆತನಿಗೂ ಭಿನ್ನಾಭಿಪ್ರಾಯಗಳುಂಟಾಗಿ ವಿಜಯ ಕೃಷ್ಣನು ಬೇರೊಂದು ಬ್ರಾಹ್ಮಸಮಾಜವನ್ನು ಸ್ಥಾಪಿಸಿ ತಾನು ಅಧ್ಯಕ್ಷನಾದನು. ಪರಮಹಂಸರನ್ನು ಕಂಡ ಮೇಲೆ ಆತನ ಬ್ರಾಹ್ಮಭಾವನೆಗಳೆಲ್ಲವೂ ರೂಪಾಂತರ ಹೊಂದಿದುವು. ಆದ್ದರಿಂದ ಬ್ರಾಹ್ಮಸಮಾಜವನ್ನೇ ತ್ಯಜಿಸಿ ಸ್ವತಂತ್ರವಾಗಿ ಧರ್ಮಸಾಧನೆಗೆ ಕೈಹಾಕಿದನು. ಪರಮಹಂಸರಲ್ಲಿ ಆತನ ಪೂಜ್ಯಬುದ್ಧಿ ಬೆಳೆದು ಒಂದು ಕಟ್ಟಕಡೆಗೆ ಅವರ ಭಕ್ತನಾದನು.

ವಿಜಯಕೃಷ್ಣಗೋಸ್ವಾಮಿ ಅಧ್ಯಕ್ಷಪದವಿಗೆ ರಾಜಿನಾಮೆಕೊಡಲು ಪಂಡಿತ ಶಿವನಾಥಶಾಸ್ತ್ರಿ ಪಟ್ಟವೇರಿದನು. ಶಾಸ್ತ್ರಿ ಪಾಶ್ಚಾತ್ಯವಿದ್ಯೆ ಸಂಸ್ಕೃತಿ ಗಳಲ್ಲಿ ಪ್ರವೀಣನಾಗಿದ್ದು ಅದರ ಆರಾಧಕನಾಗಿದ್ದನು. ವಿಚಾರದ ಹೆಸರಿನಲ್ಲಿ ಅರ್ಧಸಂದೇಹವಾದಿಯಾಗಿದ್ದನು. ಈಶ್ವರಸಾಕ್ಷಾತ್ಕಾರಕ್ಕೆ ವೈರಾಗ್ಯವು ಅನಾವಶ್ಯಕವೆಂದು ಆತನ ಮತವಿತ್ತು. ಒಂದು ಸಾರಿ ಪರಮಹಂಸರಲ್ಲಿ ಈ ವಿಚಾರವನ್ನು ವಾದಿಸಿ ಸಾಧಿಸುತ್ತಿರಲು ಅವರೆಂದರು: "ತೋಟಗಾರನು ಒಂದು ಗಿಡವನ್ನು ನೆಡುವನೆಂದು ಊಹಿಸು. ಅವನೇನು ಮಾಡುತ್ತಾನೆ? ದನಗಳು ಅದನ್ನು ಹಾಳುಮಾಡದಂತೆ ಸುತ್ತಲೂ ಬೇಲಿ ಕಟ್ಟುವುದಿಲ್ಲವೇ? ಗಿಡ ಮರ ವಾದ ಮೇಲೆ ದನಗಳು ಅದನ್ನೇನೂ ಮಾಡಲಾರವೆಂದು ತಿಳಿದು ಬೇಲಿಯನ್ನು ಕಿತ್ತೊಗೆಯುತ್ತಾನೆ. ಧರ್ಮಜೀವನವೃಕ್ಷದ ರಕ್ಷಣೆಯೂ ಹಾಗೆಯೇ. ಮೊದಲು ಮೊದಲು ಕಾಮಿನಿಯರಿಂದ ದೂರವಾಗಿರಬೇಕು. ಧರ್ಮದ ಗಿಡ ಚೆನ್ನಾಗಿ ಬೆಳೆದು ಮರವಾಗಿ ಬಲಿಷ್ಠವಾದ ಮೇಲೆ ಕಾಮಿನಿಯರೊಡನೆ ಇದ್ದರೂ ಅಪಾಯವಿಲ್ಲ." ಇನ್ನೊಂದು ಸಾರಿ ಶಾಸ್ತ್ರಿ ಪರಮಹಂಸರ ಸಮಾಧಿ ಒಂದು ವಿಧವಾದ ಮೂರ್ಛೆಯಲ್ಲದೆ ಬೇರೆ ಏನೂ ಅಲ್ಲ; ಅದೊಂದು ನರಗಳ ಜಾಡ್ಯ ಎನ್ನಲು ಶ್ರೀರಾಮಕೃಷ್ಣರು ತಲೆಯಲ್ಲಾಡಿಸಿ, "ಅಲ್ಲವಯ್ಯಾ, ಶಿವನಾಥ, ನೀನು ಹಗಲಿರುಳೂ ಐಹಿಕ ಜಡವಸ್ತುಗಳನ್ನೇ ಕುರಿತು ಧ್ಯಾನಮಾಡುತ್ತೀಯೆ; ನಾನಾದರೋ ಚಿದ್ಘನರೂಪಿಯಾದ ಬ್ರಹ್ಮಧ್ಯಾನಮಾಡುತ್ತೇನೆ. ಆದರೂ ನನ್ನ ಮನೋಭಾವ ಜಾಡ್ಯ, ನಿನ್ನದು ಪರಮಜ್ಞಾನ! ಆಹ, ಎಂತಹ ತರ್ಕ ಚೂಡಾಮಣಿ!" ಎಂದರು. ಶಾಸ್ತ್ರಿ ನಿರುತ್ತರನಾದನು. ಆತನು ಕ್ರಮೇಣ ಸರಿಹೋದನು. ಪರಮಹಂಸರ ಅಪ್ರತಿಮ ಜ್ಞಾನ ಭಕ್ತಿವೈರಾಗ್ಯಗಳು ಆತನ

ವಕ್ರತೆಯನ್ನು ತಿದ್ದಿದುವು. ಆತನು ಹೀಗೆ ಬರೆದಿದ್ದಾನೆ: “ಅಂತಹ ಬೇರೊಬ್ಬ ವ್ಯಕ್ತಿಯನ್ನು ನಾನು ಎಲ್ಲೆಲ್ಲಿಯೂ ಕಂಡಿಲ್ಲ. ಆತನ ಈಶ್ವರದರ್ಶನಾಕಾಂಕ್ಷೆ ನಿರುಪಮವಾದುದು. ಧರ್ಮಕ್ಕಾಗಿ ಆತನು ತಪಸ್ಸುಮಾಡಿದಂತೆ ಮಾಡುವುದು ಇತರರಿಗೆ ಅಸಾಧ್ಯ. ಆತನು ಸಾಧಕಮಾತ್ರನಲ್ಲ, ಸಿದ್ಧಪುರುಷನು. ಆತನಿಗೆ ಸತ್ಯಸಾಕ್ಷಾತ್ಕಾರವಾಗಿರುವುದರಲ್ಲಿ ಲೇಶಮಾತ್ರವೂ ಸಂದೇಹವಿಲ್ಲ. ಆತನ ಸಾನ್ನಿಧ್ಯದಲ್ಲಿ ನನಗೆ ಧರ್ಮಜ್ಯೋತಿ ಲಭಿಸಿತು. ನಾನಾತನಿಗೆ ಚಿರಋಣಿ. ನನ್ನ ಜೀವಮಾನದಲ್ಲಿ ನನಗೆ ಅಂತಹ ಮತ್ತೊಬ್ಬ ದೇವಮಾನವನ ದರ್ಶನವಾಗಿಲ್ಲ ಎಂದು ಮುಕ್ತಕಂಠದಿಂದ ಸಾರುತ್ತೇನೆ.”

ತ್ರೈಲೋಕ್ಯನಾಥ ಸಂನ್ಯಾಲನು ಬ್ರಾಹ್ಮಸಮಾಜದ ಗಾಯಕ ಕವಿ. ಆತನ ಅನೇಕ ಕೀರ್ತನೆಗಳು ಪರಮಹಂಸರಿಂದ ಪ್ರೇರಿತವಾದುವು. ಆತನೂ ಇತರ ಬ್ರಾಹ್ಮಸಮಾಜಿಗಳಂತೆ ವೈರಾಗ್ಯದ್ವೇಷಿಯಾಗಿದ್ದನು. ಅವತಾರಗಳಲ್ಲಿ ನಂಬುಗೆ ಯಿರಲಿಲ್ಲ. ಒಂದು ದಿನ ಪರಮಹಂಸರು “ಬ್ರಹ್ಮಾನಂದದ ರುಚಿ ದೊರಕಿತೆಂದರೆ ಐಹಿಕ ಭೋಗಾಭಿಲಾಷೆ ಜಾರಿ ಬೀಳುತ್ತದೆ. ಕಾಶ್ಮೀರದ ಶಾಲು ಸಿಕ್ಕಿದರೆ ಸಾಧಾರಣ ಧೋತ್ರ ಬೇಡವಾಗುತ್ತದೆ.” ಎಂದರು.

ತ್ರೈಲೋಕ್ಯನು—ಸಾಧುಗಳ ಮಾತಾಯಿತು! ಸಂಸಾರಿಗಳ ವಿಚಾರ?

ಪರಮಹಂಸರು—ನೀನು ಹೇಳುವುದೇನು? ಅದು ದೊರಕಿತೆಂದರೆ ನಿನ್ನಂತಹರಿಗೂ ಐಹಿಕವು ಬೇಡವಾಗುತ್ತದೆ. . . . ಇಂದ್ರಿಯಸುಖವು ಆತ್ಮಾನಂದದ ಛಾಯೆಯ ಛಾಯೆ. . . . ಚಾತಕಪಕ್ಷಿಗೆ ಮುಗಿಲಹನಿಯೇ ಅಮೃತ; ಸಮುದ್ರವೂ ಅದರ ಭಾಗಕ್ಕೆ ಕೆಸರಿನಂತೆ. . . . ಭೋಗಯೋಗಗಳ ಸಮನ್ವಯವಂತೆ! ಸ್ವಲ್ಪ ಸಾರಾಯಿ ಕುಡಿದವನು ವಸ್ತುಗಳನ್ನು ಇದ್ದಂತೆ ನೋಡಲು ಬಯಸುತ್ತಾನೆ. ಚೆನ್ನಾಗಿ ಕುಡಿದು ನೆತ್ತಿಗೇರಿತೆಂದರೆ ಏನೂ ಆಗುವುದಿಲ್ಲ.”

ತ್ರೈಲೋಕ್ಯನು—ಸಂಸಾರಿಯಾದವನು ದಾನಧರ್ಮಮಾಡಬೇಕಾದರೆ ಧನ ಸಂಗ್ರಹಮಾಡುವುದು ಬೇಡವೇ?

ಪರಮಹಂಸರು—ಏನೆಂದೆ! ಮೊದಲು ಧನಸಂಗ್ರಹ, ಆ ಮೇಲೆ ದೇವರೋ? ಆಹ, ಏನು ಧರ್ಮವೋ ಏನು ದಾನವೋ! ನೋಡಿದರೆ ಸಾಕು! ಮಗಳ ಮದುವೆಗೆ ಸಾವಿರಾರು ರೂಪಾಯಿ ಚೆಲ್ಲುತ್ತಾರೆ. ನೆರೆಹೊರೆಯವರಿಗೆ ಹೊಟ್ಟೆಗಿಲ್ಲವೋ

ಎಂದೂ ವಿಚಾರಿಸುವುದಿಲ್ಲ. ಒಂದು ಕಾಸು ಬಿಚ್ಚಬೇಕಾದರೂ ಹಿಂದೆ ಮುಂದೆ ನೋಡುತ್ತಾರೆ! ಯಾರು ಸತ್ತರೇನು? ನಾನೂ ನನ್ನ ಹೆಂಡತಿಮಕ್ಕಳೂ ಸಮೃದ್ಧಿಯಾಗಿದ್ದರಾಯಿತು! ಇದೇ ಅಲ್ಲವೇ ನೀವೆಲ್ಲ ಮಾತಾಡುವ ದಾನ, ಧರ್ಮ, ಕರುಣೆ ಎಲ್ಲ?

ಬ್ರಾಹ್ಮಸಮಾಜಿಗಳು ಅವತಾರವಾದಕ್ಕೆ ವಿರೋಧಿಗಳಾಗಿದ್ದರು. ಅನಂತನೂ ನಿರಾಕಾರನೂ ಸಮಸ್ತ ಬ್ರಹ್ಮಾಂಡವ್ಯಾಪಿಯೂ ಆದ ಭಗವಂತನು ಸಾಂತವೂ ಸಾಕಾರವೂ ಶರೀರಗತವೂ ಆಗಿ ಮನುಷ್ಯರೂಪದಲ್ಲಿ ಅವತರಿಸುವುದು ಹೇಗೆ? ಎಂದು ಅವರ ಪ್ರಶ್ನೆ. ಅವರ ಭಗವಂತನು ಸರ್ವಶಕ್ತನಾದರೂ ಮನುಷ್ಯ ಶರೀರ ಧಾರಣೆಮಾಡಿ ಭೂಮಿಗೆ ಬರುವಷ್ಟು ಶಕ್ತನಾಗಿರಲಿಲ್ಲ! ಸರ್ವವ್ಯಾಪಿಯಾದರೂ ಅವನು ಮೂರ್ತಿಗಳಲ್ಲಿ ಇಲ್ಲ! ತ್ರೈಲೋಕ್ಯನು "ಈಶ್ವರನು ತನ್ನ ಭಕ್ತರಲ್ಲಿ ವ್ಯಕ್ತವಾಗುತ್ತಾನೆಯೇ ಹೊರತು ತಾನೇ ಬರುವುದಿಲ್ಲ. ಮಾನವನು ಎಂತಹ ಮಹಾತ್ಮನಾದರೂ ಅನಂತ ಶಕ್ತಿಗೆ ಆಗರವಾಗಲಾರನು." ಎಂದು ವಾದ ಹೂಡಿದನು.

ಪರಮಹಂಸರು—ಅನಂತದ ವಿಷಯ ಈಗೇಕೆ? ನಾನು ನಿನ್ನನ್ನು ಮುಟ್ಟಬೇಕಾದರೆ ನಿನ್ನ ದೇಹವನ್ನೆಲ್ಲ ಮುಟ್ಟಬೇಕೆ? ನಾನು ಗಂಗೆಯಲ್ಲಿ ಸ್ನಾನಮಾಡಬೇಕಾದರೆ ಹರಿದ್ವಾರದಿಂದ ಸಾಗರದ್ವೀಪದ ವರೆಗೂ ಹೊಳೆಯಲ್ಲಿ ಮುಳುಗಿ ಮುಳುಗಿ ಮಿಂಡಾಯಬೇಕೆ? 'ನಾನು' ಇರುವವರೆಗೆ ದ್ವೈತವಿರುತ್ತದೆ. ಕೇವಲ ಸಚ್ಚಿದಾನಂದವು ಒಂದು ಸಮುದ್ರ. ಆದರಲ್ಲಿ 'ನಾನು' ಎಂಬ ಹೂಜಿಯಿದೆ. ಹೂಜಿ ಇರುವ ವರೆಗೆ ನೀರೂ ಭಿನ್ನವಾಗಿರುವಂತೆ ತೋರುತ್ತದೆ—ಹೂಜಿಯ ಒಳಗಿನ ನೀರು, ಹೊರಗಿನ ನೀರು. ಹೂಜಿ ಒಡೆಯಿತೆಂದರೆ ಅಖಂಡಜಲರಾಶಿ—ಅದನ್ನು ಹೀಗೇ ಎಂದು ಹೇಳಲಾಗುವುದಿಲ್ಲ. ಯಾರುತಾನೆ ಹೇಳಿಯಾರು?—ನೀನೀಗಾಗಲೇ ಬ್ರಹ್ಮಾನಂದದಲ್ಲಿರುವೆ, ಅಲ್ಲವೇ?

ತ್ರೈಲೋಕ್ಯನು—ಇಲ್ಲ, ಸ್ವಾಮಿ. ಇಲ್ಲಿಂದ ಹೋದಕೂಡಲೆ ಮೊದಲಿದ್ದಂತೆಯೇ ಆಗಿಬಿಡುತ್ತೇನೆ. ಈಗೇನೋ ಸನ್ಮತಿಯಾಗಿದ್ದೇನೆ.

ಪರಮಹಂಸರು—ಮೆಟ್ಟಿದ್ದರೆ ಕಾಲಿಗೆ ಮುಳ್ಳಿನ ಭಯವಿಲ್ಲ. ಈಶ್ವರ

ನೊಬ್ಬನೇ ಸತ್ಯ ; ಉಳಿದುದೆಲ್ಲವೂ ಮಿಥ್ಯೆ ಎಂಬ ಬುದ್ಧಿ ಸ್ಥಿರವಾಗಿದ್ದರೆ ಕಾಮಿನಿ ಕಾಂಚನಗಳಿಂದಲೂ ಅಪಾಯವಿಲ್ಲ.

ಮನುಷ್ಯರನ್ನು ಮಾರ್ಗಕ್ಕೆ ತರುವುದರಲ್ಲಿ ಶ್ರೀರಾಮಕೃಷ್ಣರಿಗೆ ಅಮಾನುಷ ಸಾಮರ್ಥ್ಯವಿತ್ತು. ಹೆಡೆಯೆತ್ತಿ ನಿಂತ ದುರಭಿಮಾನ ಸರ್ಪವು ಅವರ ವಚನಗಳ ಗಾರುಡಮಂತ್ರಕ್ಕೆ ಮಣಿದು ಸಾಧುವಾಗುತ್ತಿತ್ತು. ಯಾರ ಭಾವವನ್ನೂ ನಷ್ಟಮಾಡದೆ, ವಿರೋಧಿಸದೆ, ಅವರವರನ್ನು ಅವರವರ ಭಾವದಿಂದಲೇ ಮೇಲೆತ್ತು ತ್ತಿದ್ದರು. ' ಜ್ಞಾನಿ 'ಗೆ ಭಕ್ತಿಯನ್ನು ಹೇಳಿದರೂ ಅದರಿಂದ ಆತನ ಭಾವಕ್ಕೆ ಭಂಗ ವಾಗುವುದಿಲ್ಲವೆಂದು ತಿಳಿದಿದ್ದರು. ಆದರೆ ' ಭಕ್ತ 'ನಿಗೆ ತಟಕ್ಕನೆ ಜ್ಞಾನವನ್ನು ಹೇಳುತ್ತಿರಲಿಲ್ಲ ; ಏಕೆಂದರೆ, ಜಗತ್ತು ಮಿಥ್ಯೆ ಎಂಬುದು ಅವನಿಗೆ ಭಯಂಕರವಾಗಿ ರುಚಿಸುತ್ತಿರಲಿಲ್ಲ—ಹತಾಶನಾಗಲೂ ಬಹುದು.

ಕೇಶವಚಂದ್ರಸೇನರೇ ಮೊದಲಾದ ಬ್ರಾಹ್ಮಸಮಾಜಿಗಳ ಸಂಸರ್ಗದಿಂದ ಪರಮಹಂಸರಿಗೆ ಪ್ರಯೋಜನವಾಗದಿರಲಿಲ್ಲ. ಹಳ್ಳಿಯಲ್ಲಿ ಹುಟ್ಟಿಬೆಳೆದು, ಸಾಧನೆ ತಪಸ್ಸುಗಳಲ್ಲಿ ಕಾಲಕಳೆದು, ನವೀನ ವಿದ್ಯಾಶಾಲೆಗಳ ಪರಿಚಯವಿಲ್ಲದ ಅವರಿಗೆ ಪಾಶ್ಚಾತ್ಯವಿದ್ಯೆ ಸಂಸ್ಕೃತಿಗಳ ಸಂಘರ್ಷಣೆಯಿಂದ ಭಾರತನಿವಾಸಿಗಳಲ್ಲಿ ಸಂಭವಿಸಿದ ಮಾನಸಿಕ ವಿಪ್ಲವವನ್ನು ತಿಳಿಯಲು ಅವಕಾಶವಿರಲಿಲ್ಲ. ಬ್ರಾಹ್ಮ ಸಮಾಜಿಗಳು ಅದನ್ನು ಕಲ್ಪಿಸಿಕೊಟ್ಟರು. ಅಲ್ಲದೆ ತಮ್ಮ ತತ್ತ್ವಪ್ರಚಾರಕ್ಕೆ ಅವರಲ್ಲಿ ಅನೇಕರು ಸಹಾಯಕರಾದರು ; ವಾಹಕರೂ ಆದರು. ಬ್ರಾಹ್ಮಸಮಾಜಿ ಗಳಿಂದ ಪರಮಹಂಸರಿಗೆ ಕೃತವಿದ್ಯರಾದ ನವೀನ ಸುಧಾರಕರ ಚಿತ್ತವೃತ್ತಿ ಚೆನ್ನಾಗಿ ಗೊತ್ತಾಯಿತು. ಅವರೆಲ್ಲರೂ ಪಾಶ್ಚಾತ್ಯ ತತ್ತ್ವಶಾಸ್ತ್ರಗಳನ್ನು ಅಧ್ಯಯನ ಮಾಡಿ, ತಮ್ಮ ಪೂರ್ವಿಕರಾದ ಮಹಾದಾರ್ಶನಿಕರ ಧರ್ಮಜ್ಯೋತಿಗೆ ಕಣ್ಣು ಮುಚ್ಚಿ ನಿರ್ಲಕ್ಷ್ಯನಿ, ಭೋಗತ್ಯಾಗಗಳ ಮತ್ತು ಐಹಿಕ ಆಮುಷ್ಮಿಕಗಳ ವಿಚಿತ್ರ ಸಮುಚ್ಚಯ ಮತವೊಂದನ್ನು ಸೃಜಿಸಿಕೊಂಡು, ಅದರ ಅನುಯಾಯಿಗಳಾಗಿ ಕೂಗಾಡುತ್ತಿದ್ದುದರ ರಹಸ್ಯವು ಗುರುದೇವನಿಗೆ ಅರ್ಥವಾಯಿತು. ರೋಗಿಯ ಪರೀಕ್ಷೆಯಾಗಿ ಜಾಡ್ಯದ ಸ್ವಭಾವವು ತಿಳಿದ ಮೇಲೆ ದಕ್ಷಿಣೇಶ್ವರದ ದೇವ ವೈದ್ಯನಿಗೆ ಚಿಕಿತ್ಸೆಮಾಡುವುದು ಕಷ್ಟವಾಗಲಿಲ್ಲ. ಆಯಾ ಕಾಯಿಲೆಗಳಿಗೆ ಆಯಾ ಮದ್ದು ! ಬೇರೆ ಬೇರೆ ರೋಗಿಗಳಿಗೆ ಬೇರೆ ಬೇರೆ ಪಥ್ಯ !

ಕ್ರಿ. ಶ. ೧೮೮೧ ರಲ್ಲಿ ಪ್ರಸಿದ್ಧ ದೇಶಭಕ್ತ ಅಶ್ವಿನೀಕುಮಾರದತ್ತನು ದಕ್ಷಿಣೇಶ್ವರಕ್ಕೆ ಬಂದನು. ಮೊದಲು ಶ್ರೀರಾಮಕೃಷ್ಣರನ್ನು ನೋಡಿದಾಗ "ಇವನೆಂತಹ ಪರಮಹಂಸನು ?" ಎಂದುಕೊಂಡನಂತೆ. ಆ ದಿನ ಪರಮ ಹಂಸರು ಕೇಶವನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಕ್ಷಣಕ್ಷಣಕ್ಕೂ ಅಲ್ಲಿ ಕೂತಿದ್ದವರಿಗೆ "ಕೇಶವನು ಬರುತ್ತಿದ್ದಾನೆಯೇ ? ನೋಡು." ಎಂದು ಹೇಳು ತ್ತಿದ್ದರು. ಸಲಸಲಕ್ಕೂ "ಇಲ್ಲ, ಇಲ್ಲ." ಎಂಬ ಉತ್ತರವೇ ಬರುತ್ತಿದ್ದುದನ್ನು ಕಂಡು "ಎಲೆಗಳ ಮರ್ಮರವನ್ನು ಕೇಳಿ ರಾಧೆ 'ನನ್ನ ಇನಿಯನು ಬಂದನು' ಎನ್ನುತ್ತಾಳೆ. ಕೇಶವನೆಂದರೆ ನನಗೆ ಪ್ರಾಣ." ಎಂದರು. ಸ್ವಲ್ಪ ಹೊತ್ತಿನ ಮೇಲೆ ಕೇಶವನೂ ಆತನ ಅನುಯಾಯಿಗಳೂ ಬಂದರು. ಕೇಶವನು ಹಣೆಯಿಂದ ನೆಲಮುಟ್ಟಿ ನಮಸ್ಕಾರಮಾಡಲು ಶ್ರೀರಾಮಕೃಷ್ಣರು ಅದನ್ನೇ ಪ್ರತಿಬಿಂಬಿಸಿದರು. ಧರ್ಮವಿಷಯಕವಾದ ಕಥೋಪಕಥನಗಳಾದುವು.

ಪರಮಹಂಸರು—ಕೇಶವಾ, ನಿನ್ನ ಸಮಾಜಕ್ಕೆ ನಾನೊಂದು ಸಾರಿ ಬಂದಿ ದ್ದಾಗ ನೀನು ಹೇಳುತ್ತಾ ಇದ್ದೆ : "ಭಕ್ತಿವಾಹಿನಿಯಲ್ಲಿ ಮುಳುಗಿ ಸಚ್ಚಿದಾನಂದ ಸಮುದ್ರಕ್ಕೆ ಹೋಗಬೇಕು." ಎಂದು. ನಾನಾಗ ನಿನ್ನ ಹೆಂಡತಿಮಕ್ಕಳೂ ಮತ್ತು ಇತರ ಸ್ತ್ರೀಯರೂ ಕೂತಿದ್ದ ಗ್ಯಾಲರಿಯ ಕಡೆಗೆ ನೋಡಿ "ಅಯ್ಯೋ, ಇವರ ಗತಿಯೇನು ?" ಎಂದುಕೊಂಡೆ. ಸಂಸಾರಿಗಳಾದ ನೀವು ತಟಕ್ಕನೆ ಸಚ್ಚಿದಾನಂದಕ್ಕೆ ಹೋಗುವುದೇನು ಹುಡುಗಾಟವೇ ? ನೀವೆಲ್ಲ ಬಾಲಕ್ಕೆ ಕಲ್ಲು ಕಟ್ಟಿದ ಮುಂಗುಸಿಗಳಂತೆ. ಅದು ಮೇಲೆ ಹಾರಿದರೆ ಕಲ್ಲು ಕೆಳಗೆಳೆಯುತ್ತದೆ. ನೀವೇನೋ ಸ್ವಲ್ಪ ಧ್ಯಾನಮಾಡಬಹುದು ; ಆದರೆ ಹೆಂಡತಿಮಕ್ಕಳ ಭಾರ ಕೆಳ ಗೆಳೆಯದೆ ಬಿಡುವುದಿಲ್ಲ. ಭಕ್ತಿಯ ಹೊಳೆಯಲ್ಲಿ ಮುಳುಗಬಹುದು ; ಆದರೆ ಮೇಲೇಳಲೇ ಬೇಕು—ಮುಳುಗುವುದು, ಏಳುವುದು ! ಒಂದೇ ಸಾರಿ ತಟಕ್ಕನೆ ಮುಳುಗಿ ಬಿಡುವುದಕ್ಕಾಗುತ್ತದೆಯೇ ?

ತರುವಾಯ ಮಹರ್ಷಿ ದೇವೇಂದ್ರನಾಥನ ವಿಷಯ ಬಂದಿತು. ಪರಮ ಹಂಸರು ಆತನ ವಿಚಾರವಾಗಿ ಎರಡು ಮಾತು ಹೇಳಿ ಇಂತೆಂದರು: "ಮನುಷ್ಯನು ಮಾಯೆಯಲ್ಲಿರುವಾಗ ಹಸಿತೆಂಗಿನಕಾಯಿಯಂತೆ : ತಿರುಳು ಕರಟಕ್ಕೆ ಹಿಡಿದು ಕೊಂಡಿರುತ್ತದೆ. ಮಾಯೆಯನ್ನು ದಾಟಿದವನು ಕೊಬ್ಬರಿಗಿಟುಕಿನಂತೆ : ತಿರುಳು

ಕರಟಕ್ಕೆ ಅಂಟಿರುವುದಿಲ್ಲ, ಬೇರೆಯಾಗಿರುತ್ತದೆ. ಅಲ್ಲಾಡಿಸಿ ನೋಡಿದರೆ ಗೊತ್ತಾಗುತ್ತದೆ. ಹಾಗೆಯೇ ಆತ್ಮವೂ ಶರೀರದಿಂದ ಬೇರೆಯಾಗುತ್ತದೆ, ಅಂಟಿಕೊಂಡಿರುವುದಿಲ್ಲ. . . . ಅಹಂಕಾರವೇ ಸರ್ವದುಃಖಮೂಲ. ಈ ಹಾಳು 'ನಾನು' ಹೋಗುವುದು ಬಹು ಕಷ್ಟ. ಹಾಳು ಮನೆಯ ಪಾಳಿನಲ್ಲಿ ಬೆಳೆಯುವ ಅರಳಿಯಂತೆ ಇವೊತ್ತು ಕಡಿದುಹಾಕಿದರೆ ನಾಳೆ ಮತ್ತೆ ಬೇರಿನಿಂದಲೇ ಚಿಗುರುತ್ತದೆ. ಅಹಂಕಾರವೂ ಹಾಗೆಯೇ. ನೀರುಳ್ಳಿ ಹಾಕಿದ ಪಾತ್ರೆಯನ್ನು ಏಳೇಳು ಸಾರಿ ತೊಳೆದರೂ ವಾಸನೆ ಹೋಗುವುದಿಲ್ಲ.''

ಸ್ವಲ್ಪ ಹೊತ್ತಾದ ಮೇಲೆ ಕೀರ್ತನೆಗೆ ಪ್ರಾರಂಭವಾಯಿತು. "ನಾನಂದು ನೋಡಿದ್ದನ್ನು ಎಂದಿಗೂ ಮರೆಯಲಾರೆ." ಎಲ್ಲರೂ ಭಾವಾವೇಶದಿಂದ ನರ್ತಿಸತೊಡಗಿದರು, ಕೇಶವಚಂದ್ರಸೇನ ಶ್ರೀರಾಮಕೃಷ್ಣರೂ ಕೂಡಿ! ನಡುವೆ ಪರಮಹಂಸರು ಸಮಾಧಿಮಗ್ನರಾಗಿ ನಿಶ್ಚಲವಾಗಿ ನಿಂತರು. ಎಲ್ಲವನ್ನೂ ಕೇಳಿ, ನೋಡಿ, ಅಶ್ವಿನೀಕುಮಾರದತ್ತನಿಗೆ ಶ್ರೀರಾಮಕೃಷ್ಣರಲ್ಲಿದ್ದ ಸಂದೇಹವು ನಿವೃತ್ತಿಯಾಯಿತು. ಪುನಃ ಪುನಃ ದಕ್ಷಿಣೇಶ್ವರಕ್ಕೆ ಬರತೊಡಗಿದನು.

ಇನ್ನೊಂದು ದಿನ ಅಶ್ವಿನೀಕುಮಾರನು ತನ್ನ ಕೆಲವು ತರುಣ ಮಿತ್ರರೊಡನೆ ಗುರುದೇವನಲ್ಲಿಗೆ ಹೋದನು. ಪರಮಹಂಸರು "ಅವರೆಲ್ಲ ಏಕೆ ಬಂದಿದ್ದಾರೆ?" ಎಂದು ಅಶ್ವಿನಿಯನ್ನು ಕೇಳಿದರು.

ಅಶ್ವಿನಿ—ನಿಮ್ಮನ್ನು ನೋಡಲೆಂದು.

ಪರಮಹಂಸರು—ನನ್ನಲ್ಲಿ ನೋಡಲು ಏನಿದೆ? ದೇವಾಲಯವನ್ನಾದರೂ ಹೋಗಿ ನೋಡಬಾರದೇ?

ಅಶ್ವಿನಿ—ಅದನ್ನೂ ನೋಡುತ್ತಾರೆ. ನಿಮ್ಮನ್ನೂ ನೋಡುತ್ತಾರೆ.

ಪರಮಹಂಸರು—ಅವರೆಲ್ಲ ಚಕ್ಕಮುಕ್ಕಿಕಲ್ಲುಗಳಂತೆ! ಎದೆಯಲ್ಲಿ ಬೆಂಕಿಯಿದೆ! ನೂರು ಶತಮಾನ ನೀರಿನಲ್ಲಿದ್ದರೂ ಉಜ್ಜಿದರೆ ಕಿಡಿಗೆದರುತ್ತಾರೆ. ಆದರೆ ನಮ್ಮಂತಹರನ್ನು ಮಾತ್ರ ಬಡಿದರೂ ಏನೂ ಆಗುವುದಿಲ್ಲ.

ಇನ್ನೊಂದು ಸಾರಿ ಅಶ್ವಿನೀಕುಮಾರನು ಹೋದಾಗ ಶ್ರೀರಾಮಕೃಷ್ಣರು ಶುದ್ಧಗ್ರಾಮ್ಯವಾಗಿ ವರ್ತಿಸಿ ಎಲ್ಲರೂ ನಗುವಂತೆ ಮಾಡಿದರಂತೆ. ಅಶ್ವಿನಿಯನ್ನು

ಕುರಿತು "ನನಗೆ ಅದನ್ನು ತಂದುಕೊಡುತ್ತೀಯಾ? ಅರ್ಧ ಹುಳಿ, ಅರ್ಧ ಸಿಹಿಯಾಗಿರುತ್ತದಲ್ಲಾ ಅದು!" ಎಂದರು.

ಅಶ್ವಿನಿ ಬೆಪ್ಪಾಗಿ "ಏನದು?" ಎಂದನು.

"ಅದೇ! ಅಮುಕಿದರೆ ಬುಸ್ಸೆಂದು ಗೋಲಿ ಕೆಳಗೆ ಹೋಗುತ್ತದಲ್ಲಾ ಅದು!"

ಅಶ್ವಿನಿಗೆ ಸಮಸ್ಯೆ ಬಗೆಹರಿಯಲಿಲ್ಲ.

"ಬಣ್ಣ ಬಣ್ಣ ನೀರು ಇರುತ್ತದಲ್ಲಾ ಅದು!"

"ಓಹೋ! ಲೆಮನೇಡೆ?"

"ಹೌದೂ!! ಅದನ್ನು ತಂದುಕೊಡುತ್ತೀಯಾ?"

"ಆಗಲಿ."

ಅಶ್ವಿನಿಗೆ ಸಾಧುವಾದವನು ಲೆಮನೇಡು ಕುಡಿಯುತ್ತಾನೆಯೇ ಎಂದು ಸಂದೇಹವಾಗಿ, "ನೀವು ಜಾತಿಪದ್ಧತಿ ಇಟ್ಟುಕೊಂಡಿದ್ದೀರಾ?" ಎಂದು ಪ್ರಶ್ನೆ ಮಾಡಿದನು.

ಪರಮಹಂಸರು—ಏನೋ ಸ್ವಲ್ಪ ಸ್ವಲ್ಪ ಇದೆ. ಆದರೆ ಜಂಭಕೊಚ್ಚಿಕೊಳ್ಳುವಷ್ಟು ಇಲ್ಲ. ಕೇಶವನ ಮನೆಯಲ್ಲಿ ಊಟಮಾಡಿದ್ದೇನೆ. ಗಡ್ಡದವನು (ಮುಸಲ್ಮಾನನು) ಕೊಟ್ಟ 'ಐಸ್' (ಹಿಮದ ಕಣ) ತಿಂದಿದ್ದೇನೆ. ಏನು ಮಾಡುವುದು ಹೇಳು! ಜಾತಿಯ ಕಟ್ಟುಗಳೆಲ್ಲ ಉದುರಿಹೋಗುತ್ತವೆ. ತೆಂಗಿನಮರ ಬೆಳೆದಂತೆಲ್ಲ ಹೆಡಲುಗಳು ತಮಗೆ ತಾವೇ ಬಿದ್ದುಹೋಗುತ್ತವೆ. ಹಾಗೆಯೇ ಈ ನಿಯಮ ನಿಷ್ಠೆಗಳೂ. ಆದರೆ ಬಲಾತ್ಕಾರವಾಗಿ ಕಿತ್ತುಬಿಸುಡಬಾರದು ಆ ಮೂರ್ಖರಂತೆ. (ಉಗ್ರಸುಧಾರಕರಂತೆ)

ಅಶ್ವಿನಿ—ಈಶ್ವರದರ್ಶನವಾಗಬೇಕಾದರೆ ಏನು ಮಾಡಬೇಕು?

ಪರಮಹಂಸರು—ಸೂಜಿಗಲ್ಲು ಕಬ್ಬಿಣವನ್ನು ಎಳೆಯುವಂತೆ ಈಶ್ವರನು ನಮ್ಮನ್ನು ಸದಾ ಎಳೆಯುತ್ತಿದ್ದಾನೆ. ಕಬ್ಬಿಣದ ಸುತ್ತ ಮಣ್ಣು ಮುಚ್ಚಿಕೊಂಡಿದ್ದರೆ ಅದು ಆಕರ್ಷಿತವಾಗುವುದಿಲ್ಲ. ಅಶ್ರುಜಲದಿಂದ ಕೊಳೆಯನ್ನು ತೊಳೆದುಬಿಟ್ಟರೆ ಒಡನೆಯೇ ಈಶ್ವರನು ಆಕರ್ಷಿಸುತ್ತಾನೆ.

ಅಶ್ವಿನಿ ತನ್ನ ಡೈರಿಯಲ್ಲಿ ಶ್ರೀರಾಮಕೃಷ್ಣರ ವಚನಗಳನ್ನು ಬರೆದುಕೊಳ್ಳು

ತ್ತಿದ್ದುದನ್ನು ಕಂಡು ಅವರೆಂದರು: "ನೋಡಿಲ್ಲಿ! 'ಗಾಂಜಾ ಗಾಂಜಾ' ಎಂದು ಸುಮ್ಮನೆ ಕೂಗಿದರೆ ಮತ್ತು ಬರುವುದಿಲ್ಲ. ಗಾಂಜಾ ತಂದು ಪಾಕ ಮಾಡಿ ಕುಡಿಯಬೇಕು. . . . ಆದರೆ ನೀನು ಸಂಸಾರದಲ್ಲಿ ಬದುಕಬೇಕು. ಆದ್ದರಿಂದ 'ಮತ್ತು' ಏರುವಂತೆ ರಾಮರಸ ಕುಡಿಯಬಾರದು. ಕೆಲಸಮಾಡುವಾಗ ಉತ್ಸಾಹಕ್ಕೆ ಎಷ್ಟುಬೇಕೋ ಅಷ್ಟನ್ನೇ ಕುಡಿ. ಶುಕದೇವನಂತೆ ಕುಡಿದೂ ಕೂಡಿದೂ ಪ್ರಜ್ಞಾಶೂನ್ಯನಾಗುವುದೂ ನಿನ್ನಿಂದ ಅಸಾಧ್ಯ. . . . ಈಶ್ವರನಿಗೆ ವಕಾಲತ್ತು ವಹಿಸಿ ಸಂಸಾರಮಾಡು. ಅವನೇನು ಬೇಕಾದರೂ ಮಾಡಿಕೊಳ್ಳಲಿ."

ಅಶ್ವಿನೀಕುಮಾರನು ಹೀಗೆಂದು ಬರೆದಿದ್ದಾನೆ—

"ನಾನು ಗುರುದೇವನನ್ನು ನಾಲ್ಕೈದು ಸಾರಿ ನೋಡಿದೆ. ಅಷ್ಟು ಸ್ವಲ್ಪ ಅಂತರದಲ್ಲಿಯೇ ಜನ್ಮಜನ್ಮಾಂತರದ ಸ್ನೇಹವಾಯಿತು. ನಾನೆಷ್ಟು ಸಲುಗೆಯಿಂದ ಮಾತಾಡುತ್ತಿದ್ದೆ! ಆತನ ಸಾನ್ನಿಧ್ಯದಿಂದ ಈಚೆಗೆ ಬಂದ ಕೂಡಲೇ 'ಶಿವಾ ಶಿವಾ! ನಾನಾರೊಡನೆ ನುಡಿಯುತ್ತಿದ್ದೆ!' ಎಂದು ಮೈ ಜುಮ್ಮೆನ್ನುತಿತ್ತು. ಆತನ ಸಂಗದಿಂದ ನನ್ನ ಜೀವನವೆಲ್ಲ ಮಧುರಮಯವಾಯಿತು. ಚಿರಸುಖದಾಯಕವಾದ ಆ ಸ್ವರ್ಗೀಯ ಮಂದಸ್ಮಿತವು ನನ್ನ ಸ್ಮೃತಿಮಂದಿರದಲ್ಲಿ ಶಾಶ್ವತ ಜ್ಯೋತಿಯಾಗಿದೆ."

ಪರಮಹಂಸರು ಕ್ರಿ. ಶ. ೧೮೮೨ ರಲ್ಲಿ ಮಹಾಪಂಡಿತ ಈಶ್ವರಚಂದ್ರ ವಿದ್ಯಾಸಾಗರನನ್ನು ಹೋಗಿ ಕಂಡರು. ಪಂಡಿತನು ಪರಮಹಂಸರನ್ನು ಸಾದರದಿಂದ ಸ್ವೀಕರಿಸಿದನು. ಅವರ ಸಂಭಾಷಣೆ ಸವಿಯೂಟದಂತಿದೆ.

ಪರಮಹಂಸರು—ನಾನು ಇದುವರೆಗೆ ತೊರೆ, ಕಾಲುವೆ, ಹೆಚ್ಚು ಎಂದರೆ ಹೊಳೆಗಳನ್ನು ನೋಡಿದ್ದೆ. ಆದರೆ ಇವತ್ತು ಸಾಗರ ದರ್ಶನವಾಯಿತು.

ವಿದ್ಯಾಸಾಗರ—ಹಾಗಾದರೆ, ಮಹಾಶಯ, ಕ್ಷಾರವಾರಿಯ ಪಾನದಿಂದಲೇ ತೃಪ್ತರಾಗಬೇಕೆಂದು ಪ್ರಾರ್ಥನೆ.

ಪರಮಹಂಸರು—ಹಾಗಲ್ಲ, ಹಾಗಲ್ಲ, ನೀನು ಅಂತಹ ಸಾಗರವಲ್ಲ. ನೀನು ಅವಿದ್ಯಾಸಾಗರನಲ್ಲ; ವಿದ್ಯಾಸಾಗರ! ಪುರಾಣಗಳಲ್ಲಿ ಹೇಳಿರುವ ಕ್ಷೀರಸಾಗರ, ಕ್ಷಾರಸಾಗರವಲ್ಲ.

ಅಲ್ಲಿದ್ದವರೆಲ್ಲರೂ ಗೊಳ್ಳೆಂದು ನಕ್ಕರು.

ವಿದ್ಯಾಸಾಗರ—ಮಹಾಶಯ, ತಾವು ಆಡಿದಂತೆಯೇ ಆಗಲಿ.

ಪರಮಹಂಸರು—ನೀನು ಮಾಡುತ್ತಿರುವುದೆಲ್ಲ ಸಾತ್ತ್ವಿಕ ಕರ್ಮ. ಸತ್ತ್ವಸ್ಥಿತಿಯ ರಾಜಸಿಕತೆ. ಕರುಣೆ ಮೂಡುವುದು ಸತ್ತ್ವದಿಂದ. ಕರುಣೆಯಿಂದ ಮೂಡುವ ಕರ್ಮ ರಾಜಸಿಕವಾದುದು; ಆದರೆ ಆ ರಜಸ್ಸು ಸತ್ತ್ವಸಂಭವವಾದುದರಿಂದ ಅದರಿಂದ ತೊಂದರೆಯಿಲ್ಲ. ಶುಕದೇವ ಮೊದಲಾದವರು ಆಧ್ಯಾತ್ಮ ವಿದ್ಯೆಯನ್ನು ಬೋಧಿಸಿದರೂ ಕರುಣೆಯನ್ನು ಬಿಡಲಿಲ್ಲ. ನೀನು ಜ್ಞಾನದಾನ, ಆಹಾರದಾನ ಎರಡನ್ನೂ ಮಾಡುತ್ತಿದ್ದೀಯೆ, ಬಹಳ ಒಳ್ಳೆಯದು. ಅದನ್ನೇ ಇನ್ನೂ ಸ್ವಲ್ಪ ಹೆಚ್ಚಾದ ನಿಷ್ಕಾಮದಿಂದ ಮಾಡಿದರೆ ನಿನಗೆ ಈಶ್ವರಸಾಕ್ಷಾತ್ಕಾರವಾಗಲು ಸಹಾಯವಾಗುತ್ತದೆ. ಕೆಲವರು ಯಶೋಲೋಭದಿಂದಲೋ ಅಥವಾ ಪುಣ್ಯಾರ್ಜನೆಗಾಗಿಯೋ ಕರ್ಮಮಾಡುತ್ತಾರೆ. ಅಂಥವರ ಕರ್ಮವು ಅಸ್ವಾರ್ಥ ಕರ್ಮವಲ್ಲ. ಅದೂ ಅಲ್ಲದೆ ನೀನು ಈಗಾಗಲೇ ಸಿದ್ಧಪುರುಷನಾಗಿದ್ದೀಯೆ.

ವಿದ್ಯಾಸಾಗರ—ಹಾಗೆಂದರೇನು, ಮಹಾಶಯ?

ಪರಮಹಂಸರು—(ನಗುತ್ತ) "ಉರುಳುಗಡ್ಡೆ ಮೊದಲಾದ ಪದಾರ್ಥಗಳು ಸಿದ್ಧ (ಬೆಂದ)ವಾದ ಮೇಲೆ ಮೃದುವಾಗುತ್ತವೆ. ನಿನ್ನದೂ ಮೃದುಹೃದಯ! ಕರುಣೆ ತುಂಬಿದೆ! (ನಕ್ಕರೆಲ್ಲರೂ)

ವಿದ್ಯಾಸಾಗರ—ಆದರೆ ಕೆಲವು ಪದಾರ್ಥಗಳು ಸಿದ್ಧವಾದ ಮೇಲೆ ಕಠಿನವಾಗುತ್ತವೆ. ಉದಾಹರಣೆಗೆ ಬೇಳೆಯುಂಡೆ! (ನಕ್ಕರೆಲ್ಲರೂ)

ಪರಮಹಂಸರು—ಇಲ್ಲ, ಇಲ್ಲ. ನೀನು ಆ ಜಾತಿಗೆ ಸೇರಿಲ್ಲ. ಬರಿಯ ಪಂಡಿತರು ಹುಳು ಹಿಡಿದ ಕಾಯಿಗಳಂತೆ ಎಂದೆಂದಿಗೂ ಹಣ್ಣಾಗುವುದಿಲ್ಲ. ಅವರದೆಲ್ಲ ಅರ್ಥಂಬರ್ಥ. ರಣಹದ್ದು ಆಕಾಶದಲ್ಲಿ ಹಾರಾಡುತ್ತಿದ್ದರೂ ಅದರ ಕಣ್ಣೆಲ್ಲ ನೆಲದ ಮೇಲಿರುವ ಹೆಣದ ಮೇಲೆ. ಬರಿಯ ಪಂಡಿತರು ಹೆಸರಿಗೆ ಮಾತ್ರ ಪಂಡಿತರು; ಕಾಮಿನೀಕಾಂಚನಮೋಹಿತರಾಗಿರುತ್ತಾರೆ. ಅವರ ಕಣ್ಣುಗಳೂ ರಣಹದ್ದಿನ ಕಣ್ಣುಗಳಂತೆ ಹೆಣದ ಮೇಲಿರುತ್ತವೆ. ಮೋಹವು ಅವಿದ್ಯೆಗೆ ಸೇರಿದ್ದು; ಕರುಣೆ ಭಕ್ತಿ ವೈರಾಗ್ಯಗಳು ವಿದ್ಯೆಯಿಂದ ಮೂಡುವ ಕುಸುಮಮಂಜರಿ. . . . ಬ್ರಹ್ಮವು ವಿದ್ಯೆಗೂ ಅವಿದ್ಯೆಗೂ ಅತೀತವಾಗಿದೆ. ಮಾಯೆಯನ್ನು ಮೀರಿದೆ. . . . ಅದನ್ನು ಮಾತಿನಿಂದ ಹೇಳಲಾಗುವುದಿಲ್ಲ. ವೇದ, ಪುರಾಣ, ತಂತ್ರಶಾಸ್ತ್ರ,

ಷಡ್ದರ್ಶನಗಳೆಲ್ಲವೂ ಮನುಷ್ಯನ ಬಾಯಿಗೆ ಬಂದು ಎಂಜಲಾಗಿವೆ. ಎಂಜಲಾಗದಿರುವುದು ಒಂದಿದೆ. ಬ್ರಹ್ಮ! ಬ್ರಹ್ಮವೇನು ಎಂದು ಇದುವರೆಗೆ ಯಾರೂ ಹೇಳಲಾಗಿಲ್ಲ.

ವಿದ್ಯಾಸಾಗರ—(ಅಲ್ಲಿದ್ದವರಿಗೆ) ನಿಜವಾಗಿಯೂ ಇದೊಂದು ಮಹಾವಚನ. ಇವೊತ್ತು ನನಗೊಂದು ಹೊಸ ವಿಚಾರ ಗೊತ್ತಾದಹಾಗಾಯಿತು.

ಪರಮಹಂಸರು—ಸಮಾಧಿಯಲ್ಲಿ ಬ್ರಹ್ಮಜ್ಞಾನೋದಯವಾಗುತ್ತದೆ. ಸಾಕ್ಷಾತ್ಕಾರವಾಗುತ್ತದೆ. ಮನಸ್ಸು ಬುದ್ಧಿಗಳು ಲಯವಾಗುತ್ತವೆ. ಮನುಷ್ಯನು ಮೂಕನಾಗುತ್ತಾನೆ. . . . ಉಪ್ಪಿನಗೊಂಬೆಯೊಂದು ಸಮುದ್ರದ ಆಳವನ್ನು ಕಂಡುಹಿಡಿಯಲು ಹೋಯಿತಂತೆ! ಹಿಂತಿರುಗಿ ಬಂದು ಆಳದ ಲೆಕ್ಕ ಕೊಡಬೇಕೆಂದು ಅದರ ಬಯಕೆ! ನೀರಿಗಿಳಿಯಿತೋ ಇಲ್ಲವೋ ಕರಗಿಹೋಯಿತು. ವರ್ತಮಾನ ಹೇಳುವವರಾರು?

ಒಬ್ಬರು—ಸಮಾಧಿಯಿಂದ ಹಿಂತಿರುಗಿದವನು ಮಾತಾಡುವುದಿಲ್ಲವೇ?

ಪರಮಹಂಸರು—ಶಂಕರಾಚಾರ್ಯನು ಜಗತ್ಕಲ್ಯಾಣಕ್ಕಾಗಿ ಸಾತ್ವಿಕಾಹಂಕಾರವನ್ನು ಇಟ್ಟುಕೊಂಡಿದ್ದನು. ಬ್ರಹ್ಮಜ್ಞಾನಿ ಸರ್ವದಾ ಮೌನಿ. ಬುದ್ಧಿ ಸಾಕ್ಷಾತ್ಕಾರದಲ್ಲಿ ಲೀನವಾಗುತ್ತದೆ. ಬೆಣ್ಣೆ ಚೆನ್ನಾಗಿ ಕುದಿಯುವವರೆಗೂ ಚಟ್ ಪಟ್ ಎನ್ನುತ್ತದೆ. ಆ ಮೇಲೆ ಸದ್ದಿಲ್ಲ. ಆದರೆ ಅದಕ್ಕೆ ಹಸಿಪೂರಿ ಹಾಕಿದರೆ ಪುನಃ ಸದ್ದುಮಾಡುತ್ತದೆ. ಹಾಗೆಯೇ ಇತರರಿಗೆ ಜ್ಞಾನದಾನ ಮಾಡಲೆಂದು ಬ್ರಹ್ಮಜ್ಞಾನಿ ಕೆಳಗಿಳಿದು ಬಂದು ಮಾತಾಡುತ್ತಾನೆ. . . . ದುಂಬಿ ಮಧುಪಾನಮಾಡುವ ವರೆಗೆ ಝೇಂಕರಿಸುತ್ತದೆ. ಪಾನಮಾಡಲು ತೊಡಗಿತೆಂದರೆ ಸುಮ್ಮನಾಗುತ್ತದೆ. ಆದರೆ ಕೆಲವು ಸಾರಿ ಕುಡಿದ ಮೇಲೆಯೂ ಆನಂದಾತಿಶಯದಿಂದ ಮೊರೆಯುವುದೂ ಉಂಟು. . . . ಪಾತ್ರೆಯನ್ನು ನೀರಿಗದ್ದಿದಾಗ ಸದ್ದಾಗುತ್ತದೆ. ತುಂಬಲು ಸದ್ದಿಲ್ಲ. ಆದರೆ ಆ ಪಾತ್ರೆಯಿಂದ ನೀರನ್ನು ಮತ್ತೊಂದಕ್ಕೆ ಹುಯ್ಯುವಾಗ ಮತ್ತೆ ಸದ್ದಾಗುತ್ತದೆ. . . . ಬ್ರಹ್ಮಜ್ಞಾನಿಗೆ ಜಗತ್ತೆಲ್ಲ ಬ್ರಹ್ಮವಾಗುತ್ತದೆ. ಮಹರ್ಷಿಯೂ ಬ್ರಹ್ಮ. ಇರುವೆಯೂ ಬ್ರಹ್ಮ.

ವಿದ್ಯಾಸಾಗರ—ವ್ಯತ್ಯಾಸವೇ ಇಲ್ಲ?

ಪರಮಹಂಸರು—ಸರ್ವವ್ಯಾಪಿಯಾದ ಶಕ್ತಿ ಎಲ್ಲ ಪ್ರಾಣಿಗಳಲ್ಲಿಯೂ

ಅಂತರ್ಯಾಮಿಯಾಗಿದೆ. ವ್ಯತ್ಯಾಸವಿರುವುದೆಲ್ಲಾ ಶಕ್ತಿಯ ಪ್ರಕಾಶದಲ್ಲಿ. ಹಾಗಿಲ್ಲದಿದ್ದರೆ ಒಬ್ಬನು ಹತ್ತು ಮಂದಿಯನ್ನು ಸೋಲಿಸುವುದೂ ಇನ್ನೊಬ್ಬನು ಪರಾರಿಯಾಗುವುದೂ ಹೇಗೆ ಸಾಧ್ಯ? ಹಾಗಿಲ್ಲದಿದ್ದರೆ ಜನಗಳು ನಿನಗೇಕೆ ಗೌರವ ತೋರಿಸುತ್ತಿದ್ದರು? ನಿನಗೇನು ಎರಡು ಕೋಡುಗಳಿವೆಯೇ. ನಿನಗೆ ಔದಾರ್ಯವಿದೆ, ಪಾಂಡಿತ್ಯವಿದೆ. ಇತರರಿಗೆ ಇಲ್ಲ. ಆದಕ್ಕೇ ಜನಗಳು ನಿನಗೆ ಗೌರವಕೊಡುತ್ತಾರೆ. ಹೌದೋ ಅಲ್ಲವೋ ಹೇಳು!

ವಿದ್ಯಾಸಾಗರನು—ನಕ್ಕುಬಿಟ್ಟನು.

ಪರಮಹಂಸರು—ಬರಿಯ ಪಾಂಡಿತ್ಯದಲ್ಲಿ ಏನೂ ಇಲ್ಲ. ಬ್ರಹ್ಮಸಾಕ್ಷಾತ್ಕಾರವಾಗಲು ಪುಸ್ತಕ ಓದಬೇಕೆ? ಗೀತೆ ಏನು ಹೇಳುತ್ತದೆ? ತ್ಯಾಗವಿರಬೇಕು ಎನ್ನುತ್ತದೆ. ಸಾಧುವಾಗಲಿ, ಸಂಸಾರಿಯಾಗಲಿ ವೀತಸಂಗನಾಗಿರಬೇಕು. . . . ಬ್ರಹ್ಮಜ್ಞಾನಿಗೆ ಭಕ್ತಿ ಏಕೆ ಎನ್ನುತ್ತೀಯೋ? ಅಹಂಕಾರ ಸಂಪೂರ್ಣವಾಗಿ ಹೋಗುವುದಿಲ್ಲ. ಅದೇ ಉತ್ತರ! ಸಮಾಧಿಯಲ್ಲಿ ಲಯವಾಗುತ್ತದೆ. ಆ ಮೇಲೆ ಮತ್ತೆ ಕಾಣಿಸಿಕೊಳ್ಳುತ್ತದೆ. ಕನಸಿನಲ್ಲಿ ಹುಲಿಯನ್ನು ಕಂಡು ಬೆಚ್ಚಿ ಎಚ್ಚತ್ತ ಮೇಲೆಯೂ ಎದೆ ಡವಡವ ಎನ್ನುವುದಿಲ್ಲವೇ? . . . ರಾಮ ಕೇಳಿದನಂತೆ ಹನುಮಂತನನ್ನು "ಯಾವ ದೃಷ್ಟಿಯಿಂದ ನನ್ನನ್ನು ನೋಡುತ್ತೀಯೇ?" ಎಂದು. ಹನುಮಂತ ಹೇಳಿದನು: "ಅಹಂಕಾರವಿರುವಾಗ ನೀನು ಪೂರ್ಣ, ನಾನು ಅಂಶ; ನೀನು ದೇವ, ನಾನು ದಾಸ. ಉತ್ತಮ ಜ್ಞಾನ ಬಂದಾಗ ನೀನೇ ನಾನು; ನಾನೇ ನೀನು." . . . ದಾಸನಂತೆ ದೇವನನ್ನು ಪೂಜಿಸು. ಸರ್ವಸ್ವವನ್ನೂ ಆತನಿಗೆ ನಿವೇದಿಸು.—ನೀನು ಯಾವ ದೃಷ್ಟಿಯಿಂದ ದೇವರನ್ನು ಕಾಣುತ್ತೀಯೆ?

ವಿದ್ಯಾಸಾಗರ—(ನಗುತ್ತ) ಎಂದಾದರೂ ಗುಟ್ಟಾಗಿ ಹೇಳುತ್ತೇನೆ.

ಹೊರಡುವಾಗ ಪರಮಹಂಸರು ವಿದ್ಯಾಸಾಗರನನ್ನು ದಕ್ಷಿಣೇಶ್ವರಕ್ಕೆ ಬರುವಂತೆ ಕೇಳಿಕೊಂಡರು. ವಿದ್ಯಾಸಾಗರನು "ಅಗತ್ಯವಾಗಿ! ನೀವು ಇಲ್ಲಿಯವರೆಗೆ ದಯಮಾಡಿಸಿದ್ದೀರಿ. ನಾನೂ ಬಂದು ನಿಮ್ಮ ದರ್ಶನಮಾಡುವುದು ನನ್ನ ಕರ್ತವ್ಯ." ಎಂದನು.

ಪರಮಹಂಸರು—ನನ್ನ ದರ್ಶನಮಾಡುವುದು! ದಯಮಾಡಿ ಹಾಗೆನ್ನಬೇಡ.

ವಿದ್ಯಾಸಾಗರ—ಏಕೆ ಹೇಳಬಾರದು, ಮಹಾಶಯ?

ಪರಮಹಂಸರು—(ನಗುತ್ತ) "ನಾವೆಲ್ಲ ಸಣ್ಣ ಸಣ್ಣ ತೆಪ್ಪಗಳಂತೆ ತೊರೆಯನ್ನು ಬೇಕಾದರೂ ಹೋಗಬಹುದು; ಹೊಳೆಯಲ್ಲಿ ಬೇಕಾದರೂ ಹೋಗಬಹುದು. ನೀನೋ ದೊಡ್ಡ ಜಹಜು. ನಮ್ಮಂತೆ ಸಾಹಸಮಾಡಲು ಹೋಗಿ ಎಲ್ಲಿಯಾದರೂ ನೆಲಕ್ಕೆ ತಗುಲಿ ಹೂತುಕೊಂಡರೆ?" ಎಂದರು. ಎಲ್ಲರೂ ನಕ್ಕರು. ವಿದ್ಯಾಸಾಗರನೂ ನಕ್ಕು ಸುಮ್ಮನಾದನು. ಪರಮಹಂಸರು ಮತ್ತೆ: "ಆದರೆ ಈಗ ಜಹಜುಗಳೂ ಹೋಗಬಹುದು; ಬಾಧಕವಿಲ್ಲ" ಎಂದರು. ವಿದ್ಯಾಸಾಗರನೂ ತಲೆದೂಗಿ "ಹೌದು, ಈಗ ಮಳೆಗಾಲವಾಗಿದೆ." ಎಂದನು. ಪುನಃ ಎಲ್ಲರೂ ನಕ್ಕರು. ಇಂತು ಪರಮಹಂಸವು ವಿದ್ಯಾಸಾಗರದಲ್ಲಿ ಈಜಾಡಿ, ತರಂಗಗಳನ್ನು ಎಬ್ಬಿಸಿ, ದಕ್ಷಿಣೇಶ್ವರ ಮಾನಸಸರೋವರಕ್ಕೆ ಹಾರಿಹೋಯಿತು.

ಬಂಕಿಮಚಂದ್ರ ಚಟ್ಟೋಪಾಧ್ಯಾಯನು ವಂಗದೇಶದ ಸುಪ್ರಸಿದ್ಧ ಕಾದಂಬರಿಕಾರನು. ಕ್ರಿ. ಶ. ೧೮೮೪ ರಲ್ಲಿ ಆತನು ಕಲ್ಕತ್ತೆಯ ಒಬ್ಬ ಮಿತ್ರನ ಮನೆಯಲ್ಲಿ ಪರಮಹಂಸರ ದರ್ಶನಮಾಡಿದನು. ಆ ಮಿತ್ರನು ಬಂಕಿಮಚಂದ್ರನನ್ನು ಪರಮಹಂಸರಿಗೆ ಪರಿಚಯಮಾಡುವ ಕಾಲದಲ್ಲಿ "ಮಹಾಶಯ, ಈತನು ದೊಡ್ಡ ವಿದ್ವಾಂಸನು. ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಹೆಸರು ಬಂಕಿಮ ಬಾಬು." ಎಂದನು.

ಪರಮಹಂಸರು—(ನಗುತ್ತಾ) "ಓಹೋ ಬಂಕಿಮ![1] ಯಾರ ಪ್ರಭಾವ ನಿನ್ನನ್ನು ಕೊಂಕುಗೊಳಿಸಿದೆ?" ಎಂದರು.

ಬಂಕಿಮನು—(ನಗುತ್ತಾ) "ಹಾ, ಮಹಾಶಯ, ಬ್ರಿಟಿಷರ ಬೂಟ್ಸಿನೇಟುಗಳಿಂದ ಹಾಗಾಗಿದ್ದೇನೆ." ಎಂದನು.

ಪರಮಹಂಸರು—ಅಲ್ಲ, ಅಲ್ಲ; ಆ ಅರ್ಥದಲ್ಲಲ್ಲ. ಶ್ರೀಕೃಷ್ಣನು ರಾಧೆಯ ಪ್ರೇಮಭಾರದಿಂದ ಬಾಗಿದ್ದನು. ಆತನ ದೇಹದ ಕಾಠಿಣ್ಯವು ಹೋಗಿ ಕೋಮಲವಾದುದರಿಂದಲೇ ತ್ರಿಭಂಗಮುರಾರಿಯಾದನು. . . . ಅವನೇಕೆ ನೀಲವಾಗಿ ಸಣ್ಣಗಿದ್ದಾನೆ ಎಂಬೆಯಾ? ಈಶ್ವರನು ದೂರವಾಗಿರುವ ವರೆಗೆ ನೀಲವಾಗಿ ಕಾಣುತ್ತಾನೆ. ಅಂತರದ ಕಣ್ಣಿಗೆ ಅನಂತವು ನೀಲವಾಗಿ ಕಾಣುತ್ತದೆ, ಆಕಾಶದಂತೆ, ಸಮುದ್ರದಂತೆ. ಆದರೆ ಹತ್ತಿರ ಹೋದರೆ ಬಣ್ಣವಿಲ್ಲ! ಕಡಲ ನೀರನ್ನು ಕೈಲಿ

---

[1] 'ಬಂಕಿಮ' ಎಂದರೆ ಕೊಂಕಿರುವುದು ಎಂದರ್ಥವಾಗುತ್ತದೆ.

...ದುಕೊಂಡರೆ ಬಣ್ಣವಿರುತ್ತದೆಯೇ? ಸ್ಫಟಿಕದಂತೆ ನಿರ್ಮಲ! ಸೂರ್ಯನೂ ದೂರವಿರುವುದರಿಂದ ಸಣ್ಣಗೆ ಕಾಣುತ್ತಾನೆ. ಹಾಗೆಯೇ ಈಶ್ವರನೂ. . . .

ಬಂಕಿಮ—ಮಹಾಶಯ, ನೀವೇಕೆ ಉಪನ್ಯಾಸಮಾಡಿ ಬೋಧನೆಮಾಡ ಬಾರದು?

ಪರಮಹಂಸರು—ಉಪನ್ಯಾಸ! ಬೋಧನೆ! ಅದೆಲ್ಲ ಅಹಂಕಾರದ ಮಾತು! ಮನುಷ್ಯನು ತೃಣಪ್ರಾಯನು. ದೇವರೊಬ್ಬನೇ ಬೆಳಕುಕೊಡಲು ಸಮರ್ಥನು. ಉಪದೇಶವೆಂದರೆ ಅಷ್ಟು ಸುಲಭವೇ. ಈಶ್ವರನಿಂದ ಅಧಿಕಾರ ಪಡೆಯದಿದ್ದರೆ ನೀರಿನಲ್ಲಿ ಹೋಮಮಾಡಿದಂತೆ. ಜನರು ಈ ಕಿವಿಯಲ್ಲಿ ಕೇಳಿ, ಆ ಕಿವಿಯಲ್ಲಿ ಬಿಡುತ್ತಾರೆ. ನೀನು ವಾಗ್ಮಿಯಾಗಿ ಮಾತಾಡಿದರೆ "ಅರೆರೆರೆರೆ! ಏನು ಚೆನ್ನಾಗಿ ಮಾತಾಡುತ್ತಾನೆ!" ಎಂದು ಚಪ್ಪಾಳೆ ತಟ್ಟುತ್ತಾರೆ. ನೀನು ಮಾತು ನಿಲ್ಲಿಸಿದರೆ ನಿನ್ನ ಉಪದೇಶವೂ ನಿಂತಂತೆ! ಒಲೆಯಲ್ಲಿ ಬೆಂಕಿಯಿರುವ ತನಕ ಹಾಲು ಕುದಿದು ಉಬ್ಬುತ್ತದೆ. ಉರಿ ಆರಿದೊಡನೆ ಹಾಲು ಮೊದಲಿದ್ದ ಮಟ್ಟಕ್ಕೆ ಇಳಿಯುತ್ತದೆ. . . . ಎಲ್ಲಕ್ಕಿಂತ ಮೊದಲು ಸಾಧನೆಯಿಂದ ಶಕ್ತಿ ಪಡೆಯಬೇಕು. . . . ನಿನ್ನ ಮನೆಯಲ್ಲಿ ನಿನಗೇ ಇರಲು ಜಾಗವಿಲ್ಲ; ಅತಿಥಿಗಳನ್ನು ಹೇಗೆ ಕರೆಯುವುದು? . . . ನೀನು ದೊಡ್ಡ ಕವಿ; ಗ್ರಂಥಗಳನ್ನು ಬರೆದಿರುವೆ. . . . ಮನುಷ್ಯನು ಮರಣಾನಂತರ ಏನಾಗುತ್ತಾನೆ? ನೀನು ಜನ್ಮಾಂತರವನ್ನು ನಂಬುತ್ತೀಯಷ್ಟೆ?

ಬಂಕಿಮ—ಜನ್ಮಾಂತರ! ಹಾಗೆಂದರೆ?

ಪರಮಹಂಸರು—ಸಿದ್ಧನಾದ ಮೇಲೆ ಜನ್ಮಗಳಿಲ್ಲ. ಅದಕ್ಕೆ ಮೊದಲು ಜನ್ಮಜಾಲದಿಂದ ಬಿಡುಗಡೆಯಿಲ್ಲ. . . . ಕುಂಬಾರನು ಮಡಕೆಗಳನ್ನು ಮಾಡಿ ಬಿಸಿಲಿಗೆ ಹಾಕುತ್ತಾನೆ. ಕೆಲವು ಒಣಗುತ್ತವೆ; ಕೆಲವಿನ್ನೂ ಹಸಿಹಸಿಯಾಗಿರುತ್ತವೆ. ಆಗ ದನಗಳು ಬಂದು ಅವುಗಳನ್ನೆಲ್ಲ ತುಳಿದುವೆಂದು ಇಟ್ಟುಕೋ. ಎಲ್ಲವೂ ಚೂರು ಚೂರಾಗುತ್ತವೆ. ಕುಂಬಾರನು ಒಣಗಿ ಚೂರಾದವುಗಳನ್ನು ಬಿಟ್ಟುಬಿಡುತ್ತಾನೆ. ಹಸಿಹಸಿಯಾದವನ್ನು ಪುನಃ ಚಕ್ರಕ್ಕೆ ಹಾಕಿ ತಿರುಗಿಸುತ್ತಾನೆ. ಅವುಗಳಿಂದ ಹೊಸ ಮಡಕೆ ಮಾಡದೆ ಬಿಡುವುದಿಲ್ಲ. . . . ನೀನು ಹಸಿಯಾಗಿರುವ ತನಕ, ಜ್ಞಾನಿಯಾಗುವ ತನಕ, ಕುಂಬಾರನು ನಿನ್ನನ್ನು ಪುನಃ ಪುನಃ ತಿಗುರಿಗೆ ಹಾಗೆ ತಿರುಗಿಸುತ್ತಾನೆ. . . . ಬೆಂದ ಕಾಳನ್ನು ಬಿತ್ತಿದರೆ ಬೆಳೆದು ಹಣ್ಣು ಕೊಡುವುದಿಲ್ಲ.

ಬಂಕಿಮ—ಮಹಾಶಯ, ಕೆಲವು ಗಿಡಗಳು ಏತಕ್ಕೂ ಬೇಡದವು. ಅವುಗಳಿಂದ ಯಾವ ಹಣ್ಣೂ ದೊರೆಯಲಾರದು.

ಪರಮಹಂಸರು—ಉಪಮಾನಗಳೆಲ್ಲ ಅಸಂಪೂರ್ಣ ಸಾಮ್ಯದ ಮೇಲೆ ನಿಂತಿವೆ. ನೀನು ವಿದ್ವಾಂಸನು; ತರ್ಕಶಾಸ್ತ್ರ ಓದಿಲ್ಲವೇ? "ಸಿಂಹದಂತೆ ಭಯಂಕರನು" ಎಂದರೆ ಸಿಂಹದಂತೆ ದಪ್ಪಗೆ, ದುಂಡಗೆ ದೊಡ್ಡ ತಲೆ ಇದೆ ಎಂದು ಅರ್ಥವಾಗುತ್ತದೆಯೇ? (ಎಲ್ಲರೂ ನಕ್ಕರು.)

ಪರಮಹಂಸರು—ಮನುಷ್ಯನ ಧರ್ಮವೇನು? ಹೇಳು!

ಬಂಕಿಮ—(ನಗುತ್ತ) ತಿನ್ನುವುದು, ಮಲಗುವುದು, ನಲಿಯುವುದು!

ಪರಮಹಂಸರು—ಥೂ! ನೀನು ಮಾಡುವುದನ್ನೇ ಹೇಳುತ್ತಿದ್ದೀಯೆ. ತೇಗಿನ ವಾಸನೆಯಿಂದಲೇ ಒಬ್ಬನು ಏನು ತಿನ್ನುತ್ತಾನೆ ಎಂದು ಹೇಳಿಬಿಡಬಹುದು. . . . ಪಾಂಡಿತ್ಯಸಂಪಾದನೆ ಮಾಡಿ, ಒಂದೆರಡು ಶ್ಲೋಕಗಳನ್ನು ಹೇಳಿಕೊಂಡು, ಕಾಮಿನೀಕಾಂಚನ ಕೀರ್ತಿಗಳೇ ಜೀವನ ಸರ್ವಸ್ವವೆಂದು ತಿಳಿದವನ ಬಾಳು ಹಾಳು. . . . ಕೆಲವರು "ದೇವರು ಎನ್ನುವರೆಲ್ಲ ಹುಚ್ಚರು. ನಾವೇ ಜಾಣರು, ಸುಖಿಗಳು" ಎಂದು ತಿಳಿದಿದ್ದಾರೆ. ಕಾಗೆಯೂ ತಾನು ಜಾಣನೆಂದು ತಿಳಿಯುತ್ತದೆ. ಆದರೆ ಅದರ ಜಾಣ್ಮೆಯೆಲ್ಲ ಬೆಳಗಾಯಿತೆಂದರೆ ಕೊಳಕನ್ನು ಹುಡುಕುವುದರಲ್ಲಿ ಪರಿಣಮಿಸುತ್ತದೆ. . . . ಭಕ್ತರಿಗೆ ಈಶ್ವರನೊಬ್ಬನೇ ಏಕಮಾತ್ರ ಪರಮಸುಖ. . . . ಬಂಕಿಮಾ, ದಯವಿಟ್ಟು ಮುನಿದುಕೊಳ್ಳಬೇಡ ನನ್ನ ಮಾತಿಗೆ.

ಬಂಕಿಮ—ಮಹಾಶಯ, ಸವಿಮಾತುಗಳನ್ನು ಮಾತ್ರ ಕೇಳಲೆಂದು ನಾನಿಲ್ಲಿಗೆ ಬಂದಿಲ್ಲ.

ಪರಮಹಂಸ—ಕಾಮಿನೀಕಾಂಚನಗಳನ್ನು ತ್ಯಾಗಮಾಡಬೇಕು. ನಾನು ಪಂಚವಟಿಯಲ್ಲಿ ಕುಳಿತು ಹೊನ್ನನ್ನೂ ಮಣ್ಣನ್ನೂ ಎರಡೂ ಸಮನೆಂದು ಭಾವಿಸಿ ಹೊಳೆಗೆ ಬಿಸಾಡುತ್ತಿದ್ದೆ. . . .

ಬಂಕಿಮ—ಈಶ್ವರಸಾಕ್ಷಾತ್ಕಾರ ಮಾಡುವುದು ಹೇಗೆ?

ಪರಮಹಂಸರು—ಪ್ರಾರ್ಥಿಸು. ನಿನ್ನಲ್ಲಿ ಸರಳತೆಯಿದ್ದರೆ ಉತ್ತರ ಬರುತ್ತದೆ. ಸಜ್ಜನರ ಸಂಗಮಾಡಿಸುತ್ತಾನೆ ಅಥವಾ ಯಾವನಾದರೂ ಒಬ್ಬನಿಂದ ಮಾರ್ಗ ತೋರಿಸುತ್ತಾನೆ.

ಬಂಕಿಮ—ಗುರುವನ್ನು ದಯಪಾಲಿಸುತ್ತಾನೆ ಎಂದಿರೇನು ? ಅವನು ಕಾಳನ್ನೆಲ್ಲ ತಾನೇ ಇಟ್ಟುಕೊಂಡು ಹೊಟ್ಟನ್ನು ಮಾತ್ರ ಕೊಡುತ್ತಾನೆ !

ಪರಮಹಂಸರು—ಹಾಗೇಕೆ ತಿಳಿಯುತ್ತೀಯೆ ? ನಿನಗೆ ಬೇಕಾದುದು ಏನೆಂದು ಅವನಿಗೆ ಗೊತ್ತು. ರೋಗಿಯಾದ ಶಿಶುವಿಗೆ ತಾಯಿಯಾದವಳು ಗಂಜಿ ಕೊಟ್ಟ ಮಾತ್ರಕ್ಕೆ ಆಕೆಗೆ ಹಸುಳೆಯ ಮೇಲೆ ಅಕ್ಕರೆಯಿಲ್ಲವೇನು ?

ಮಾತುಕತೆಗಳಾದ ಮೇಲೆ ತ್ರೈಲೋಕ್ಯನಾಥ ಸಂನ್ಯಾಲನು ಗಾಯನ ಮಾಡಲು ತೊಡಗಿದನು. ಪರಮಹಂಸರು ಸಮಾಧಿಮಗ್ನರಾದರು. ಬಂಕಿಮನು ಹತ್ತಿರ ಹೋಗಿ ನಿಂತು ವಿಸ್ಮಯದಿಂದ ಮೂಕನಾದನು. ಅವನೆಂದೂ ಅಂತಹ ಪುರುಷನನ್ನು ನೋಡಿರಲಿಲ್ಲ. ಪರಮಹಂಸರು ವ್ಯುತ್ಥಿತರಾದ ತರುವಾಯ ಬಂಕಿಮನು ಕೇಳಿದನು : " ಮಹಾಶಯ, ಭಕ್ತಿಬರುವುದು ಹೇಗೆ ? "

ಪರಮಹಂಸರು—ನಾನು ಹೇಳಲಿಲ್ಲವೇ ? ವ್ಯಾಕುಲತೆ ಬೇಕು. ಮಗು ತಾಯಿಯನ್ನು ಕರೆಯುವಂತೆ ದೇವರನ್ನು ಕೂಗಬೇಕು. . . . ಮೇಲೆ ಮೇಲೆ ತೇಲುವುದರಿಂದ ಉಪಯೋಗವಿಲ್ಲ. ಆಳವಾಗಿ ಮುಳುಗಬೇಕು. (ಅನರ್ಘ್ಯರತ್ನಗಳು ಬೇಕಾದರೆ ಸಮುದ್ರತಲಕ್ಕೇ ಹೋಗಬೇಕು.)

ಬಂಕಿಮ—ಏನು ಮಾಡುವುದು, ಮಹಾಶಯ ? ಬೆನ್ನಿಗೆ ಬೆಂಡು ಕಟ್ಟಿದೆಯಲ್ಲಾ !

ಪರಮಹಂಸರು—ಈಶ್ವರನನ್ನು ನೆನೆ. ಎಲ್ಲ ಬಂಧನಗಳೂ ಕಳಚಿಬೀಳುತ್ತವೆ.

ಬಂಕಿಮ—ತಮ್ಮೊಡನೆ ಕೆಲವು ಮಾತುಗಳನ್ನು ವಿನೋದಕ್ಕೆಂದು ಹೇಳಿದೆ. ಮನ್ನಿಸಬೇಕು. . . . ನನ್ನ ಬಡಮನೆಗೆ ತಾವು ದಯಮಾಡಿಸಬೇಕು.

ಪರಮಹಂಸರು—ಈಶ್ವರೇಚ್ಛೆ !

ಬಂಕಿಮ—ಅಲ್ಲಿಗೂ ಭಕ್ತರು ಬರುತ್ತಾರೆ.

ಪರಮಹಂಸರು—ಎಂತಹ ಭಕ್ತರೋ ನಾನು ಬೇರೆ ಕಾಣೆ !

ಪರಮಹಂಸರೂ ಬಂಕಿಮನೂ ಪುನಃ ಸಂಧಿಸಲಿಲ್ಲ. ಆದರೂ ಶ್ರೀರಾಮಕೃಷ್ಣರು ಆತನ ಕಾದಂಬರಿಗಳನ್ನು ಓದಿಸಿ ಕೇಳುತ್ತಿದ್ದರು. ಆತನ ಸುವಿಖ್ಯಾತ ಕಾದಂಬರಿಯಾಗಿರುವ " ದೇವೀ ಚೌಧುರಾಣಿ "ಯನ್ನು ಬಹಳವಾಗಿ ಪ್ರೀತಿಸು

ತ್ತಿದ್ದರು. ನರೇಂದ್ರ ಮೊದಲಾದ ಮೇಧಾವಿಗಳಾದ ತಮ್ಮ ಶಿಷ್ಯರನ್ನು ಆತನಲ್ಲಿಗೆ ಕಳುಹಿಸುತ್ತಿದ್ದರು.

ಪಂಡಿತ ಶಶಧರ ತರ್ಕ ಚೂಡಾಮಣಿ ವಾಚಾಲತೆಯಲ್ಲಿಯೂ ವಿದ್ವತ್ತಿನಲ್ಲಿಯೂ ಹಿಂದೂ ಆಚಾರ್ಯರಲ್ಲಿ ಅಪ್ರತಿಮನೆಂದೆನಿಸಿಕೊಂಡು ವಂಗದೇಶದ ಉದಯ ನಕ್ಷತ್ರವಾಗಿದ್ದನು. ಧರ್ಮಶಾಸ್ತ್ರಗಳನ್ನೆಲ್ಲ ವೈಜ್ಞಾನಿಕವಾಗಿ ವ್ಯಾಖ್ಯಾನಮಾಡುವುದರಲ್ಲಿ ವಿಚಕ್ಷಣನಾಗಿದ್ದನು. ಕ್ರಿ. ಶ. ೧೮೮೪ ರಲ್ಲಿ ಕಲ್ಕತ್ತೆಯಲ್ಲಿ ಶಶಧರನಿಗೆ ಪರಮಹಂಸರ ದರ್ಶನವಾಯಿತು. ಅಂದಿನಿಂದ ಆತನು ಗುರುದೇವನಿಂದ ಆಕರ್ಷಿತನಾಗಿ ಪದೇ ಪದೇ ದಕ್ಷಿಣೇಶ್ವರಕ್ಕೆ ಹೋಗಿ ಅವರನ್ನು ಕಾಣುತ್ತಿದ್ದನು. ಅವರಿಬ್ಬರಿಗೆ ನಡೆದ ಸಂಭಾಷಣೆಯಲ್ಲ ಮುಖ್ಯಾಂಶವನ್ನು ಇಲ್ಲಿ ಕೊಡುತ್ತೇವೆ—

ಪರಮಹಂಸರು—ಯಾವುದನ್ನು ಕುರಿತು ಉಪನ್ಯಾಸಮಾಡುತ್ತೀಯೆ ?

ಶಶಧರ—ಶಾಸ್ತ್ರಗಳಿಗೆ ವ್ಯಾಖ್ಯಾನಮಾಡುತ್ತೇನೆ.

ಪರಮಹಂಸರು—ಕಲಿಯುಗಕ್ಕೆ ಭಕ್ತಿಯೇ ಸರ್ವೋತ್ತಮವಾದುದು. ಶಾಸ್ತ್ರಗಳಲ್ಲಿ ಹೇಳಿರುವ ಕರ್ಮಕ್ರಿಯೆಗಳನ್ನು ಯಥಾವಿಧಿಯಾಗಿ ಮಾಡಲು ಸಮಯ ಸಾಲದು. ಈ ಕಾಲದ ಜ್ವರಕ್ಕೆ ಹಿಂದಿನ ಮದ್ದುಗಳು ಹಿಡಿಯುವುದಿಲ್ಲ; ಆಸ್ಪತ್ರೆಯ ನೀರೌಷಧಿಯೇ ಲೇಸು. ಹಿಂದಿನ ಮದ್ದುಗಳು ಕೆಲಸಮಾಡುವುದರಲ್ಲಿಯೇ ರೋಗಿ ಪ್ರಾಣಬಿಡುತ್ತಾನೆ. ಆದ್ದರಿಂದ ನೀನು ಕರ್ಮಕ್ರಿಯೆಗಳನ್ನು ಬೋಧಿಸುವುದರಲ್ಲಿ ಮಿತವಾಗಿರಬೇಕು. . . . ನಿನ್ನ ಉಪನ್ಯಾಸಗಳು ಪ್ರಾಪಂಚಿಕ ಮನಸ್ಕರ ಮೇಲೆ ಏನೂ ಪರಿಣಾಮಕಾರಿಯಾಗುತ್ತಿಲ್ಲ. ಕ್ರಮೇಣ ನಿನಗದು ಗೊತ್ತಾಗುತ್ತದೆ. . . . ಸಾಕ್ಷಾತ್ಕಾರಕ್ಕೆ ಮೊದಲು ಕರ್ಮಗಳನ್ನು ಯಾರೂ ಬಿಡಬಾರದು. ಕಾಯಿಯಾದ ಕೂಡಲೇ ಹೂವು ಉದುರುತ್ತದೆ. ಭಕ್ತಿಯೇ ಫಲ, ಕರ್ಮಕ್ರಿಯೆಗಳೇ ಹೂವು. ಸಂಧ್ಯೆ ಗಾಯತ್ರಿಯಲ್ಲಿ, ಗಾಯತ್ರಿ ಓಂಕಾರದಲ್ಲಿ, ಓಂಕಾರವು ಸಮಾಧಿಯಲ್ಲಿ ಘಂಟನಾದವು ಕ್ರಮಕ್ರಮೇಣ ಮೌನದಲ್ಲಿ ಮುಳುಗಿಹೋಗುವಂತೆ ಲಯವಾಗುತ್ತವೆ. . . . ವತ್ಸಾ, ನೀನಿನ್ನೂ ಸ್ವಲ್ಪ ಶಕ್ತಿಸಂಗ್ರಹಮಾಡಿಕೋ. ಇನ್ನೂ ಕೆಲವು ಕಾಲ ಸಾಧನೆಮಾಡು. ಆಚಾರ್ಯತ್ವವನ್ನು ಅಕಾಲಕ್ಕೆ ಮೊದಲೇ ಕೈಕೊಂಡಿದ್ದೀಯೆ. ಆದರೆ ನಿನ್ನದು

ಸದಾಕಾಂಕ್ಷ. . . . ಈಶ್ವರನಿಂದ ಅಧಿಕಾರ ಪಡೆಯದೆ ಉಪದೇಶಕ್ಕೆ ಹೊರಡ ಬಾರದು. ಉಪದೇಶಮಾಡಲು ನಿನಗೆ ಈಶ್ವರಾಜ್ಞೆ ಬಂದಿದೆಯೇ ?

ಶಶಧರ—ಹಾಗಾಗಿದೆ ಎಂದು ಹೆಮ್ಮೆ ಪಡಲಾರೆ, ಮಹಾಶಯ.

ಪರಮಹಂಸರು—ಅಮೃತಸಮುದ್ರಕ್ಕೆ ಅನೇಕ ಹಾದಿಗಳಿವೆ. ಹೇಗಾದರೂ ಅದರಲ್ಲಿ ಮುಳುಗಬೇಕು. ನೀನೇ ಧುಮುಕಬಹುದು ; ಅಥವಾ ನಿಧಾನವಾಗಿ ಮೆಟ್ಟಲಿಳಿದು ಹೋಗಿ ಅಮೃತಪಾನಮಾಡಬಹುದು ; ಅಥವಾ ಇನ್ನಾರಾದರೂ ನಿನ್ನನ್ನು ಆ ಕಡಲಿಗೆ ತಳ್ಳಿದರೂ ಸರಿಯೇ. ಒಂದು ಬಿಂದು ಅಮೃತಪಾನಮಾಡಿ ದರೆ ನೀನು ಅಮರನಾಗುವೆ. ಜ್ಞಾನ, ಭಕ್ತಿ, ಕರ್ಮಮಾರ್ಗಗಳಲ್ಲಿ ಯಾವುದ ರಲ್ಲಾದರೂ ಪ್ರಯಾಣಮಾಡು. . . . ವೈದ್ಯರು ಮೂರು ವಿಧವಾಗಿದ್ದಾರೆ. ರೋಗಿಯ ನಾಡಿಯನ್ನು ಪರೀಕ್ಷಿಸಿ ಇಂತಹ ಮದ್ದನ್ನು ತೆಗೆದುಕೋ ಎಂದು ಹೇಳಿ ಹೋಗುವರು ಮೊದಲನೆಯ ಜಾತಿ. ಇದು ಅಧಮ ಜಾತಿ. ಹಾಗೆಯೇ ಶಿಷ್ಯನಿಗೆ ಉಪದೇಶಮಾಡಿ ಅವನು ಅದರಂತೆ ಆಚರಿಸುತ್ತಾನೆಯೋ ಇಲ್ಲವೋ ಎಂದು ನೋಡದೆ ಹೋಗುವ ಆಚಾರ್ಯರಿದ್ದಾರೆ. ಇನ್ನೊಂದು ಜಾತಿಯ ವೈದ್ಯರು ಮದ್ದನ್ನು ಕೊಟ್ಟು ತೆಗೆದುಕೊಳ್ಳುವಂತೆ ಹೇಳುತ್ತಾರೆ. ರೋಗಿ ಒಲ್ಲೆ ನೆಂದರೆ ಅವನೊಡನೆ ವಾದಮಾಡುತ್ತಾರೆ. ಇದು ಮಧ್ಯಮ ಜಾತಿ. ಅದರಂತೆಯೇ ಕೆಲವು ಆಚಾರ್ಯರು ಶಿಷ್ಯನಿಗೆ ಉಪದೇಶಮಾಡಿ ಅದರಂತೆ ನಡೆಯಬೇಕೆಂದು ಬಹು ವಿಧವಾಗಿ ಕೇಳಿಕೊಳ್ಳುತ್ತಾರೆ. ಮೂರನೆಯ ಜಾತಿಯ ವೈದ್ಯರು ಬಲಾ ತ್ಕಾರವಾಗಿ ರೋಗಿಗೆ ಮದ್ದು ಕುಡಿಸುತ್ತಾರೆ. ಅದರಂತೆಯೇ ಉತ್ತಮ ಗುರುಗಳು ಶಿಷ್ಯನನ್ನು ಸನ್ಮಾರ್ಗಕ್ಕೆ ಹಿಡಿದೆಳೆಯುತ್ತಾರೆ. . . . ಪಠನಮಾಡುವುದಕ್ಕಿಂತ ಶ್ರವಣಮಾಡುವುದು ಲೇಸು. ಗುರುವಿನ ಬಾಯಲ್ಲಿ ಬಂದರೆ ಸ್ವಲ್ಪ ಹೆಚ್ಚಾಗಿ ಅರ್ಥವಾಗುತ್ತದೆ. ಅಲ್ಲದೆ ಅನಾವಶ್ಯಕವಾದ ವಿವರಣೆಗೆ ಗಮನಕೊಡುವುದೂ ತಪ್ಪುತ್ತದೆ. ಸ್ವತಃ ನೋಡುವುದು ಕೇಳುವುದಕ್ಕಿಂತಲೂ ಉತ್ತಮವಾದುದು. ಎಂದರೆ ಸಾಕ್ಷಾತ್ಕಾರವು ಸರ್ವಶ್ರೇಷ್ಠವಾದುದು. ಬರಿಯ ಶಾಸ್ತ್ರಾಧ್ಯಯನದಿಂದ ಏನೂ ಆಗುವುದಿಲ್ಲ. ಮುಂದಿನ ವರ್ಷ ಎಷ್ಟು ಮಳೆಯಾಗುತ್ತದೆ ಎಂದು ಭವಿಷ್ಯ ಹೇಳುವ ಪಂಚಾಂಗವನ್ನು ಎಷ್ಟು ಹಿಂಡಿದರೂ ಒಂದು ಹನಿಯೂ ಹನಿಯದು.

ಶಶಧರ—ಈಶ್ವರ ದರ್ಶನವಾಗಲು ಎಂತಹ ಭಕ್ತಿ ಬೇಕು ?

ಪರಮಹಂಸರು—ಅವರವರ ಸ್ವಭಾವಾನುಗುಣವಾಗಿ ಭಕ್ತಿಯಲ್ಲಿ ಮೂರು ವಿಧಗಳಿವೆ. ಸಾತ್ತ್ವಿಕ, ರಾಜಸ, ತಾಮಸಿಕ. ಸಾತ್ತ್ವಿಕ ಭಕ್ತಿ ಈಶ್ವರನೊಬ್ಬನಿಗೇ ಗೊತ್ತಾಗುತ್ತದೆ. ಏಕೆಂದರೆ, ಸಾತ್ತ್ವಿಕ ಭಕ್ತನು ಯಾರೂ ಕಾಣದಂತೆ ರಹಸ್ಯವಾಗಿ ಪೂಜಿಸಿ ಧ್ಯಾನಿಸುತ್ತಾನೆ. ರಾಜಸಿಕ ಭಕ್ತಿ ಪ್ರದರ್ಶಕಶೀಲವಾದುದು. ರಾಜಸಿಕ ಭಕ್ತನು ಮಡಿಪಂಚೆ ಉಟ್ಟು, ರುದ್ರಾಕ್ಷಿಮಾಲೆಯನ್ನು ತೊಟ್ಟು, ಚಿನ್ನದ ಜಪಮಣಿಮಾಲೆಯನ್ನು ಹಿಡಿದು ದೇವಮಂದಿರಕ್ಕೆ ಹೋಗಿ ರಾಜಠೀವಿಯಿಂದ ಪೂಜಿಸುತ್ತಾನೆ. ತಾಮಸಿಕ ಭಕ್ತಿ ಮನೆಮುರಿಯುವ ಡಕಾಯಿತರಂತೆ. ಒನಕೆಯಿಂದ ಬಡಿಯುವುದು; ಪೋಲೀಸರ ಮೇಲೆ ಬಿದ್ದು "ಹೊಡಿ! ಹೊಡಿ!" ಎಂದು ಕೂಗುವುದು. ತಾಮಸಿಕ ಭಕ್ತನು "ಹರ! ಹರ! ಹರ! ಭಂ! ಭಂ! ಕಾಳೀಕಿ ಜೈ!" ಎಂದು ಕೂಗಿ ಅಬ್ಬರಿಸುತ್ತಾನೆ. ಅದರಲ್ಲಿ ಪ್ರಚಂಡಶಕ್ತಿಯೂ ಉಜ್ವಲಶ್ರದ್ಧೆಯೂ ಇರುತ್ತವೆ. ಶಾಕ್ತ ಭಕ್ತರು ಈ ಗುಂಪಿಗೆ ಸೇರಿದವರು. ವೈಷ್ಣವ ಭಕ್ತರ ಭಾವವು ಇದಕ್ಕೆ ಸಂಪೂರ್ಣ ವಿರುದ್ಧವಾದುದು. ಅವರು ಸದಾ ಅಡ್ಡಬೀಳುವುದು, ಕೈಮುಗಿಯುವುದು, ತಮ್ಮನ್ನು ತಾವೇ ಅಲ್ಲಗಳೆದುಕೊಳ್ಳುವುದು ಮೊದಲಾದ ಕೃತ್ಯಗಳಿಂದ "ದೇವರೇ, ನನ್ನ ಮೇಲೆ ದಯೆಯಿಡು. ನಾನು ಕ್ರಿಮಿ, ನಾನು ಪಾಪಿ!" ಎಂದು ಮೊರೆಯಿಡುತ್ತಾ ಯಾವಾಗಲೂ ದೇವರಿಗೆ ಅರ್ಜಿಹಾಕುತ್ತಲೇ ಇರುತ್ತಾರೆ. . . . ಈಶ್ವರನಾಮವು ಸರ್ವಪಾಪಗಳನ್ನು ದಹಿಸಿ ಭಸ್ಮಮಾಡುತ್ತದೆ ಎಂಬ ತೀವ್ರ ಶ್ರದ್ಧೆಯಿರಬೇಕು. ಹಗಲೂ ಇರುಳೂ ದೇವರ ಹೆಸರು ಹೇಳುತ್ತಿರುವುದು! ಅದೇ ಉಸುರಿನಲ್ಲಿ "ನಾನು ಕ್ರಿಮಿ, ನಾನು ಪಾಪಿ!" ಎಂದು ಒರಲುವುದು! ನಾಚಿಕೆಗೇಡು!

ಹೀಗೆಂದು ಪರಮಹಂಸರು "ತಾಯಿ, ನಿನ್ನ ನಾಮೋಚ್ಚಾರಣೆ ಮಾಡುತ್ತ ನಾನು ಮಡಿದರೆ, ನನ್ನನೆಂತು ಕಷ್ಟಕಾಲದಲ್ಲಿ ಕೈಬಿಡುವೆಯೋ ನೋಡಿಬಿಡುತ್ತೇನೆ!" ಎಂಬರ್ಥದ ಗೀತೆಯೊಂದನ್ನು ಹಾಡಿದರು. ಶಶಧರನು ಭಾವವಶನಾಗಿ ಕಣ್ಣೀರು ಸುರಿಸಿದನು.

ಈ ಅಧ್ಯಾಯದಲ್ಲಿ ಪೂರ್ವೋಕ್ತವಾಗಿರುವ ವ್ಯಕ್ತಿಗಳೆಲ್ಲ ಶ್ರೀರಾಮಕೃಷ್ಣರನ್ನು ಗುರುವೆಂದು ಅಕ್ಷರಶಃ ಸ್ವೀಕರಿಸಿದವರಲ್ಲ. ಅವರೆಲ್ಲರೂ ಪರಮಹಂಸರ ಉಪದೇಶಾಮೃತವನ್ನು ಸವಿದು, ಅವರ ಸಂಗಮಹಿಮೆಯಿಂದ ಪುನೀತರಾಗಿ, ಅವ

ರಲ್ಲಿ ಪೂಜ್ಯಬುದ್ಧಿಯನ್ನಿಟ್ಟಿದ್ದರು. ಆದ್ದರಿಂದಲೇ ಕಾಲಕ್ರಮವನ್ನು ಉಲ್ಲಂಘಿಸಿ, ಕಲಾಕ್ರಮವನ್ನೇ ಆಲಿಂಗಿಸಿ, ಅಂಥವರಲ್ಲಿ ಮುಖ್ಯರಾದವರನ್ನು ಒಟ್ಟುಗೂಡಿ ವರ್ಣಿಸಿದ್ದಾಯಿತು. ಇನ್ನು ಮುಂದೆ ಬರುವ ವ್ಯಕ್ತಿಗಳು ಶ್ರೀರಾಮಕೃಷ್ಣರನ್ನು ಅಕ್ಷರಶಃ, ಅರ್ಥಶಃ ಗುರುಭಾವದಿಂದ ಕಂಡವರು. ಅವರಲ್ಲ ಸಂಸಾರಿಗಳಾಗಿ ಸಂಸಾರದಲ್ಲಿಯೇ ಇದ್ದುಕೊಂಡು ಪ್ರಸಿದ್ಧರಾದವರನ್ನು ಮಾತ್ರ ಈ ಅಧ್ಯಾಯದಲ್ಲಿ ವರ್ಣಿಸುತ್ತೇವೆ. ಏಕೆಂದರೆ, ಪರಮಹಂಸರು ಅನೇಕಮುಖ ದರ್ಪಣದಂತೆ ಅನೇಕ ಕಿರಣಗಳನ್ನು ಅನೇಕ ರೀತಿಯಾಗಿ ಪ್ರತಿಬಿಂಬಿಸಿದ ಮಹಾ ವ್ಯಕ್ತಿ. ಯಾರ ಭಾವವನ್ನೂ ನಷ್ಟಗೈಯದೆ, ಯಾರ ಸ್ಥಿತಿಯನ್ನೂ ಚ್ಯುತಿಗೊಳಿಸದೆ, ಅವರವರ ಸಂಸ್ಕಾರಗಳಿಗೆ ಅನುಗುಣವಾಗಿ ಆಯಾ ಉಪದೇಶಗಳನ್ನು ದಾನಮಾಡು ತ್ತಿದ್ದರು. ಸಂನ್ಯಾಸೀ ಶಿಷ್ಯರಿಗೆ ಕೊಡುತ್ತಿದ್ದ ಕಠಿನ ಪಥ್ಯವನ್ನು ಸಂಸಾರಿ ಭಕ್ತರಿಗೆ ಕೊಡುತ್ತಿರಲಿಲ್ಲ. ನಿಪುಣನೂ ದಯಾಳುವೂ ಸಮರ್ಥನೂ ಅನುಭವ ಶಾಲಿಯೂ ಆದ ಅಂತಹ ಮತ್ತೊಬ್ಬ ದೇವವೈದ್ಯನನ್ನು ಜಗತ್ತು ಇದುವರೆಗೂ ಸಂದರ್ಶಿಸಿಲ್ಲ.

ಪುಣ್ಯಕಥೆ ಮುಂದುವರಿಯಲಿ.

ರಾಮಚಂದ್ರದತ್ತ ಮತ್ತು ಮನಮೋಹನ ಮಿತ್ರ ಎಂಬಿಬ್ಬರು ಬಂಧುಗಳು ಕಲ್ಕತ್ತೆಯ ನಿವಾಸಿಗಳು. ಇಬ್ಬರಿಗೂ ಆಫೀಸುಗಳಲ್ಲಿ ಕೆಲಸವಿತ್ತು. ರಾಮ ಚಂದ್ರನು ವೈದ್ಯವಿದ್ಯೆಯಲ್ಲಿ ತರಬಿಯತ್ತಾಗಿ ಕಲ್ಕತ್ತಾ ಮೆಡಿಕಲ್ ಕಾಲೇಜಿನಲ್ಲಿ ಸ್ಥಾನ ಸಂಪಾದಿಸಿದ್ದನು. ಆಗಿನ ಕಾಲದ ಇತರ ಅನೇಕ ಯುವಕರಂತೆ ಆತನೂ ನಿರೀಶ್ವರವಾದಿಯಾಗಿದ್ದನು. ಜಗತ್ತನ್ನು ವಿವರಿಸಲು ಪ್ರಕೃತಿಯೊಂದೇ ಸಾಕು, ಈಶ್ವರನು ಬೇಕಿಲ್ಲ ; ಐಹಿಕಸುಖಭೋಗವೇ ಜೀವನದ ಪರಮ ಆದರ್ಶ ಎಂಬುದು ಅವನ ಮತವಾಗಿತ್ತು. ಒಂದು ದಿನ ಪತ್ರಿಕೆಯೊಂದರಲ್ಲಿ ದಕ್ಷಿಣೇಶ್ವರದಲ್ಲ ಪರಮ ಹಂಸನೊಬ್ಬನಿದ್ದಾನೆ ಎಂಬ ಸಮಾಚಾರವು ಪ್ರಕಟವಾಗಿತ್ತು. ಬಂಧುಗಳಿಬ್ಬರೂ ಕುತೂಹಲದಿಂದ ಪ್ರೇರಿತರಾಗಿ ದಕ್ಷಿಣೇಶ್ವರಕ್ಕೆ ಬಂದರು ಕ್ರಿ. ಶ. ೧೮೭೯ ರಲ್ಲಿ. ಕೊಟಡಿಯಲ್ಲ ಶ್ರೀರಾಮಕೃಷ್ಣರೊಬ್ಬರೇ ಇದ್ದರು. ಆಗಂತುಕರನ್ನು ಅತ್ಯಾದರ ದಿಂದ ಸ್ವೀಕರಿಸಿ ಮಾತುಕತೆಯಾಡಿದರು. ಅಂದಿನಿಂದ ಅವರಿಬ್ಬರೂ ಗುರುದೇವನ ಭಕ್ತರಾದರು.

ಒಂದು ದಿನ ಮನಮೋಹನನು ದಕ್ಷಿಣೇಶ್ವರಕ್ಕೆ ಹೊರಡಲು ಅವನ ಅತ್ತೆ ಹೋಗಬೇಡ ಎಂದು ತಡೆದಳು. ಆದರೂ ಅವನು ಹೋದನು. ಅವನನ್ನು ನೋಡಿ ಪರಮಹಂಸರು "ಭಕ್ತನೊಬ್ಬನು ಇಲ್ಲಿಗೆ ಬರಲು ಯತ್ನಿಸಿದರೆ ಅತ್ತೆ ತಡೆಯುತ್ತಾಳೆ. ಅವನೆಲ್ಲಿ ಇಲ್ಲಿಗೆ ಬರುವುದನ್ನು ಬಿಟ್ಟುಬಿಡುತ್ತಾನೋ ಎಂದು ನನಗೆ ದುಃಖವಾಗುತ್ತದೆ.'' ಎಂದರು. ಮತ್ತೊಂದು ದಿನ ಅವನ ಹೆಂಡತಿ ತಡೆದರೂ ಮನಮೋಹನನು ದಕ್ಷಿಣೇಶ್ವರಕ್ಕೆ ಹೋದನು. ಅವತ್ತೂ ಪರಮಹಂಸರು ವ್ಯಸನದಿಂದ "ಭಕ್ತನು ಇಲ್ಲಿಗೆ ಬರಲು ಪ್ರಯತ್ನಿಸಿದರೆ ಹೆಂಡತಿ ತಡೆಯುತ್ತಾಳೆ.'' ಎಂದರಂತೆ. ಇನ್ನೊಂದು ದಿನ ಪರಮಹಂಸರು ಇನ್ನೊಬ್ಬ ಭಕ್ತನನ್ನು ಕೊಂಡಾಡಲು ಮನಮೋಹನನು ತನ್ನನ್ನು ಅಲ್ಲಗಳೆದರೆಂಬ ದುರಭಿಮಾನದಿಂದ ದಕ್ಷಿಣೇಶ್ವರಕ್ಕೆ ಹೋಗುವುದನ್ನೇ ಬಿಟ್ಟನು. ಎಷ್ಟು ಹೇಳಿ ಕಳುಹಿಸಿದರೂ ಬರಲಿಲ್ಲ. ಕಡೆಗೆ ಪರಮಹಂಸರೇ ಹೋಗಿ ಸಮಾಧಾನ ಹೇಳಿ ಕರೆತಂದರು. ಮನಮೋಹನನು ಕಡೆಕಡೆಗೆ ಶ್ರೀರಾಮಕೃಷ್ಣರ ನಚ್ಚಿನ ಶಿಷ್ಯರಲ್ಲಿ ಒಬ್ಬನಾದನು.

ರಾಮಚಂದ್ರದತ್ತನ ನಿರೀಶ್ವರವಾದವು ಮಾಯವಾಯಿತು, ಭಕ್ತನಾದನು. ವೈರಾಗ್ಯವೂ ಹುಟ್ಟಿತು. ಕಡೆಗೊಂದು ದಿನ ತನಗೆ ಸಂನ್ಯಾಸ ಕೊಡಬೇಕೆಂದು ಕೇಳಲು ಪರಮಹಂಸರು ಇಂತೆಂದರು—

"ಅವಸರ ಅವಸರವಾಗಿ ಯಾವುದನ್ನೂ ಮಾಡಬಾರದು. ಯಾವನಿಂದ ಏನುಮಾಡಿಸಬೇಕೆಂಬುದು ಈಶ್ವರನಿಗೆ ಗೊತ್ತು. ನೀನು ಸಂನ್ಯಾಸಿಯಾದರೆ ನಿನ್ನ ಹೆಂಡತಿಮಕ್ಕಳ ಗತಿಯೇನು? ದೇವರು ಮಾಡಿರುವ ಮನೆಯನ್ನು ಮುರಿಯಬಾರದು. ಸಮಯ ಬಂದಾಗ ಎಲ್ಲ ಆಗುತ್ತದೆ. . . . ಸಂನ್ಯಾಸ ತೆಗೆದುಕೊಂಡ ಮಾತ್ರಕ್ಕೆ ಆಗುವುದೇನು? ಸಂಸಾರದೊಳಗಿರುವುದು ಕೋಟೆಯೊಳಗಿದ್ದಂತೆ. ಕೋಟೆಯೊಳಗಿದ್ದು ಶತ್ರುವನ್ನು ಗೆಲ್ಲುವುದು ಸುಲಭ; ಅಪಾಯಕರವಲ್ಲ. ಮನಸ್ಸಿನಲ್ಲಿ ಮುಕ್ಕಾಲುಪಾಲನ್ನಾದರೂ ಈಶ್ವರನಿಗೆ ಕೊಡಲು ಸಮರ್ಥನಾದಾಗ ನೀನು ಸಂನ್ಯಾಸಿಯಾಗಬಹುದು.''

ರಾಮಚಂದ್ರದತ್ತನು ತನಗುಂಟಾದ ಅನೇಕ ಅನುಭವಗಳ ಸಾಕ್ಷ್ಯದಿಂದ ಪರಮಹಂಸರನ್ನು ಅವತಾರವೆಂದು ನಂಬಿದನು. ನರೇಂದ್ರ, ರಾಖಾಲ ಮೊದಲಾದವರನ್ನು ದಕ್ಷಿಣೇಶ್ವರಕ್ಕೆ ಕರೆತಂದವನೂ ಆತನೇ.

ಸುರೇಂದ್ರನಾಥ ಮಿತ್ರನು ಹೆಚ್ಚಾಗಿ ಧನಾರ್ಜನೆಮಾಡಿ ನೆಮ್ಮದಿಯಿಂದಿದ್ದರೂ ಹಲಕೆಲವು ಮಾನಸಿಕ ದೌರ್ಬಲ್ಯ ದುರಭ್ಯಾಸಗಳಿಂದ ಪೀಡಿತನಾಗಿ ಮುಂಗಾಣದೆ ಆತ್ಮಹತ್ಯಮಾಡಿಕೊಳ್ಳುವ ಆಲೋಚನೆಯಲ್ಲಿ ಇದ್ದಾಗ ರಾಮಚಂದ್ರದತ್ತನು ಅವನನ್ನು ದಕ್ಷಿಣೇಶ್ವರಕ್ಕೆ ಕರೆತಂದನು. ಬರುವಾಗ ಸುಮ್ಮನೆ ಬರಲಿಲ್ಲ. "ನಿನ್ನ ಪರಮಹಂಸರು ಎಲ್ಲಿಯಾದರೂ ಆಷಾಢಭೂತಿಯಾಗಿದ್ದರೆ ಕಿವಿ ಹಿಂಡುತ್ತೇನೆ." ಎಂದು ಹೇಳಿಕೊಂಡೇ ಬಂದನಂತೆ. ಅವನು ಬಂದಾಗ ಪರಮಹಂಸರು ಒಬ್ಬ ಭಕ್ತನೊಡನೆ ಮಾತಾಡುತ್ತ "ಮನುಷ್ಯನು ಮಂಗನ ಮರಿಯಂತೆ ಆಚರಿಸುವುದೇಕೆ? ಬೆಕ್ಕಿನ ಮರಿಯಂತೆ ಏಕೆ ಮಾಡಬಾರದು? ಮಂಗನಮರಿ ತನ್ನ ಸ್ವಂತ ಬಲದಿಂದಲೇ ತಾಯಿಯನ್ನು ಹಿಡಿದುಕೊಂಡು ಚರಿಸುತ್ತದೆ. ಬೆಕ್ಕಿನ ಮರಿಯಾದರೋ ಮ್ಯಾವ್ ಮ್ಯಾವ್ ಎಂದು ಕೂಗಿ ಕೂಗಿ ತಾಯಿಯನ್ನು ಕರೆಯಲು, ಅದು ಬಂದು ಮರಿಯನ್ನು ಕಚ್ಚಿಕೊಂಡು ಹೋಗುತ್ತದೆ. ಮಂಗನಮರಿ ಕೆಲವು ಸಲ ಮುಷ್ಟಿತಪ್ಪಿ ತಾಯಿಯಿಂದ ಜಾರಿಬಿದ್ದು ಮೈಮುರಿದುಕೊಳ್ಳುತ್ತದೆ. ಬೆಕ್ಕಿನ ಮರಿಗೆ ಅಂತಹ ಅಪಾಯವಾಗಲು ಅವಕಾಶವೇ ಇರುವುದಿಲ್ಲ; ಏಕೆಂದರೆ, ತಾಯಿಯೇ ಅದನ್ನು ಎತ್ತಿಕೊಂಡು ತಿರುಗುತ್ತದೆ. ಸ್ವಸಾಮರ್ಥ್ಯಕ್ಕೂ ಈಶ್ವರನಿರ್ಭರತೆಗೂ ಇರುವ ವ್ಯತ್ಯಾಸವೂ ಅದರಂತೆಯೇ." ಎಂದು ಹೇಳಿದರು. ಅದನ್ನು ಆಲಿಸಿ ನೊಂದೆದೆಯ ಸುರೇಂದ್ರನಿಗೆ ಕಣ್ಕತ್ತಲೆ ಹೋಗಿ ಬೆಳಕು ಬಂದಂತಾಯಿತು. ಈಶ್ವರ ನಿರ್ಭರತೆಯೇ ತನಗೂ ಮದ್ದು ಎಂದು ಭಾವಿಸಿದನು. ಹಿಂದಿರುಗಿ ಬರುವಾಗ ಸುರೇಂದ್ರನು ತನ್ನ ಮಿತ್ರನೊಡನೆ "ನಾನು ಕಿವಿ ಹಿಂಡುವುದಿರಲಿ. ಗುರುದೇವನೇ ನನ್ನ ಕಿವಿ ಹಿಂಡಿಬಿಟ್ಟನು. ಆತನು ಅಂತಹನೆಂದು ನನಗೇನು ಗೊತ್ತು? ನನ್ನ ಗುಟ್ಟೆಲ್ಲ ರಟ್ಟಾಗಿಹೋಯಿತು! ಈಗ ನನಗೆ ಜೀವನವು ಸುಖಮಯವಾಗಿ ತೋರುತ್ತಿದೆ." ಎಂದನು.

ಸುರೇಂದ್ರನಿಗೆ ಮದ್ಯಪಾನ ಮೊದಲಾದ ಕೆಟ್ಟಚಾಳಿಗಳಿದ್ದುವು. ಪರಮಹಂಸರು ಅವುಗಳನ್ನೆಲ್ಲ ಒಡನೆಯೇ ಖಂಡಿಸಲಿಲ್ಲ. ಬರಿಯ ಖಂಡನೆಯಿಂದ ಮನುಷ್ಯನು ತನ್ನ ಬಹುಕಾಲದ ಅಭ್ಯಾಸಗಳನ್ನು ಬಿಡಲಾರನೆಂದು ಅವರಿಗೆ ಗೊತ್ತು. ಒಂದು ದಿನ ಏನೋ ಮಾತು ಬಂದು ಹೇಳಿದರು: "ಮನುಷ್ಯನು

ಅಶ್ಲೀಲಸ್ಥಾನಗಳಿಗೇನೋ ಹೋಗುತ್ತಾನೆ; ಹೋಗಲಿ. ಆದರೆ ಹೋಗುವಾಗ ಜಗನ್ಮಾತೆಯನ್ನೇಕೆ ಒಡಗೂಡಿ ಹೋಗಬಾರದು? ಹಾಗೆ ಮಾಡಿದರೆ ಅನೇಕ ಕೇಡುಗಳಿಂದ ಪಾರಾಗಬಹುದು.” ಸುರೇಂದ್ರನು ದುರಭ್ಯಾಸಗಳನ್ನು ಬಿಡಲು ಯತ್ನಿಸಿದನು. ಆದರೆ ಸಾಧ್ಯವಾಗಿರಲಿಲ್ಲ. ಹೀಗಿರಲು ಪರಮಹಂಸರ ಮಾತು ಕೇಳಿ ಆತನಿಗೆ ಸಂತೋಷವಾಯಿತು—ದೇವಿಯ ಹೆಸರು ಹೇಳಿಕೊಂಡು ತನ್ನ ದುರಾಚಾರಗಳನ್ನೆಲ್ಲ ನಿರ್ವಿಘ್ನವಾಗಿ ಮುಂದುವರಿಸಬಹುದು ಎಂದು. ಆದರೆ ದೇವಿಯ ಹೆಸರು ಸದಾ ಧರ್ಮಬುದ್ಧಿಯನ್ನು ಜಾಗೃತಗೊಳಿಸುತ್ತಿತ್ತು. ಆಗ ತಾನು ಮಾಡುವುದು ಅಧರ್ಮವೆಂದು ನಾಚಿ ಹೇಸುತ್ತಿದ್ದನು. ಹೀಗಾಗಿ ಕಡೆಕಡೆಗೆ ಆತನ ವಕ್ರತೆಯೆಲ್ಲವೂ ಮಾಯವಾಯಿತು. ಪರಮಹಂಸರು ಆತನ ಭಕ್ತಿಯನ್ನು ಹೊಗಳುತ್ತಿದ್ದರು. ಸುರೇಂದ್ರನು ಅಂತರಂಗದ ಶಿಷ್ಯರಲ್ಲಿ ಒಬ್ಬನೆಂದು ಪರಿಗಣಿತನಾದನು.

ಶ್ರೀರಾಮಕೃಷ್ಣರು ನಾಡಿ ನೋಡುವುದರಲ್ಲಿಯೂ ಮದ್ದು ಕೊಡುವುದರಲ್ಲಿಯೂ ಪಥ್ಯ ಮಾಡುವುದರಲ್ಲಿಯೂ ಎಂತಹ ಸಮರ್ಥ ದೇವವೈದ್ಯರಾಗಿದ್ದರೆಂಬುದು ಗಿರೀಶಚಂದ್ರಘೋಷನ ಚರಿತ್ರೆಯಿಂದ ಗೊತ್ತಾಗುತ್ತದೆ.

ಗಿರೀಶಚಂದ್ರನ ಹೆಸರು ವಂಗದೇಶದಲ್ಲಿ ಮನೆ ಮಾತಾಗಿದೆ. ಆತನು ಅನೇಕ ಪ್ರಸಿದ್ಧ ನಾಟಕಗಳನ್ನು ರಚಿಸಿ, ಅಭಿನಯಿಸಿ, ವಂಗದೇಶದ ರಂಗಭೂಮಿಯನ್ನು ಉಜ್ಜೀವನಗೊಳಿಸಿ ಉತ್ತಮ ಸ್ಥಿತಿಗೆ ತಂದನು. ಆತನು ಪ್ರತಿಭಾಶಾಲಿಯಾಗಿದ್ದರೂ ದುರಾಚಾರಿ ಎಂಬ ದುಷ್ಕೀರ್ತಿ ಎಲ್ಲೆಲ್ಲಿಯೂ ಹಬ್ಬಿತ್ತು. ಪಾಶ್ಚಾತ್ಯ ವಿದ್ಯೆ ಸಂಸ್ಕೃತಿಗಳ ಜೊತೆಗೆ ಅದರ ಅನಾಚಾರಗಳೆಲ್ಲವನ್ನೂ ಚೆನ್ನಾಗಿ ಕಲಿತು ಪ್ರವೀಣನಾಗಿದ್ದನು. ವಂಗೀಯ ರಂಗಭೂಮಿಗೆ ಪ್ರತಿಷ್ಠಾಪನಾಚಾರ್ಯನೆಂದು ಹೆಸರು ಪಡೆದಿದ್ದ ಆತನಿಗೆ ನರ್ತಕಿಯರು ಚಿರಪರಿಚಿತರಾಗಿದ್ದರು. ದೇವರು ಧರ್ಮ ಭಕ್ತಿಗಳೆಂದರೆ ಆತನಿಗೆ ಆಗುತ್ತಿರಲಿಲ್ಲ. ಅವುಗಳನ್ನು ಕುರಿತು ನಾಟಕಗಳಲ್ಲಿ ಬರೆದಿದ್ದರೂ ಅದು ಸಾಹಿತ್ಯಭೂಷಣಮಾತ್ರವಾಗಿತ್ತು. ಆತನು ಚಾರ್ವಾಕನಾಗಿ, ಸಂಪೂರ್ಣ ನಿರೀಶ್ವರವಾದಿಯಾಗಿ ಹದಿನಾಲ್ಕು ಸಂವತ್ಸರಗಳನ್ನು ಕಳೆದನು. ಮನಸ್ಸು ಗಡಬಿಡಿಯ ಮುದ್ದೆಯಾಗಿತ್ತು.

ಸೊಗದೋಲಾಟದ ದಿನಗಳು ಕೊನೆಗಂಡು ಗಿರೀಶನಿಗೆ ರೋಗ ಮೊದ

ಲಾದ ಕೋಟಲೆಗಳ ಪರಿಚಯವಾಯಿತು. ಯಾವ ಔಷಧದಿಂದಲೂ ರೋಗ ಗುಣವಾಗದಿದ್ದರೆ ತಾರಕೇಶ್ವರದ ಮಹಾದೇವನನ್ನು ಜನರು ಮರೆಹೊಗುತ್ತಾರೆ; ಅದರಿಂದ ಗುಣವಾಗುತ್ತದೆ ಎಂಬ ವಿಷಯವು ಆತನಿಗೆ ಗೊತ್ತಿತ್ತು. 'ಮಹಾ ಶಿವನಿಗೆ ಶರಣಾದನು. ಪ್ರಯತ್ನವು ಫಲಕಾರಿಯಾಯಿತು. ತೊಂದರೆಗಳು ತೊಲಗಿದುವು. ದೇವರಲ್ಲಿ ನಂಬುಗೆ ಮೊಳೆಯಿತು. "ಆತನ ದರ್ಶನವಾಗುವು ದೆಂತು? ಈಶ್ವರದರ್ಶನವಾಗಲು ಗುರೂಪದೇಶವು ಆವಶ್ಯಕವೆನ್ನುತ್ತಾರೆ. ಈಶ್ವರ ನಾಮವೇ ಗುರುವಾಗದೇನು? ಆದರೆ ಎಲ್ಲರೂ ಹೇಳುತ್ತಾರೆ—ಗುರು ಬೇಕೇ ಬೇಕಂತೆ. ಯಾರನ್ನು ಗುರುವೆಂದು ಭಾವಿಸಲಿ? ಗುರುವನ್ನು ದೇವರೆಂದೇ ಕಾಣ ಬೇಕಂತೆ! ನನ್ನಂತೆಯೇ ಮನುಷ್ಯನಾಗಿರುವವನನ್ನು ದೇವರೆಂದು ಭಾವಿಸುವು ದಾದರೂ ಹೇಗೆ?" ಗಿರೀಶನ ಬಗೆ ಕದಡಿತು. ಮಾನವ ಗುರುವಿಗೆ ಎಂದಿಗೂ ಮಣಿಯುವುದಿಲ್ಲ ಎಂದು ನಿರ್ಧರಿಸಿದನು.

ಒಂದು ದಿನ ಪತ್ರಿಕೆಯೊಂದರಲ್ಲಿ ದಕ್ಷಿಣೇಶ್ವರದ ಪರಮಹಂಸರ ವಿಚಾರ ವಿತ್ತು. ಕೇಶವಚಂದ್ರಸೇನನು ತನ್ನ ಅನುಯಾಯಿಗಳ ಸಮೇತ ಅಲ್ಲಿಗೆ ದಿನವೂ ಹೋಗುತ್ತಾನೆ ಎಂದು ಬರೆದಿತ್ತು. ಗಿರೀಶನು ಅದನ್ನು ಓದಿ, ತನ್ನಲ್ಲಿ ತಾನೆ "ಸರಿ. ಈ ಬ್ರಾಹ್ಮಸಮಾಜಿಗಳಿಗೆ ದಿನಕ್ಕೊಂದು ತತ್ತ್ವ, ದಿನಕ್ಕೊಬ್ಬ ಪರಮ ಹಂಸ!" ಎಂದು ಹಾಸ್ಯಮಾಡಿ ಸುಮ್ಮನಾದನು. ಇನ್ನೊಂದು ದಿನ ಪರಮ ಹಂಸರು ತನ್ನ ನೆರೆಮನೆಗೆ ಉತ್ಸವಕ್ಕಾಗಿ ಬಂದಿದ್ದಾರೆ ಎಂದು ಕೇಳಿ ಕುತೂಹಲ ದಿಂದ ನೋಡಲು ಹೋದನು. ಪರಮಹಂಸರು ಭಾವದಲ್ಲಿದ್ದರು. ಕತ್ತಲಾಗಿ ದೀಪಗಳು ಉರಿಯುತ್ತಿದ್ದರೂ ಅವರು "ಸಂಜೆಯಾಯಿತೇ?" ಎಂದು ಪ್ರಶ್ನೆ ಮಾಡಿದರು. ಗಿರೀಶನು "ಸಾಕು ಈ ಬೂಟಾಟಿಕೆ!" ಎಂದುಕೊಂಡು ಹಿಂದಿರುಗಿದನು.

ಕೆಲವು ದಿನಗಳು ಕಳೆದ ಮೇಲೆ ಗಿರೀಶಚಂದ್ರನ 'ಸ್ಟಾರ್ ಥಿಯೇಟರ್'ನಲ್ಲಿ ಆತನೇ ಬರೆದ "ಚೈತನ್ಯಲೀಲಾ" ಎಂಬ ನಾಟಕದ ಅಭಿನಯವಾಗುತ್ತಿತ್ತು. ಪರಮಹಂಸರ ಭಕ್ತನೊಬ್ಬನು ಬಳಿಗೆ ಬಂದು "ಪರಮಹಂಸರು ನಾಟಕ ನೋಡಲು ಬಂದಿದ್ದಾರೆ. ದಯವಿಟ್ಟು ಅವರಿಗೊಂದು ಸೀಟ್ ಕೊಡುತ್ತೀರೋ ಅಥವಾ ಟಿಕೆಟ್ ತೆಗೆದುಕೊಳ್ಳಬೇಕೋ?" ಎಂದು ಕೇಳಿದನು. ರಂಗದ ಅಂಗಣ

ದಲ್ಲಿ ಶತಪಥ ತಿರುಗುತ್ತಿದ್ದ ಗಿರೀಶನು ಹುಬ್ಬುಗಂಟಿಕ್ಕಿ ನಿಂತು "ಅವರೊಬ್ಬರಿಗೇ ಒಂದು ಸೀಟ್ ಕೊಡಲಾಗುತ್ತೆ. ಉಳಿದವರು ಟಿಕೆಟ್ ಕೊಂಡುಕೊಳ್ಳಬೇಕು." ಎಂದನು. ಅಷ್ಟರಲ್ಲಿ ಬಳಿಗೆ ಬಂದ ಪರಮಹಂಸರು ಗಿರೀಶನಿಗೆ ನಮಸ್ಕಾರ ಮಾಡಿದರು. ಗಿರೀಶನು ಪ್ರತಿಯಾಗಿ ನಮಸ್ಕರಿಸಿದನು. ಆದರೆ ಪರಮಹಂಸರು ಮತ್ತೆ ನಮಸ್ಕಾರ ಮಾಡಿದರು. ಮತ್ತೆ ಗಿರೀಶನೂ ನಮಸ್ಕರಿಸಿದನು. ಮತ್ತೆ ಪರಮಹಂಸರು ನಮಸ್ಕಾರಮಾಡಿದರು! ಗಿರೀಶನಿಗೆ ಬೇಜಾರಾಗಿ, ಹೀಗೆ ಮಾಡಿದರೆ ಕೊನೆಗಾಣುವುದಿಲ್ಲ ಎಂದುಕೊಂಡು ಮನಸ್ಸಿನಲ್ಲಿಯೇ ನಮಿಸಿ, ಪರಮಹಂಸರನ್ನು ಒಂದು ಉತ್ತಮಸ್ಥಾನಕ್ಕೆ ಕರೆದೊಯ್ದು ಕೂರಿಸಿ, ಗಾಳಿ ಬೀಸಲು ಸೇವಕನೊಬ್ಬನನ್ನು ಬಿಟ್ಟು, ಮೈ ಸರಿಯಿಲ್ಲದಿದ್ದುದರಿಂದ ಮನೆಗೆ ಹೊರಟುಹೋದನು.

ಮತ್ತೊಂದು ದಿನ ಬಲರಾಮ ವಸು ಎಂಬಾತನ ಮನೆಗೆ ಉತ್ಸವದಲ್ಲಿ ಭಾಗಿಯಾಗಲು ಪರಮಹಂಸರು ಬಂದಿದ್ದಾರೆ ಎಂದು ಕೇಳಿ ಆಹೂತನಾಗದಿದ್ದರೂ ಅವರನ್ನು ನೋಡಲು ಗಿರೀಶನು ಅಲ್ಲಿಗೆ ಹೋದನು. ಆ ದಿನ ಅವರಿಬ್ಬರಿಗೂ ಸಂಭಾಷಣೆ ನಡೆಯಿತು.

ಗಿರೀಶ—ಗುರುವೆಂದರೇನು?

ಪರಮಹಂಸರು—ಭಕ್ತನಿಗೆ ಭಗವಂತನನ್ನು ಕಾಣಿಸುವ ಮಧ್ಯಸ್ಥ. . . . ನಿನಗಾಗಲೇ ಗುರು ಸಿಕ್ಕಿದ್ದಾನೆ!

ಗಿರೀಶ—ಮಂತ್ರವೆಂದರೇನು?

ಪರಮಹಂಸರು—ದೇವರ ಹೆಸರು.

ಹಾಗೆಯೇ ಸಂಭಾಷಣೆ ನಾಟಕಶಾಲೆಗಳ ವಿಷಯಕ್ಕೆ ತಿರುಗಲು, ಶ್ರೀರಾಮ ಕೃಷ್ಣರು "ನಾನು ಇನ್ನೊಂದಾವರ್ತಿ ನಿನ್ನ ನಾಟಕ ನೋಡಬೇಕು." ಎಂದರು.

ಗಿರೀಶ—ಅದಕ್ಕೇನು? ಯಾವೊತ್ತು ಬೇಕಾದರೂ ಬರಬಹುದು.

ಪರಮಹಂಸರು—ಆದರೆ ನೀನು "ಫೀಜು" ತೆಗೆದುಕೊಳ್ಳಬೇಕು.

ಗಿರೀಶ—ಆಗಲಿ, ಎಂಟಾಣೆ ಕೊಟ್ಟರೆ ಸಾಕು.

ಪರಮಹಂಸರು—ಆದರೆ ಅದು ಗಲೀಜುಸೀಟು!

ಗಿರೀಶ—ಇಲ್ಲ, ಇಲ್ಲ, ಆವೊತ್ತಿನಂತೆಯೇ ನಿಮಗೆ ಬಾಕ್ಸಿನಲ್ಲಿ ಜಾಗ ಕೊಡುತ್ತೇನೆ.

ಪರಮಹಂಸರು—ಹಾಗಾದರೆ ಒಂದು ರೂಪಾಯಿ ತೆಗೆದುಕೊಳ್ಳಬೇಕು.

ಗಿರೀಶನು ಒಪ್ಪಿ ಮನೆಗೆ ನಡೆದನು. ದಾರಿಯಲ್ಲಿ ಶ್ರೀರಾಮಕೃಷ್ಣರು ಹೇಳಿದುದನ್ನೇ ನೆನೆದು "ನನಗಾಗಲೇ ಗುರು ಸಿಕ್ಕಿದ್ದಾನೆ! ಏನಾದರಾಗಲಿ ಮನುಷ್ಯನನ್ನು ಗುರು ಎಂದು ಕೈಮುಗಿಯುವುದು ತಪ್ಪಿತಲ್ಲಾ!" ಎಂದು ಹಿಗ್ಗಿದನು. ಸಿಕ್ಕಿದ್ದ ಗುರು ಪರಮಹಂಸರೇ ಎಂದು ಅವನಿಗೆ ತಿಳಿಯಲಿಲ್ಲ.

ಇನ್ನೊಂದು ಸಾರಿ ಪರಮಹಂಸರು ನಾಟಕ ನೋಡಲು ಹೋದಾಗ ಗಿರೀಶನು ಅವರನ್ನು ಔದಾಸೀನ್ಯದಿಂದ ಸ್ವೀಕರಿಸಿ, ಆ ಮೇಲೆ ತನ್ನ ಆಚರಣೆಗೆ ತಾನೇ ನೊಂದುಕೊಂಡು ಪರಿಹಾರಾರ್ಥವಾಗಿಯೋ ಎಂಬಂತೆ ಅವರ ಕೈಯಲ್ಲಿ ಒಂದು ಹೂವನ್ನು ಕೊಡಹೋದನು. ಅವರು ಅದನ್ನು ತೆಗೆದುಕೊಂಡು "ಹೂವುಗಳು ದೇವರಿಗೆ ಅಥವಾ ನೊಗಸುಗಾರರಿಗೆ; ನಾನು ಎರಡೂ ಅಲ್ಲ." ಎಂದು ಹೇಳಿ ಹಿಂದಕ್ಕೆ ಕೊಟ್ಟು ಬಿಟ್ಟರು. . .

"ನಿನ್ನ ಮನಸ್ಸು ವಕ್ರವಾಗಿದೆ."

"ಪಾರಾಗುವುದು ಹೇಗೆ, ಮಹಾಶಯ?

"ಶ್ರದ್ಧೆಯಿರಲಿ."

ಗಿರೀಶನು ದಕ್ಷಿಣೇಶ್ವರಕ್ಕೆ ಹೋದನು. ಪರಮಹಂಸರು ಕೆಲವು ಬುದ್ಧಿವಾದಗಳನ್ನು ಹೇಳಲಾರಂಭಿಸಲು ಗಿರೀಶನೆಂದನು: "ಈ ಬುದ್ಧಿವಾದಗಳೆಲ್ಲ ನನಗೆ ಬೇಡ. ನಾನೇ ಬೇಕಾದಷ್ಟು ಬರೆದಿದ್ದೇನೆ. ಅದರಿಂದ ಏನೂ ಉಪಯೋಗವಾಗಿಲ್ಲ. ಇನ್ನೇನಾದರೂ ರೀತಿಯಿಂದ ಸಹಾಯಮಾಡುವಂತಿದ್ದರೆ ಮಾಡಿ!"

ಮೇಲುನೋಟಕ್ಕೆ ಗಿರೀಶನು ದುರಾಚಾರಿಯಾಗಿದ್ದರೂ ಅಂತರಂಗದಲ್ಲಿ ಅವನು ಮಹಾಭಕ್ತನೆಂಬುದು ಪರಮಹಂಸರಿಗೆ ಮೊದಲಿನಿಂದಲೂ ಗೊತ್ತಿತ್ತು. ಆದ್ದರಿಂದ ಅವನ ಅವಿವೇಕಗಳನ್ನೆಲ್ಲ ಸಹಿಸಿ, ಮೆಲ್ಲಮೆಲ್ಲಗೆ ತಿದ್ದಿದರು. ಒಂದು ದಿನ ಮದ್ಯಪಾನದಿಂದ ಉನ್ಮತ್ತನಾಗಿದ್ದ ಗಿರೀಶನು ಪರಮಹಂಸರನ್ನು ಬಾಯಿಗೆ ಬಂದಂತೆ ಬಯ್ದುಬಿಟ್ಟನು. ಅದನ್ನು ಕುರಿತು ಅವರು ರಾಮಚಂದ್ರದತ್ತನೊಡನೆ ಹೀಗೆಂದರು—

"ನೋಡಿದೆಯಾ, ಗಿರೀಶನು ಎಲ್ಲರೆದುರಿಗೂ ನನ್ನನ್ನು ಬಾಯಿಗೆ ಬಂದಂತೆ ನಾಟಕಶಾಲೆಯಲ್ಲಿ ಬಯ್ದುಬಿಟ್ಟನು.''

"ಅದನ್ನೆಲ್ಲ ನೀವು ಸಹಿಸಬೇಕು.''

"ಹೌದು, ಇನ್ನೊಂದು ಸಾರಿ ಹೊಡೆದೇ ಬಿಟ್ಟರೆ?''

"ಅದನ್ನೂ ಸಹಿಸಬೇಕು. ಸರ್ಪವು ಕೃಷ್ಣನಿಗೆ ತನ್ನ ವಿಷವನ್ನಲ್ಲದೆ ಇನ್ನೇನನ್ನು ಕೊಡಬಲ್ಲುದು? ಅದರಂತೆಯೇ ಗಿರೀಶನೂ! ಅಲ್ಲದೆ ನೀವಲ್ಲದೆ ಇನ್ನಾರು ಅದನ್ನೆಲ್ಲಾ ತಾಳಿಯಾರು?''

ಹೀಗೆಂದು ಮಾತನಾಡಿ ಯಾರು ಹೇಳಿದ್ದನ್ನೂ ಕೇಳದೆ ಗಾಡಿಮಾಡಿಕೊಂಡು ಗಿರೀಶನ ಮನೆಗೆ ಹೋದರು. ಅಲ್ಲಿ ಗಿರೀಶನು ತಾನು ಮಾಡಿದ ಅಪರಾಧಕ್ಕಾಗಿ ಕೋಣೆ ಬಾಗಿಲು ಹಾಕಿಕೊಂಡು ರೋದಿಸುತ್ತಿದ್ದನು. ಅವನನ್ನು ಮೃದುವಾಕ್ಯಗಳಿಂದ ಸಂತೈಸಿದರು. ಇಂತು ಗಿರೀಶನು ತಾನರಿಯದೆಯೇ ಶ್ರೀರಾಮಕೃಷ್ಣರ ಕರುಣೆತೊಟ್ಟಿಲ ಹಸುಳೆಯಾದನು.

ಒಂದು ದಿನ ಗಿರೀಶನು ತನ್ನ ಕಂಪನಿಯ ನರ್ತಕಿಯೊಬ್ಬಳು ಕಾಯಿಲೆಯಾಗಿದ್ದಾಳೆಂದು ಕೇಳಿ ಅವಳನ್ನು ನೋಡಲು ಹೋದನು. ಚೆನ್ನಾಗಿ ಕುಡಿದು ಬಿಟ್ಟು ರಾತ್ರಿಯನ್ನು ಅಲ್ಲಿಯೇ ಕಳೆದನು. ಬೆಳಗಾಗಲು ಪಶ್ಚಾತ್ತಾಪದಿಂದ ಕಂಬನಿಗರೆಯುತ್ತ ಒಂದು ಕೋಚಿನಲ್ಲಿ ಸಾರಾಯಿ ಶೀಸೆಗಳನ್ನೂ ಹಾಕಿಕೊಂಡು ದಕ್ಷಿಣೇಶ್ವರಕ್ಕೆ ಓಡಿದನು. ಪರಮಹಂಸರನ್ನು ಕಂಡವನೇ ಅವರ ಕಾಲುಗಳನ್ನು ಹಿಡಿದುಕೊಂಡು ಅಳತೊಡಗಿದನು. ಗುರುದೇವನಿಗೆ ಎಲ್ಲವೂ ಗೊತ್ತಾಯಿತು. ಕರುಣವಾಣಿಯಿಂದ ಸಂತವಿಡುತ್ತ, ಬಳಿಯಿದ್ದ ಶಿಷ್ಯನೊಬ್ಬನಿಗೆ ಕೋಚಿನಲ್ಲಿದ್ದ ಮೆಟ್ಟು, ಧೋತ್ರ, ಸಾರಾಯಿಶೀಸೆಗಳನ್ನು ತರಹೇಳಿದರು. ಗಿರೀಶನಿಗೆ ತಲೆ ಇನ್ನೂ ನೆಟ್ಟಗಾಗಿರಲಿಲ್ಲ. ಪುನಃ ಕುಡಿಯಬೇಕೆಂದು ಮನಸ್ಸಾಗಿ ಸುತ್ತಲೂ ನೋಡಿದನು. ಅದನ್ನು ಅರಿತ ಗುರುದೇವನು ಶೀಸೆಗಳನ್ನು ಅವನ ಮುಂದೆ ಇಡಿಸಲು, ನೆರೆದಿದ್ದ ಜನರೆದುರಿಗೆ ನಾಚಿಕೆಯಿಲ್ಲದೆ ಶೀಸೆಗಳನ್ನು ಖಾಲಿಮಾಡಿ ಬಿಟ್ಟನು. ಪರಮಹಂಸರು "ಕುಡಿ, ಕುಡಿ! ಇನ್ನೆಷ್ಟು ದಿನ ತಾನೇ ಕುಡಿದೀಯೆ!'' ಎಂದರು. ಸ್ವಲ್ಪ ಹೊತ್ತಾದ ಮೇಲೆ ಗಿರೀಶನಿಗೆ ಮತ್ತೆಲ್ಲ ಇಳಿಯಿತು. ತಾನು

ಮಾಡಿದ್ದನ್ನು ನೆನೆದು ಪಶ್ಚಾತ್ತಾಪದಿಂದ ಎದೆ ಒಡೆದುಕೊಂಡು ಅತ್ತನು. ತನ್ನನ್ನು ಹೇಗಾದರೂ ಉದ್ಧಾರಮಾಡಬೇಕೆಂದು ಬೇಡಿದನು.

ಪರಮಹಂಸರು ಹೇಳಿದರು : “ದಿನಕ್ಕೆರಡು ಸಾರಿ ದೇವರನ್ನು ನೆನೆ.”

“ನನಗೆ ಬಹಳ ಕೆಲಸವಿರುತ್ತದೆ. ನಿಯಮದಂತೆ ನಡೆಯಲು ನನ್ನಿಂದ ಸಾಧ್ಯವಿಲ್ಲ. ನಾನು ಹೇಗೆ ಮಾತು ಕೊಡಲಿ?”

“ಹೋಗಲಿ; ನಿದ್ರೆಮಾಡುವ ಮೊದಲು ಒಂದು ಸಾರಿ ನೆನೆ.”

“ನಾನು ಮಾತು ಕೊಡಲಾರೆ.”

“ಇಷ್ಟು ಸ್ವಲ್ಪವನ್ನೂ ಕೂಡ ನೀನು ಮಾಡಲಾರೆ ಎನ್ನುತ್ತೀಯೆ, ಹೋಗಲಿ ಬಿಟ್ಟುಬಿಡು. ನನಗೆ ವಕಾಲತ್ತುನಾಮೆಯಿರಲಿ. ಇನ್ನು ಮೇಲೆ ನಿನ್ನ ಭಾರವೆಲ್ಲ ನನ್ನ ಮೇಲೆ. ನೀನು ಏನನ್ನೂ ಮಾಡಬೇಡ. ನಾನು ಎಲ್ಲಾ ನೋಡಿಕೊಳ್ಳುತ್ತೇನೆ.”

“ಹುಂ. ಅದನ್ನು ಮಾಡುತ್ತೇನೆ.”

“ಏನಂದೆ! ‘ಮಾಡುತ್ತೇನೆ.’ ಹಾಗೆ ಹೇಳಲು ನಿನಗೆ ಅಧಿಕಾರವಿಲ್ಲ. ಮಾಡುವುದೂ ಬಿಡುವುದೂ ನಿನ್ನಿಚ್ಛೆಯಲ್ಲ! ತಿಳಿಯಿತೋ? ನಾನು ನಿನ್ನ ಪ್ರತಿನಿಧಿ! ನಿನ್ನಲ್ಲಿರುವ ಈಶ್ವರನ ಚಿತ್ತವಿದ್ದಂತೆ ಆಗುತ್ತದೆ! ಆದ್ದರಿಂದ ‘ದೇವರು ನಡೆಸಿದರೆ ಮಾಡುತ್ತೇನೆ!’ ಎನ್ನಬೇಕು.”

ಗಿರೀಶನು ಶರಣನಾಗಿ ಉದ್ಧಾರವಾದನು. ಆತನ ದುರ್ಗುಣಗಳೆಲ್ಲ ಕಳಚಿ ಬಿದ್ದುವು. ಮಹಾಭಕ್ತನಾದನು. ಪರಮಹಂಸರ ಸಂಸಾರಿ ಶಿಷ್ಯರಲ್ಲಿ ಅಗ್ರಗಣ್ಯನಾದನು. ತಿರಸ್ಕೃತನಾಗಿದ್ದವನು ಗಂಗೆಯಲ್ಲಿ ಮಿಂದು ಪೂಜ್ಯನಾದನು. ಆತನು ಮೃತ್ಯುಶಯ್ಯೆಯಲ್ಲಿದ್ದಾಗ “ಹೇ ಗುರುದೇವ, ಈ ಕಠೋರ ಮಾಯಾ ಯವನಿಕೆಯನ್ನು ನನ್ನ ದೃಷ್ಟಿಯಿಂದ ಕಿತ್ತುಬಿಸುಡು!” ಎಂದು ಹೇಳಿ ಪ್ರಾಣ ಬಿಟ್ಟನಂತೆ.

ದುರ್ಗಾಚರಣ ನಾಗನು ಶ್ರೀರಾಮಕೃಷ್ಣರ ಸಂಸಾರಿ ಶಿಷ್ಯರಲ್ಲಿ ಅದ್ವಿತೀಯನಾದನು. ವಂಗದೇಶದಲ್ಲಿ ಸಾಧುವರ್ಯ ನಾಗ ಮಹಾಶಯ ಎಂದು ಆತನ ಹೆಸರು ಪೂಜ್ಯವಾಗಿದೆ. ಆತನು ಮಹಾ ತಿತಿಕ್ಷುವಾಗಿದ್ದನು. ಕ್ರಿ. ಶ. ೧೮೪೬ ರಲ್ಲಿ ಆತನು ಜನಿಸಿದನು. ತಂದೆತಾಯಿಗಳು ಡಾಕಾ ಜಿಲ್ಲೆಯ ಒಂದು

ಸಣ್ಣ ಹಳ್ಳಿಯಲ್ಲಿ ಬಡತನದಿಂದ ಜೀವನ ನಡಸುತ್ತಿದ್ದರು. ಆದ್ದರಿಂದ ಆತನಿಗೆ ವಿದ್ಯಾಶಾಲೆಗಳಲ್ಲಿ ಓದಿ ಪಾಶ್ಚಾತ್ಯ ವಿದ್ಯೆಯಲ್ಲಿ ಪ್ರವೀಣನಾಗಲು ಅವಕಾಶ ವಾಗಲಿಲ್ಲ. ಆದರೂ ತನ್ನ ಮನೆಗೆ ಹತ್ತು ಮೈಲಿ ದೂರವಿದ್ದ ಡಾಕಾ ನಗರದ ಹೈ ಸ್ಕೂಲಿಗೆ ದಿನವೂ ನಡೆದುಹೋಗಿ ಉಪಾಯಾಂತರದಿಂದ ತರಗತಿಗಳಿಗೆ ನುಗ್ಗಿ ಉಪನ್ಯಾಸಗಳನ್ನು ಕೇಳಿಬರುತ್ತಿದ್ದನು. ತರುವಾಯ ದುರ್ಗಾಚರಣನು ವೈದ್ಯವಿದ್ಯೆಯನ್ನು ಅಭ್ಯಾಸಮಾಡಿ ವೈದ್ಯನಾದನು. ಬಾಲ್ಯದಿಂದಲೂ ಧರ್ಮ ಜೀವಿಯಾಗಿದ್ದ ಆತನು ರೋಗಿಗಳು ಕೊಟ್ಟಷ್ಟನ್ನೇ ಸ್ವೀಕರಿಸಿ ತೃಪ್ತನಾಗು ತ್ತಿದ್ದನು. ಅಲ್ಲದೆ ಕಷ್ಟದಲ್ಲಿರುವ ಜನರಿಗೆ ತನ್ನ ಶಕ್ತಿಮೀರಿ ಧನಸಹಾಯ ಮಾಡುತ್ತಿದ್ದುದರಿಂದ ಸಂಪಾದನೆ ಹೊಟ್ಟೆಬಟ್ಟೆಗೇ ಸಾಲುತ್ತಿರಲಿಲ್ಲ. ಆತನು ಆಜನ್ಮ ಅಹಿಂಸಾವಾದಿಯಾಗಿದ್ದನು. ಎಷ್ಟೋ ಸಾರಿ ಬೆಸ್ತರು ಹಿಡಿದ ಜೀವವಿರುವ ಮೀನುಗಳನ್ನೆಲ್ಲ ದುಡ್ಡುಕೊಟ್ಟು ಕೊಂಡುಕೊಂಡು ಹೊಳೆಗೆ ಬಿಡುತ್ತಿದ್ದನು. ಒಂದು ಸಾರಿ ಹಕ್ಕಿಗಳನ್ನು ಸುಟ್ಟು ಕೊಲ್ಲುತ್ತಿದ್ದ ಐರೋಪ್ಯ ಜನರಿಂದ ಬಂದೂಕಗಳನ್ನು ಕಿತ್ತುಕೊಂಡು, ಹಕ್ಕಿ ಹೊಡೆಯುವುದಿಲ್ಲ ಎಂದು ಅವರು ಮಾತುಕೊಟ್ಟ ಮೇಲೆಯೇ ಬಂದೂಕಗಳನ್ನು ಹಿಂದಕ್ಕೆ ಕೊಟ್ಟನಂತೆ.

ಚಿಕ್ಕಂದಿನಲ್ಲಿಯೇ ಮದುವೆಯಾಗಿದ್ದರೂ ಆತನಿಗೆ ವೈವಾಹ ಜೀವನವು ರುಚಿಸಲಿಲ್ಲ. ಆಜೀವ ಬ್ರಹ್ಮಚರ್ಯವು ಆತನ ವ್ರತವಾಗಿತ್ತು. ಮಾಯಾ ಬಂಧನಗಳಿಂದ ಪಾರಾಗಿ ಈಶ್ವರಸಾಕ್ಷಾತ್ಕಾರ ಮಾಡದಿದ್ದರೆ ಜೀವನವು ವ್ಯರ್ಥ ಎಂದು ತಿಳಿದಿದ್ದ ಆತನು ಧ್ಯಾನ ಜಪಗಳಲ್ಲಿ ಬಹಳ ಕಾಲ ಕಳೆಯುತ್ತಿದ್ದನು. ಹಗಲೆಲ್ಲ ರೋಗಿಗಳಿಗೆ ಮದ್ದುಕೊಟ್ಟು ಉಪಚಾರಮಾಡುವುದು, ರಾತ್ರಿ ನಿರ್ಜನ ಪ್ರದೇಶಗಳಲ್ಲಿ ಭಗವಂತನನ್ನು ಧ್ಯಾನಿಸುವುದು ಇದೇ ಆತನ ದಿನಚರಿಯ ಕೆಲಸ ವಾಗಿತ್ತು. ಒಂದು ದಿನ ಮಿತ್ರನೊಬ್ಬನಿಂದ ಪರಮಹಂಸರ ವಿಚಾರವನ್ನು ಕೇಳಿ ದಕ್ಷಿಣೇಶ್ವರಕ್ಕೆ ಬಂದನು. ಕಂಡಕೂಡಲೇ ನಾಗಮಹಾಶಯನು 'ಅಗ್ನಿಜ್ವಾಲೆ' ಎಂಬುದು ಶ್ರೀರಾಮಕೃಷ್ಣರಿಗೆ ಗೊತ್ತಾಯಿತು. ಆತನಾದರೋ ಪರಮಹಂಸರಲ್ಲಿ ತನ್ನ ಇಷ್ಟದೈವವನ್ನು ಸಂದರ್ಶಿಸಿದನು. ಪದೇ ಪದೇ ದಕ್ಷಿಣೇಶ್ವರಕ್ಕೆ ಬಂದು ಗುರುದೇವನ ವಚನಾಮೃತಪಾನದಿಂದ ಅಮರನಾದನು. ಒಂದು ಸಾರಿ ನಾಗ ಮಹಾಶಯನು ತಾನು ಸಂನ್ಯಾಸಿಯಾಗಬೇಕೆಂದು ಹೇಳಲು, ಪರಮಹಂಸರು

"ಜನರಿಗೆ ಆದರ್ಶವಾಗಿ ಸಂಸಾರದಲ್ಲಿರು." ಎಂದು ಬೆಸಸಿದರು. ಗುರುವಾಣಿಯನ್ನು ದೇವವಾಣಿಯೆಂದು ಭಾವಿಸಿ, ನಾಗಮಹಾಶಯನು ಬೆಂಕಿಯ ನಡುವೆ ಇದ್ದರೂ ಸುಟ್ಟುಕೊಳ್ಳದಂತೆ ಬಾಳಿ, ಸಾಧುವರ್ಯನೆಂಬ ಬಿರುದಿಗೆ ಪಾತ್ರನಾಗಿ ಸರ್ವಪೂಜ್ಯನಾದನು.

ಈ ಅಧ್ಯಾಯದ ಕೊನೆಯಲ್ಲಿ ನಾವೀಗ ವರ್ಣಿಸಲಿರುವ ಪುರುಷನು ಅಂತ್ಯಗಣ್ಯನಾದರೂ ಅಗ್ರಮಾನ್ಯನಾಗಿದ್ದಾನೆ. ಶ್ರೀರಾಮಕೃಷ್ಣರ ಜೀವನದಲ್ಲಿಯೂ ಜೀವನ ಇತಿಹಾಸ ಪ್ರಚಾರದಲ್ಲಿಯೂ ಆತನಿಗೆ ಅಸಾಧಾರಣ ಪ್ರಮುಖಸ್ಥಾನವು ದೊರೆತಿದೆ. ಆತನ ಡೈರಿ ಇಲ್ಲದಿದ್ದರೆ ಪರಮಹಂಸರ ಜೀವನಸಮುದ್ರದ ಅಮೂಲ್ಯ ರತ್ನರಾಶಿಯಲ್ಲಿ ಬಹುಭಾಗವು ಜಗತ್ತಿಗೆ ಸರ್ವದಾ ಅಜ್ಞಾತವಾಗುತ್ತಿತ್ತು. ಆದ್ದರಿಂದ ಲೋಕವು ಮಾಸ್ಟರ್ ಮಹಾಶಯನಿಗೆ ಚಿರಋಣಿಯಾಗಿದೆ. ಆತನ ನಿಜವಾದ ಹೆಸರು ಮಹೇಂದ್ರನಾಥ ಗುಪ್ತ. ಜನರಿಗೆ ಆತನು ಮಾಸ್ಟರ್ ಮಹಾಶಯ ಎಂಬ ಹೆಸರಿನಿಂದ ಪರಿಚಿತನಾಗಿದ್ದಾನೆ. ಆತನ ಮಹಾಗ್ರಂಥಗಳೆಲ್ಲ ಇಂಗ್ಲಿಷಿನಲ್ಲಿ 'ಎಂ', ಬಂಗಾಳಿಯಲ್ಲಿ 'ಮ' ಎಂಬ ಸಂಕೇತನಾಮದಿಂದ ಪ್ರಚುರವಾಗಿವೆ.

ಮಹೇಂದ್ರನಾಥನು ಬ್ರಾಹ್ಮಸಮಾಜದ ಸದಸ್ಯನಾಗಿ ಕಲ್ಕತ್ತೆಯ ವಿದ್ಯಾಸಾಗರ ಹೈ ಸ್ಕೂಲಿನಲ್ಲಿ ಮುಖ್ಯೋಪಾಧ್ಯಾಯನಾಗಿದ್ದನು. ಒಂದು ದಿನ ವಿಹಾರಾರ್ಥವಾಗಿ ದಕ್ಷಿಣೇಶ್ವರಕ್ಕೆ ಹೋದವನು ಪರಮಹಂಸರನ್ನು ಕಂಡನು.

ಪರಮಹಂಸರು "ನಿನಗೆ ಮದುವೆಯಾಗಿದೆಯೇ?" ಎಂದು ಕೇಳಿದರು.

ಮಹೇಂದ್ರನು "ಆಗಿದೆ, ಮಹಾಶಯ."

ಪರಮಹಂಸರು ಬೆಚ್ಚಿ "ಆಗಲೇ ಮದುವೆಯಾಗಿದೆ!" ಎಂದುಕೊಂಡು, "ಮಕ್ಕಳಿದ್ದಾರೆಯೇ?" ಎಂದು ಕೇಳಿದರು.

ಮಹೇಂದ್ರನು ಮೆಲ್ಲನೆ "ಇದ್ದಾರೆ" ಎಂದನು.

ಪರಮಹಂಸರು ಖಿನ್ನರಾಗಿ ಕುಳಿತು ಸ್ವಲ್ಪ ಹೊತ್ತಿನ ಮೇಲೆ, "ಆದರೇನಂತೆ! ನಿನ್ನ ಶರೀರದಲ್ಲಿ ಸಲ್ಲಕ್ಷಣಗಳಿವೆ. . . . ನಿನ್ನ ಸಹಧರ್ಮಿಣಿ ಎಂತಹಳು? ವಿದ್ಯಾಶಕ್ತಿಯೋ ಅಥವಾ ಅವಿದ್ಯಾಶಕ್ತಿಯೋ?" ಎಂದು ಪ್ರಶ್ನೆ ಮಾಡಿದರು.

ಮಹೇಂದ್ರನಿಗೆ ಮಾತಿನ ಅರ್ಥವಾಗಲಿಲ್ಲ. ತನ್ನ ಹೆಂಡತಿ ವಿದ್ಯಾ

ವಂತೆಯೋ ಅಲ್ಲವೋ ಎಂದು ಕೇಳುತ್ತಾರೆ ಎಂದುಕೊಂಡು, "ಆಕೆ ಒಳ್ಳೆಯವಳು ; ಆದರೆ ಅಜ್ಞಾನಿ." ಎಂದನು.

ಪರಮಹಂಸರು ತಟಕ್ಕನೆ "ಆಹ! ನೀನು ಮಾತ್ರ ಮಹಾಸುಜ್ಞಾನಿ!' ಎಂದು ಭರ್ತ್ಸನೆ ಮಾಡಿದರು.

ಮಹೇಂದ್ರನಿಗೆ ಮುಖಭಂಗವಾಯಿತು. ಆತನು ಅದುವರೆಗೆ ಜ್ಞಾನವೆಂದರೆ ಗ್ರಂಥವಿದ್ಯೆ ಎಂದು ತಿಳಿದುಕೊಂಡಿದ್ದನು. ಬ್ರಹ್ಮಸಾಕ್ಷಾತ್ಕಾರವೊಂದನ್ನು ಬಿಟ್ಟರೆ ಉಳಿದುದೆಲ್ಲ ಅಜ್ಞಾನ ಎಂಬುದು ಆತನಿಗೆ ಆಮೇಲೆ ಗೊತ್ತಾಯಿತು.

ಪರಮಹಂಸರು ಮತ್ತೆ ಕೇಳಿದರು: "ನಿನಗೆ ಸಾಕಾರದಲ್ಲಿ ಇಷ್ಟವೋ ನಿರಾಕಾರದಲ್ಲಿ ಇಷ್ಟವೋ ?"

ಮಹೇಂದ್ರನಿಗೆ ಬಗೆಹರಿಯಲಿಲ್ಲ. ಪರಮಹಂಸರ ಮಾತು ವಿರೋಧಾಭಾಸವಾಗಿ ತೋರಿತು. ಈಶ್ವರನಲ್ಲಿ ಸಾಕಾರತೆ, ನಿರಾಕಾರತೆ ಎರಡೂ ಒಟ್ಟಿಗೆ ಇರುವುದೆಂತು ? ಆದರೂ ಹೇಳಿದನು : "ನಿರಾಕಾರದಲ್ಲಿ."

"ಇರಲಿ, ಯಾರಿಗೆ ಯಾವುದು ಇಷ್ಟವೋ ಅದೇ ಧ್ಯೇಯವನ್ನು ಅನುಸರಿಸುವುದು ಮೇಲು. ನಿರಾಕಾರದಲ್ಲಿ ನಿನಗೆ ನಂಬುಗೆ ಇರುವುದು ಬಹಳ ಶ್ಲಾಘ್ಯವಾದುದೇ. ಆದರೆ ನಿನ್ನ ಆದರ್ಶವೇ ಸರಿ, ಇತರರದು ತಪ್ಪು ಎನ್ನುವುದು ಮಾತ್ರ ಭ್ರಾಂತಿ ಮೂಲವಾದುದು. ಸಾಕಾರ ನಿರಾಕಾರಾಂಶಗಳೆರಡೂ ಸಮನಾಗಿ ಸತ್ಯವಾದುವೇ. ನಿನಗೆ ಇಷ್ಟವಾದುದನ್ನು ನೀನು ಅನುಸರಿಸು.

ಮಹೇಂದ್ರ—ಒಂದುವೇಳೆ ಈಶ್ವರನು ಸಾಕಾರನೆಂದರೂ ಅವನೇನು ಮಣ್ಣಿನ ಮೂರ್ತಿಯೇ ?

ಪರಮಹಂಸರು—ಉಂಟೇ ? ಅವನು ಚಿದ್ಘನಮೂರ್ತಿ.

ಮಹೇಂದ್ರ—ಹಾಗಾದರೆ, ದೇವರು ಮಣ್ಣಿನ ಮುದ್ದೆಯಲ್ಲ ಎಂಬ ವಿಷಯವನ್ನು ವಿಗ್ರಹಪೂಜಕರಿಗೆ ತಿಳಿಸುವುದು ನಮ್ಮ ಕರ್ತವ್ಯ.

ಪರಮಹಂಸರು—ಅಃ ! ಕಲ್ಕತ್ತೆಯಲ್ಲಿರುವ ನಿಮಗೆಲ್ಲ ಉಪನ್ಯಾಸಮಾಡುವುದೆಂದರೆ ಒಂದು ಹುಚ್ಚಾಸವಾಗಿ ಹೋಗಿದೆ. ನಿನ್ನನ್ನು ನೀನೇ ಮೊದಲು ತಿದ್ದಿಕೊಳ್ಳಬಾರದೆ? ಇನ್ನೊಬ್ಬರನ್ನು ತಿದ್ದಲು ನೀನು ಯಾರು? ಅದನ್ನು ಈಶ್ವರನು ನೋಡಿಕೊಳ್ಳುತ್ತಾನೆ. ಇಷ್ಟೆಲ್ಲ ಮಾಡಿದ ಅವನಿಗೆ ಅದನ್ನು ಮಾಡಲು ತ್ರಾಣ

ಎಲ್ಲವೇ ? ಅವನನ್ನು ಹೇಗೆ ಪೂಜಿಸಿದರೇನಂತೆ ? ಒಟ್ಟು ಪೂಜಿಸಿದರಾಯ್ತು ! ಮೊದಲು ನಿನ್ನನ್ನು ನೀನು ನೋಡಿಕೋ ! . . . . ಮೂರ್ತಿಪೂಜೆಯಿಂದಲೂ ಉಪಯೋಗವಿದೆ. ವಿವಿಧ ಭಾವದ ಭಕ್ತರಿಗೆ ವಿವಿಧವಾದ ಪೂಜಾಮಾರ್ಗಗಳಿವೆ. ತಾಯಿ ಮಕ್ಕಳ ಆರೋಗ್ಯ ಜೀರ್ಣಶಕ್ತಿಗಳಿಗೆ ಅನುಗುಣವಾಗಿ ಬೇರೆ ಬೇರೆ ಪಥ್ಯ ಕೊಡುತ್ತಾಳೆ.

ಮಹೇಂದ್ರ—ಸಂಸಾರದಲ್ಲಿ ಹೇಗಿರಬೇಕು ?

ಪರಮಹಂಸರು—ಕರ್ತವ್ಯಗಳನ್ನು ಮಾಡು ; ಆದರೆ ಮನಸ್ಸು ಈಶ್ವರನಲ್ಲಿರಲಿ. ಹೆಂಡತಿಮಕ್ಕಳು, ತಂದೆತಾಯಿ ಎಲ್ಲರೊಡನೆಯೂ ಬಾಳು. ಎಲ್ಲರ ಸೇವೆಯನ್ನೂ ಮಾಡು. ಆದರೆ ಹೃದಯದಲ್ಲಿ ಅವರು ನನ್ನವರಲ್ಲ ಎಂದು ನಿಸ್ಸಂಗಿಯಾಗಿರು. . . . ಶ್ರೀಮಂತರ ಮನೆಯ ದಾದಿ ಎಲ್ಲ ಕೆಲಸಗಳನ್ನೂ ಮಾಡುತ್ತಾಳೆ. ಆದರೆ ಅವಳ ಪ್ರಾಣವೆಲ್ಲಾ ಇರುವುದು ತನ್ನ ಮನೆಯಲ್ಲಿ. ಯಜಮಾನನ ಮಕ್ಕಳನ್ನು "ನನ್ನ ರಾಮು", "ನನ್ನ ಹರಿ" ಎಂದು ಆಡಿಸುತ್ತಾಳೆ. ಆದರೆ ಅವರಾರೂ ತನ್ನವರಲ್ಲ ಎಂಬುದು ಆಕೆಗೆ ಗೊತ್ತು. . . . ಭಕ್ತಿ ಬಲವಾಗುವ ಮೊದಲೇ ಜಗಜ್ಜಾಲದಲ್ಲಿ ಸಿಲುಕಿದರೆ ತೊಂದರೆ. . . . ಕೈಗೆ ಎಣ್ಣೆ ಬಳಿದುಕೊಂಡು ಹಲಸಿನ ಕಾಯನ್ನು ಸುಲಿ, ಇಲ್ಲದಿದ್ದರೆ ಕೈಯೆಲ್ಲ ಅಂಟಾಗುತ್ತದೆ. ಈಶ್ವರ ಭಕ್ತಿ ತೈಲದಂತೆ. . . . ಭಕ್ತಿ ಬಲವಾಗಬೇಕಾದರೆ ಏಕಾಂತ ಆವಶ್ಯಕ. ಹಾಲು ಗಟ್ಟಿಮೊಸರಾಗಬೇಕಾದರ ಹೆಪ್ಪುಹಾಕಿ ಅದನ್ನು ಅಲುಗಾಡದಂತೆ ಇರಿಸಬೇಕು. ಹಚ್ಚಾಗಿ ಅಲುಗಾಡಿಸಿದರೆ ಮೊಸರು ಗಟ್ಟಿಯಾಗುವುದಿಲ್ಲ. ಗಟ್ಟಿಯಾದ ಮೇಲೆ ಕಡೆದರೆ ಬೆಣ್ಣೆ ಬರುತ್ತದೆ. . . . ಪ್ರಪಂಚ ನೀರಿನಂತೆ. ಮನಸ್ಸು ಹಾಲಿನಂತೆ. ನೀರಿಗೆ ಹಾಲು ಹಾಕಿದರೆ ಎರಡೂ ಮಿಶ್ರವಾಗಿ ಬೇರೆ ಮಾಡಲು ಆಗುವುದಿಲ್ಲ. ಆದರೆ ಹಾಲನ್ನು ಮೊಸರುಮಾಡಿ ಕಡೆದು ಬಂದ ಬೆಣ್ಣೆಯನ್ನು ನೀರಿನಲ್ಲಿಟ್ಟರೆ ಅದು ಮಿಶ್ರವಾಗದೆ ತೇಲುತ್ತದೆ. ಅದರಂತೆ ಏಕಾಂತದಲ್ಲಿ ಧ್ಯಾನಸಾಧನೆ ಮಾಡಿ, ಜ್ಞಾನ ಭಕ್ತಿಗಳ ನವನೀತವನ್ನು ಸಂಪಾದಿಸಬೇಕು. ಆಮೇಲೆ ಅದನ್ನು ಸಂಸಾರಜಲದಲ್ಲಿ ಹಾಕಿದರೆ ಕದಡಿ ಮಿಶ್ರವಾಗುವುದಿಲ್ಲ, ತೇಲುತ್ತದೆ. . . . ನಿಜವಾದ ವ್ಯಾಕುಲತೆ ಇದ್ದರೆ ಈಶ್ವರನು ತೋರಿಯೇ ತೋರುತ್ತಾನೆ. ಜನರು ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಕೊಡಗಟ್ಟಲೆ

ಕಣ್ಣೀರು ಕರೆಯುತ್ತಾರೆ. ಆದರೆ ದೇವರಿಗಾಗಿ ಯಾರು ಅಳುತ್ತಾರೆ? ಕೈಲಾಸ ವೈಕುಂಠ ಮುಕ್ತಿಗಳೆಲ್ಲ ಕಣ್ಣೀನ ಹನಿಯಲ್ಲಿ ಮನೆಮಾಡಿಕೊಂಡಿವೆ!

'ಮಹೇಂದ್ರನು ಶ್ರೀರಾಮಕೃಷ್ಣರ ಅಂತರಂಗದ ಶಿಷ್ಯಮಂಡಲಿಗೆ ಸೇರಿದನು. ಸಂಸಾರವನ್ನೂ ಐಹಿಕಕರ್ತವ್ಯಗಳನ್ನೂ ತ್ಯಜಿಸಲಿಲ್ಲ. ಲೌಕಿಕದಲ್ಲಿ ಇದ್ದುಕೊಂಡೇ ಪಾರಲೌಕಿಕವನ್ನು ಸಾಧಿಸಿದನು. ಆತನು ದಿನದಿನವೂ ದಕ್ಷಿಣೇಶ್ವರಕ್ಕೆ ಹೋಗಿ ಪರಮಹಂಸರ ಮಾತುಕತೆಗಳನ್ನೆಲ್ಲ ತನ್ನ ಡೈರಿಯಲ್ಲಿ ಬರೆದುಕೊಂಡನು. ಅವುಗಳ ಮಹಾಮೂಲ್ಯತೆಯನ್ನು ಮುಂಗಾಣುವ ಪ್ರತಿಭೆ ಆತನಲ್ಲಿತ್ತು. ಗುರುದೇವನ ಮಹಾಸಮಾಧಿಯ ಅನಂತರ ಅವುಗಳನ್ನೆಲ್ಲ ಗ್ರಂಥರೂಪದಲ್ಲಿ ಪ್ರಕಟಿಸಿ ಸಂತಪ್ತಜೀವರಿಗೆ ಸುಧಾದಾನಮಾಡಿದನು. ನಾಲ್ಕು ವಹಿಗಳಲ್ಲಿ ವಂಗ ಭಾಷೆಯಲ್ಲಿ ಪ್ರಕಟಿತವಾಗಿರುವ ಆತನ ಮಹಾಕೃತಿಯಾಗಿರುವ "ಶ್ರೀರಾಮ ಕೃಷ್ಣ ವಚನಾಮೃತವು" ಜಗತ್ತಿನ ಸರ್ವಶ್ರೇಷ್ಠ ಧರ್ಮಗ್ರಂಥಗಳಲ್ಲಿ ಮಾನ ನೀಯ ಸ್ಥಾನಕ್ಕೆ ಸರ್ವಾರ್ಹವಾಗಿದೆ.

ಈಗಲೂ ಕಲ್ಕತ್ತೆಯಲ್ಲಿರುವ ಆತನ ಮನೆ ಪ್ರಾಚ್ಯಪಾಶ್ಚಾತ್ಯ ಯಾತ್ರಿಕರಿಗೆ ಒಂದು ದರ್ಶನೀಯ ಪುಣ್ಯಸ್ಥಲವಾಗಿದೆ. ಸಾವಿರಾರು ಜನರು ಆತನಲ್ಲಿಗೆ ಬಂದು ಪರಮಹಂಸರ ಪುಣ್ಯಚರಿತ್ರೆಯನ್ನು ಆತನ ಶ್ರೀಕಂಠದಿಂದಲೇ ಕೇಳಿ ಧನ್ಯರಾಗಿ ಹೋಗುತ್ತಾರೆ.

ಎರಡು ವರ್ಷಗಳ ಹಿಂದೆ ಎಂದರೆ ಕ್ರಿ. ಶ. ೧೯೨೯ ನೆಯ ಅಕ್ಟೋಬರ್ ತಿಂಗಳು ಒಂಬತ್ತನೆಯ ತೇದಿಯ ದಿನ ಆ ಮಹಾಪುರುಷನನ್ನು ಕಲ್ಕತ್ತೆಯ ಆತನ ಮನೆಯಲ್ಲಿ ಸಂದರ್ಶಿಸಿ ಎರಡು ಗಂಟೆಗಳ ಕಾಲ ಸಂಭಾಷಣೆಮಾಡುವ ಸುಯೋಗವು ಈ ಗ್ರಂಥಕರ್ತನಿಗೆ ಲಭಿಸಿತ್ತು. ನಾವು ಅಲ್ಲಿಗೆ ಹೋದಾಗ ಸಂಜೆ ಗಪ್ಪಾಗಿತ್ತು. ಮಾಸ್ಟರ್ ಮಹಾಶಯನು ತನ್ನ ಉನ್ನತ ಸೌಧದ ಶಿಖರ ವೇದಿಕೆ ಯಲ್ಲಿ ಧ್ಯಾನಾಸಕ್ತನಾಗಿದ್ದನು. ನಮ್ಮನ್ನು ಜನ್ಮಜನ್ಮಾಂತರದ ಬಂಧುಗಳಂತೆ ಸ್ವೀಕರಿಸಿ ಆದರಿಸಿದನು. ಶಾಂತನೂ ಸತ್ಯಶೀಲನೂ ಮಧುರಭಾಷಿಯೂ ಆಗಿರುವ ಆತನಲ್ಲಿ ಪರಮಹಂಸ ಶ್ರೀರಾಮಕೃಷ್ಣರ ಪ್ರಭಾವವು ಪ್ರಸ್ಫುಟವಾಗಿತ್ತು. ನೀಳವಾದ ಗಡ್ಡದಿಂದಲೂ ನರೆತ ಬೆಳ್ಳಿಗೂದಲಿನಿಂದಲೂ ಜರಾಶೀರ್ಣಶರೀರ ದಿಂದಲೂ ಆ ವೃದ್ಧಮೂರ್ತಿಯ ಮಂಗಳ ದೃಶ್ಯವು ಪೂರ್ವಕಾಲದ ಮಹರ್ಷಿ

ಗಳನ್ನು ಮನಸ್ಸಿಗೆ ತರುತ್ತಿತ್ತು. ಅತಿ ಸಾಧಾರಣ ವಸ್ತ್ರಧಾರಿಯಾಗಿದ್ದ ಆತನು ಗಾಂಭೀರ್ಯ ನಿರಂಹಂಕಾರತೆಗಳು ರೂಪುಗೊಂಡಂತಿದ್ದನು.

"ಸಾಧಾರಣ ಮನುಷ್ಯನು ಈಶ್ವರನನ್ನು ಪ್ರತ್ಯಕ್ಷವಾಗಿ ನೋಡಲು ಸಾಧ್ಯ ಎಂಬುದನ್ನು ನಂಬಲಾರನು. ಆದರೆ ಸದಾ ಈಶ್ವರನಲ್ಲಿಯೇ ಬಾಳಿ, ಆತನನ್ನು ಕಂಡು ಮಾತಾಡುತ್ತಿದ್ದ ಮಹಾ ದೇವಮಾನವನೊಬ್ಬನನ್ನು ಸೇವಿಸುವ ಮಹಾಪುಣ್ಯವು ನಮ್ಮದಾಗಿತ್ತು."

ನಮ್ಮ ಜೊತೆಯಲ್ಲಿದ್ದವರೊಬ್ಬರು, ತಾವು ಧರ್ಮಜೀವನವನ್ನು ಕೈಕೊಂಡು ಧರ್ಮಸಂಸ್ಥೆಯಲ್ಲಿದ್ದರೂ ತಮಗಿನ್ನೂ ಏಕೆ ಬೆಳಕು ಬರಲಿಲ್ಲ ಎಂದು ಕೇಳಿದರು. ಅದಕ್ಕೆ ಉತ್ತರವಾಗಿ ಮಹಾಶಯನು ಹೀಗೆಂದನು.

"ಯಾವಾಗಲೂ ಬೆಳಕಿನಲ್ಲಿಯೇ ಇರುವವರಿಗೆ ಅದರ ಮಹಿಮೆ ಗೊತ್ತಾಗದಿರಬಹುದು; ಕತ್ತಲೆಗೆ ಹೋಗಿ ಬಂದರೆ ಆಗ ಗೊತ್ತಾಗುವುದು. ನೀನು ಒಂದು ಸಾರಿ ದಡಕ್ಕೆ ನೆಗೆದರೆ ಆಗ ಅದಕ್ಕೆ ನೀರಿನ ಕೃಪಾಮಹಿಮೆ ತಿಳಿಯುತ್ತದೆ."

"ಅವತಾರವು ಇತಿಹಾಸವನ್ನು ರಚಿಸುತ್ತದೆ. ಇತಿಹಾಸವು ಅವತಾರವನ್ನು ರಚಿಸುವುದಿಲ್ಲ."

"ಹಂದಿಯ ಮುಂದೆ ಮುತ್ತುಗಳನ್ನು ಚೆಲ್ಲಬಾರದು."

ಆತನಿಗೆ ನಮಸ್ಕರಿಸಿ, ಹಸ್ತಲಾಘವವಿತ್ತು ಬೀಳ್ಕೊಂಡ ಮೇಲೆ ಮಹಾ ವ್ಯಕ್ತಿಯೊಬ್ಬನ ದರ್ಶನವಾಯಿತೆಂದು ಮನದಲ್ಲಿಯೇ ಹಿಗ್ಗಿದೆವು. ಕಲ್ಕತ್ತೆಯ ಚಂಚಲ ದ್ರುತ ಜೀವನಸಮುದ್ರದಲ್ಲಿ ಮಾಸ್ಟರ್ ಮಹಾಶಯನು ಸ್ಥಿರಶಾಂತ ದ್ವೀಪವಾಗಿದ್ದಾನೆ.[1]

[1] ಮಾಸ್ಟರ್ ಮಹಾಶಯನ ಮಂಗಳಾತ್ಮವು ೧೯೩೨ ನೆಯ ಜೂನ್ ತಿಂಗಳು ೪ ನೆಯ ತಾರೀಖು ತನ್ನ ಇಹಯಾತ್ರೆಯನ್ನು ಪೂರೈಸಿ ಬ್ರಹ್ಮಲೀನವಾಯಿತು

## ೫. " ಕಾಮಿನಿ "

ಶ್ರೀರಾಮಕೃಷ್ಣರು ಸರ್ವಧರ್ಮಸಮನ್ವಯಾಚಾರ್ಯರು ಎಂಬುದು ಅವರು ಸಾಧಿಸಿದ ಭಿನ್ನ ಭಿನ್ನ ಮತಸಾಧನೆಗಳಿಂದ ತಿಳಿದುಬರುವಂತೆ ಸರ್ವ ಭಾವಗಳ ಸಮನ್ವಯಮೂರ್ತಿ ಎಂಬುದೂ ಅವರು ಕೈಕೊಂಡು ಪೂರೈಸಿದ ವಿವಿಧ ಭಾವಸಾಧನೆಗಳಿಂದ ಗೊತ್ತಾಗುತ್ತದೆ. ಆದ್ದರಿಂದಲೆ ಅವರು ಮಕ್ಕಳಿಗೆ ಮಗುವಾಗಿ, ಭಕ್ತರಿಗೆ ಭಕ್ತರಾಗಿ, ಜ್ಞಾನಿಗಳಿಗೆ ಜ್ಞಾನಿಯಾಗಿ ತೋರಲು ಸಾಧ್ಯವಾಯಿತು. ಮಧುರಭಾವ ಸಾಧನೆಯ ಕಾಲದಲ್ಲಿ ಹೆಣ್ಣುಗಳಂತೆ ಉಟ್ಟು ತೊಟ್ಟು ರಾಧೆಯ ಭಾವವನ್ನು ಆರೋಪಿಸಿಕೊಂಡು, ಆಕೆಯಲ್ಲಿ ವಿಲೀನವಾಗಿ ಪರಮ ಪ್ರೇಮಿಕಪುರುಷನಾದ ಬೃಂದಾವನದ ಗೋಪೀನಾಥ ಶ್ರೀಕೃಷ್ಣನನ್ನು ಪ್ರತ್ಯಕ್ಷಮಾಡಿಕೊಂಡ ಅವರಿಗೆ ಸ್ತ್ರೀಭಾವವೂ ಇತರ ಭಾವಗಳಂತೆ ಸುಲಭ ವಾಗಿತ್ತು. ಆದ್ದರಿಂದ ಸ್ತ್ರೀಯರಿಗೆ ಸ್ತ್ರೀಯಾಗಿ ತೋರುತ್ತಿದ್ದರು. ಸ್ತ್ರೀತ್ವ ಪುರುಷತ್ವಗಳಿಗೆ ಅತೀತವಾಗಿ ಸ್ಫಟಿಕ ಶುಭ್ರಶೀಲರಾಗಿದ್ದ ಅವರಲ್ಲಿ ಹೆಂಗಸರಿಗೆ ಸಂಕೋಚವಿರುತ್ತಿರಲಿಲ್ಲ. " ಶ್ರೀರಾಮಕೃಷ್ಣರನ್ನು ನಾವು ಪುರುಷರೆಂದು ಭಾವಿಸಿಯೇ ಇರಲಿಲ್ಲ. ನಮ್ಮಲ್ಲಿಯೇ ಒಬ್ಬರೆಂದು ತಿಳಿದಿದ್ದೆವು. ಆದ್ದರಿಂದಲೇ ಅವರೆದುರು ನಮಗೆ ಸ್ವಲ್ಪವೂ ಸಂಕೋಚವಾಗುತ್ತಿರಲಿಲ್ಲ. ನಮಗವರು ಅಂತ ರಂಗದ ಸಖಿಯಾಗಿದ್ದರು.'' ಎಂದು ಅವರಲ್ಲಿಗೆ ಬಂದ ಸ್ತ್ರೀಯರೆಲ್ಲರೂ ಏಕ ಕಂಠದಿಂದ ಹೇಳಿದ್ದಾರೆ.

ಅವರ ಉಪದೇಶದಲ್ಲಿ ಕಾಮಿನೀಕಾಂಚನತ್ಯಾಗವೆಂಬುದು ಮಹಾಪಲ್ಲವಿ ಯಾಗಿದೆ. ಕಾಮಿನೀತ್ಯಾಗವೆಂದರೆ ಸ್ತ್ರೀದ್ವೇಷ ಅಥವಾ ತಿರಸ್ಕಾರ ಎಂದಲ್ಲವೆಂದು ಹಿಂದೆಯೇ ಸಂಕ್ಷೇಪವಾಗಿ ವಿವರಿಸಿದ್ದೇವೆ. ಕಾಮಿನಿ ಎಂಬ ಪದವನ್ನು ಕಾಮ ಎಂಬ ಪದಕ್ಕೆ ಪರ್ಯಾಯವಾಗಿ ಉಪಯೋಗಿಸಿದ್ದಾರೆ. ಅಲ್ಲದೆ ಸ್ತ್ರೀಯರಿಗೆ ಬೋಧಿಸುವಾಗ ಪುರುಷರ ಮೋಹಜಾಲಕ್ಕೆ ಸಿಲುಕಬಾರದು ಎಂದು ಹೇಳು ತ್ತಿದ್ದರು. ಸ್ತ್ರೀಯಲ್ಲಿ ಕಾಮಿನಿಯನ್ನು ಕಾಣಬೇಡ, ಜಗನ್ಮಾತೆಯನ್ನು ಕಾಣು ಎಂಬುದೇ ಅವರ ಉಪದೇಶದ ತಾತ್ಪರ್ಯ.

ಧರ್ಮಕಾಂಕ್ಷಿಗಳಾದ ಅನೇಕ ಪುರುಷರು ದಕ್ಷಿಣೇಶ್ವರಕ್ಕೆ ಬಂದಂತೆಯೇ ಅನೇಕ ಸ್ತ್ರೀಯರೂ ಅಲ್ಲಿಗೆ ಬಂದರು. ಅವರಲ್ಲಿ ಹಲವರು ಶಿಷ್ಯೆಯರಾದರು; ಕೆಲವರು ಅವರ ನೇತೃತ್ವದಲ್ಲಿ ಧರ್ಮಸಾಧನೆಗಳನ್ನೂ ಮಾಡಿ ಉತ್ತೀರ್ಣರಾದರು.

ಮನಮೋಹನ ಮಿತ್ರನ ತಾಯಿಯೂ ತನ್ನ ಮಗನಂತೆಯೇ ಶ್ರೀರಾಮಕೃಷ್ಣರ ಭಕ್ತಳಾದಳು. ಪತಿಪರಾಯಣೆಯಾದ ಆಕೆ ತನ್ನ ಪತಿ ಸ್ವರ್ಗಸ್ಥನಾದ ಮೇಲೆ ಪೂಜೆ ಜಪ ಧ್ಯಾನಗಳಲ್ಲಿ ನಿರತಳಾಗಿ ತನ್ನ ಕಾಲವನ್ನು ಕಳೆಯುತ್ತಿದ್ದಳು. ಆದರೆ ಆಕೆಯ ಆಚರಣೆಯಲ್ಲಿ ಒಂದು ವಿಶೇಷವಿತ್ತು. ವಿಧವೆಯಾದರೂ ಲೋಕರೂಢಿಗೆ ವಿರುದ್ಧವಾಗಿ ಕೆಂಪು ಅಂಚಿನ ಸೀರೆಯನ್ನು ಉಟ್ಟುಕೊಂಡು, ಕೈಯಲ್ಲಿ ಚಿನ್ನದ ಬಳೆಗಳನ್ನು ತೊಟ್ಟುಕೊಂಡು ಸಧವೆಯಂತೆ ಇರುತ್ತಿದ್ದಳು. ಇದರಿಂದ ಆಕೆ ಜನಗಳ ದೋಷಾರೋಪಣೆಗೆ ಗುರಿಯಾಗಿದ್ದಳು. ಆಕೆ ಮಾತ್ರ ಯಾವುದನ್ನೂ ಲೆಕ್ಕಿಸದೆ ಈಶ್ವರಧ್ಯಾನದಲ್ಲಿ ಆಸಕ್ತೆಯಾಗಿ ಇರುತ್ತಿದ್ದಳು. ಒಂದು ದಿನ ಆಕೆ ಇತರ ಸ್ತ್ರೀಯರೊಡನೆ ದಕ್ಷಿಣೇಶ್ವರಕ್ಕೆ ಬಂದಾಗ ಮಾತುಮಾತಿಗೆ ಆಕೆಯ ಆಚರಣೆಯ ವಿಚಾರ ಬಂದಿತು. ಶ್ರೀರಾಮಕೃಷ್ಣರು ಹೇಳಿದರು: "ಸತಿ ಪತಿಯನ್ನು ಭಕ್ತಿಪ್ರೇಮಗಳಿಂದ ಸೇವಿಸಬೇಕು. ಪತಿವ್ರತೆಯಾದವಳು ಪತಿಯೇ ದೇವರೆಂದು ಭಾವಿಸುತ್ತಾಳೆ. ಪತಿ ತೀರಿಹೋದ ಮೇಲೆ ಆತನನ್ನು ಶ್ರೀಕೃಷ್ಣಪರಮಾತ್ಮನೆಂದು ಭಾವಿಸಿ ಆರಾಧಿಸಿದ ಸ್ತ್ರೀಯರೂ ಇದ್ದಾರೆ—ರಾಣಿಯೊಬ್ಬಳು ತನ್ನ ಗಂಡನು ಜೀವಂತನಾಗಿದ್ದಾಗ ಚಿನ್ನದ ಆಭರಣಗಳನ್ನೇ ತೊಟ್ಟುಕೊಳ್ಳುತ್ತಿರಲಿಲ್ಲ. ಆಗಿನ ಪದ್ಧತಿಯಂತೆ ಒಂದು ಜೊತೆ ಕಬ್ಬಿಣದ ಬಳೆಗಳನ್ನು ಮಾತ್ರ ಹಾಕಿಕೊಂಡಿದ್ದಳು. ಬಂಧುಗಳು ಚಿನ್ನದ ಒಡವೆಗಳನ್ನು ಹಾಕಿಕೋ ಎಂದು ಎಷ್ಟು ಪೀಡಿಸಿದರೂ ಸಮ್ಮತಿಸಲಿಲ್ಲ. ಕಾಲಾನಂತರ ದೊರೆ ಸತ್ತುಹೋದನು. ಆಗ ರಾಣಿ ಕಬ್ಬಿಣದ ಬಳೆಗಳನ್ನು ಮುರಿದು ಬಿಸಾಡಿ, ಅವುಗಳಿಗೆ ಬದಲಾಗಿ ಅಂದವಾದ ಚಿನ್ನದ ಬಳೆಗಳನ್ನು ಹಾಕಿಕೊಂಡಳು. ಅದನ್ನು ಕಂಡು ಜನಗಳಿಗೆ ಆಶ್ಚರ್ಯವಾಯಿತು. ಕಾರಣವೇನೆಂದು ಕೇಳಿದರು. ಅದಕ್ಕೆ ರಾಣಿ ಹೇಳಿದಳು: 'ಇದುವರೆಗೆ ನನ್ನ ಪತಿ ನಶ್ವರಮಾನವ ದೇಹಧಾರಿಯಾಗಿ ನನ್ನ ಮುಂದಿದ್ದನು; ಆದ್ದರಿಂದಲೇ ನಾನು

ಕೀಳಾದ ಕಬ್ಬಿಣದ ಬಳೆಗಳನ್ನು ಹಾಕಿಕೊಂಡಿದ್ದನು. ಈಗ ಆತನು ಅವಿನಶ್ವರವೂ ನಿತ್ಯವೂ ಆದ ಪರಮಾತ್ಮನಲ್ಲಿ ಐಕ್ಯವಾಗಿದ್ದಾನೆ. ಅದಕ್ಕಾಗಿ ಮೇಲಾದ ಚಿನ್ನದ ಬಳೆಗಳನ್ನು ತೊಟ್ಟುಕೊಂಡಿದ್ದೇನೆ'—ಹಾಗೆಯೇ ಈಕೆಯ ಆಚರಣೆಯೂ ಅರ್ಥ ಪೂರ್ಣವಾಗಿದೆ. ತನ್ನ ಪತಿಯ ವಿಚಾರವಾಗಿ ಈಕೆಗೆ ಮಹೋನ್ನತಭಾವವಿದೆ.'' ಆಕೆಯ ಅಳಿಯನಾದ ರಾಖಾಲನು ಶ್ರೀರಾಮಕೃಷ್ಣರಲ್ಲಿಗೆ ಬಂದಾಗ ಆತನು ಸಂನ್ಯಾಸಿಯಾಗುವನೆಂಬ ಸುದ್ದಿ ಎಲ್ಲೆಲ್ಲಿಯೂ ಗುಸುಗುಸು ಹಬ್ಬಿತು. ಆಗ ಆಕೆ ಎಂದಳಂತೆ: "ಈಶ್ವರಸಾಕ್ಷಾತ್ಕಾರಕ್ಕಾಗಿಯೂ ಸಾಧುಸಂತರ ಸೇವೆ ಗಾಗಿಯೂ ನನ್ನ ಅಳಿಯನು ಸಂಸಾರತ್ಯಾಗಮಾಡಿದ ದಿನವನ್ನು ನಾನು ಶುಭ ದಿನವೆಂದೇ ಭಾವಿಸುತ್ತೇನೆ.'' ತರುವಾಯ ಆ ಶುಭದಿನವೂ ಪ್ರಾಪ್ತವಾಗಿ ರಾಖಾಲನು ವಿಖ್ಯಾತರಾದ ಸ್ವಾಮಿ ಬ್ರಹ್ಮಾನಂದರಾದನು. ಅದನ್ನು ಮುಂದೆ ಕಾಣಲಿದ್ದೇವೆ.

ಶ್ರೀರಾಮಕೃಷ್ಣರ ಇನ್ನೊಬ್ಬ ಭಕ್ತೆ 'ಜೋಗಿನ್ ಮಾ' ಎಂದು ಹೆಸರುಗೊಂಡಿದ್ದಾಳೆ. ಆಕೆ ವಿದ್ಯಾವತಿಯಾದ ಶ್ರೀಮಂತ ಸತಿ. ಪರಮಹಂಸ ರಿಂದ ಮಂತ್ರದೀಕ್ಷೆಯನ್ನು ಕೈಕೊಂಡು ಶ್ರೀಶಾರದಾಮಣಿದೇವಿಯ ಅನವರತ ಸಂಗಿನಿಯಾದಳು. ಸ್ವಂತ ಆತ್ಮಕಲ್ಯಾಣವೊಂದನ್ನೇ ಬಯಸದೆ ಸ್ತ್ರೀಯರಿಗೆ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಸಾರ್ವಜನಿಕ ಕಾರ್ಯಗಳಲ್ಲಿಯೂ ಉದ್ಯುಕ್ತೆ ಯಾದಳು. ಜೋಗಿನ್ ಮಾತೆಯಂತೆಯೇ "ಗೋಲಾಪ್ ಮಾ", "ಗೌರಿ ದಾಸಿ" ಮೊದಲಾದ ಸ್ತ್ರೀಭಕ್ತರೂ ಪರಮಹಂಸರಿಂದ ಅನುಗೃಹೀತರಾಗಿ ಧರ್ಮ ಜೀವನದಲ್ಲಿ ಮುಂದುವರಿದರು.

ಇವರೆಲ್ಲರಿಗಿಂತಲೂ ಅಘೋರಮಣಿದೇವಿ ಎಂಬಾಕೆಯ ಕಥೆ ವಿಚಿತ್ರವೂ ವಿಸ್ಮಯಕಾರಿಯೂ ಆಗಿದೆ. ಆಕೆ ತರುವಾಯ ಜೀವನದಲ್ಲ 'ಗೋಪಾಲನ ತಾಯಿ' ಎಂದು ಪ್ರಸಿದ್ಧೆಯಾದಳು. ಕುಲೀನ ಬ್ರಾಹ್ಮಣವಂಶದಲ್ಲಿ ಜನಿಸಿದ ಆಕೆ ಬಾಲಿಕೆಯಾಗಿದ್ದಾಗಲೇ ವಿಧವೆಯಾದಳು. ದಕ್ಷಿಣೇಶ್ವರಕ್ಕೆ ಮೂರು ಮೈಲಿ ದೂರದಲ್ಲಿದ್ದ ರಾಧಾಗೋವಿಂದ ದೇವಾಲಯದಲ್ಲಿ ವಾಸಿಸುತ್ತ, ಬಳಿ ಯಲ್ಲಿಯೇ ಪ್ರವಹಿಸುತ್ತಿದ್ದ ಅಮರಾಪಗೆಯ ತೀರದಲ್ಲಿ ಧ್ಯಾನ ಜಪಾದಿಗಳಲ್ಲಿ ಕಾಲಕಳೆಯುತ್ತ ಕಠೋರತಪಸ್ವಿನಿಯಾಗಿದ್ದಳು. ವೈಷ್ಣವಭಾವಾಪನ್ನೆಯಾಗಿದ್ದ

ಆಕೆ ಮಂತ್ರದೀಕ್ಷಿತೆಯಾಗಿ ವಾತ್ಸಲ್ಯಭಾವಸಾಧನೆಯನ್ನು ಕೈಕೊಂಡು ಶಿಶು ಶ್ರೀಕೃಷ್ಣನನ್ನು ತನ್ನ ಮಗುವೆಂದು ಭಾವಿಸಿ ಆರಾಧಿಸುತ್ತಿದ್ದಳು. ಇಂತು ಮೂವತ್ತು ಸಂವತ್ಸರಗಳು ಉಪಾಸನೆ ಮಾಡಿದ ಮೇಲೆ ಕ್ರಿ. ಶ. ೧೮೮೪ ರಲ್ಲಿ ಆಕೆಗೆ ಶ್ರೀರಾಮಕೃಷ್ಣರ ಸಂದರ್ಶನವಾಯಿತು. ಮೊದಸೆಯ ಸಾರಿ ಕಂಡಾಗಲೇ ಪರಮಹಂಸರು ಅಘೋರಮಣಿದೇವಿಗೆ ತನ್ನ 'ಇಷ್ಟ'ವಾದ ಶಿಶುಗೋಪಾಲ ನಂತೆ ತೋರಿದರು. ತರುವಾಯ ಆಕೆಯ ಪರವಾದ ಅವರ ಆಚರಣೆಯೆಲ್ಲವೂ ಶಿಶುಭಾವಪೂರ್ಣವಾಗಿತ್ತು. ಎರಡನೆಯ ಸಾರಿ 'ಗೋಪಾಲನ ತಾಯಿ' ಪರಮಹಂಸರಲ್ಲಿಗೆ ಬಂದಾಗ ಅವರು ಎಳಮಗುವಿನಂತೆ "ಬಂದೆಯಾ? ಅಮ್ಮಾ! ನನಗೇನು ತಿಂಡಿ ತಂದಿದ್ದೀಯೆ? ಇತ್ತ ಕೊಡು." ಎಂದು ಕೇಳಿದರು. ಅಘೋರ ಮಣಿ ತಾನು ತಂದಿದ್ದ ಮಿಠಾಯಿಗಳನ್ನು ಸ್ವಲ್ಪ ಸಂಕೋಚಪಟ್ಟುಕೊಂಡು ಕೊಡಲು, "ಅಂಗಡಿಯಿಂದ ಇವುಗಳನ್ನು ಕೊಂಡುಕೊಳ್ಳಲು ದುಡ್ಡನ್ನೇಕೆ ಖರ್ಚುಮಾಡುತ್ತೀಯೇ? ನೀನೇ ಕಾಯುಂಡೆಗಳನ್ನು ತಯಾರುಮಾಡಿ ತರ ಬಾರದೇ? ಅಥವಾ ನೀನು ಊಟಮಾಡುವ ಪದಾರ್ಥಗಳಲ್ಲಿಯೇ ನನಗೂ ಸ್ವಲ್ಪ ತಂದರೆ ಸಾಕು. ನೀನೇ ಅಡುಗೆಮಾಡಿದ ಪದಾರ್ಥಗಳನ್ನು ತಿನ್ನಲು ನನಗೆ ತುಂಬ ಇಷ್ಟ." ಎಂದರು. ಹೀಗೆ ಸಲಸಲವೂ ದಿನದಿನವೂ ಅಘೋರಮಣಿ ತಮ್ಮೆಡೆಗೆ ಬಂದಾಗಲೆಲ್ಲ ಪರಮಹಂಸರು ತಿಂಡಿಗಾಗಿ ಪೀಡಿಸತೊಡಗಿದರು. ಇದನ್ನು ಕಂಡು ಆಕೆ "ಇವನೆಂತಹ ತಿಂಡಿಪೋತ ಸಾಧು! ದೇವರು, ಧರ್ಮ ಇವುಗಳನ್ನು ಕುರಿತು ಮಾತಾಡುವುದನ್ನು ಬಿಟ್ಟು ಮೂರು ಹೊತ್ತೂ 'ತಿಂಡಿ! ತಿಂಡಿ! ತಿಂಡಿ!' ಎಂದು ಅರಚುತ್ತಾನೆ. ನಾನೋ ಬಡ ವಿಧವೆ! ದಿನಾಗಲೂ ಎಲ್ಲಿಂದ ತರಲಿ ಇವನಿಗೆ ತಿಂಡಿಯನ್ನು? ಸಾಕಪ್ಪಾ! ಇವನ ಸಹ ವಾಸ ಸಾಕು! ನಾನು ಇನ್ನು ಮೇಲೆ ಇಲ್ಲಿಗೆ ಬರುವುದಿಲ್ಲ." ಎಂದುಕೊಂಡು ಹೋಗುವಳು. ಆದರೆ ಮತ್ತೆ ಏನೋ ಒಂದು ಅನಿವಾರ್ಯ ಆಕರ್ಷಣೆಯಿಂದ ಪ್ರೇರಿತಳಾಗಿ ದಕ್ಷಿಣೇಶ್ವರಕ್ಕೆ ಬರುವಳು. ಪರಮಹಂಸರು ಪುನಃ ತಿಂಡಿ, ಊಟ, ಅಡುಗೆ ಇವುಗಳ ವಿಚಾರವಾಗಿಯೇ ಮಾತಾಡುವರು! ಒಂದೊಂದು ಸಾರಿ ರೇಜಿಗೆ ಹಿಡಿದು "ಅಯ್ಯೋ! ಗೋಪಾಲ, ನಿನ್ನ ಉಪಾಸನೆ ಮಾಡಿದ್ದಕ್ಕೆ ನನಗಿದೇ ಫಲವೇ? ಎಂಥಾ ತಿಂಡಿಪೋತ, ಹೊಟ್ಟೆಬಾಕ ಸಂನ್ಯಾಸಿಯ ಬಳಿಗೆ

ನನ್ನನ್ನು ತಂದುಬಿಟ್ಟೆ ! " ಎಂದು ಶಪಿಸುವಳು. ಆದರೆ ದಕ್ಷಿಣೇಶ್ವರಕ್ಕೆ ಬರುವುದ ನ್ನಾಗಲಿ, ತಿಂಡಿ ತರುವುದನ್ನಾಗಲಿ ಬಿಡಲಿಲ್ಲ.

ಹೀಗೆಯೇ ಕೆಲವು ತಿಂಗಳು ಕಳೆದುವು. ಒಂದು ರಾತ್ರಿ ಮೂರು ಗಂಟೆಯ ಹೊತ್ತಿಗೆ ಅಘೋರಮಣಿ ತನ್ನ ಪೂಜಾಮಂದಿರದಲ್ಲಿ ಧ್ಯಾನಮಾಡುತ್ತಿದ್ದಳು. ಇದ್ದಕ್ಕಿದ್ದ ಹಾಗೆ ಶ್ರೀರಾಮಕೃಷ್ಣ (ಪರಮಹಂಸ)ರನ್ನು ಕಂಡಳು ! " ಇದೇನು ? ಈತನೇಕೆ ಇಷ್ಟು ರಾತ್ರಿ ಇಲ್ಲಿಗೆ ಬಂದಿದ್ದಾನೆ ? " ಎಂದು ಆಶ್ಚರ್ಯ ಪಡುತ್ತಿರುವಾಗಲೇ ಪರಮಹಂಸರು ಅದೃಶ್ಯರಾಗಿ ಆ ಮೂರ್ತಿಯಿಂದ ಶಿಶು ಗೋಪಾಲನ ತ್ರಿಭುವನಮೋಹಕವಾದ ನವನೀತಸದೃಶ ಕೋಮಲ ಸಜೀವ ವಿಗ್ರಹವು ಹೊರಹೊಮ್ಮಿ ಅಂಬೆಗಾಲಿಕ್ಕುತ್ತ ಹರಿದು ಒಳಿಗೆ ಒಂದು ಕೈಯನ್ನು ಮೇಲೆತ್ತಿ ಅಘೋರಮಣಿಯನ್ನು ಎವೆಯಿಕ್ಕದೆ ನೋಡುತ್ತ " ಅಮ್ಮಾ, ನನಗೆ ಬೆಣ್ಣೆ ಬೇಕು ! " ಎಂದು ತೊದಲು ನುಡಿಯಿಂದ ಮುದ್ದಾಗಿ ಮಾತಾಡಿತು. ಅಘೋರಮಣಿ ಬೆರಗಾದಳು ! ಹರ್ಷೋನ್ಮಾದದಿಂದ ಕೂಗಿಕೊಂಡಳು ! " ಅಯ್ಯೋ, ನಾನು ಬಡವೆ, ನಿರ್ಗತಿಕ ವಿಧವೆ, ಬೆಣ್ಣೆಯನ್ನು ಎಲ್ಲಿಂದ ತರಲಿ ? ನನ್ನ ಕಂದಾ ! " ಎಂದಳು. ಆದರೂ ಶಿಶುಗೋಪಾಲನು ಹಟ ಮಾಡಿದನು " ಏನಾದರೂ ಕೊಡು ತಿನ್ನುವುದಕ್ಕೆ." ಎಂದು. ಕಡೆಗೆ ಕೆಲವು ಕಾಯುಂಡೆ ಗಳನ್ನು ಕೊಟ್ಟಳು. ಗೋಪಾಲನು ಅವುಗಳನ್ನು ತಿನ್ನುತ್ತಾ ಆಕೆಯ ತೊಡೆಯ ಮೇಲೆ ಕೂತುಕೊಂಡನು. ಪ್ರಾತಃಕಾಲದಲ್ಲಿ ಅಘೋರಮಣಿ ತನ್ನ ಶಿಶು ಗೋಪಾಲನನ್ನು ಎದೆಗಪ್ಪಿ ಎತ್ತಿಕೊಂಡು ಹುಚ್ಚಿಯಂತೆ ದಕ್ಷಿಣೇಶ್ವರಕ್ಕೆ ಧಾವಿಸಿದಳು. ಅಲ್ಲಿಗೆ ಹೋದ ಕೂಡಲೇ ಶಿಶುಗೋಪಾಲನು ಆಕೆಯ ಕೈಯಿಂದ ನುಣುಚಿಕೊಂಡುಹೋಗಿ ಭಾವದಲ್ಲಿದ್ದ ಪರಮಹಂಸರಲ್ಲಿ ಲೀನವಾದನು ! ಅಂದಿ ನಿಂದ ಅಘೋರಮಣಿಗೆ ಶ್ರೀರಾಮಕೃಷ್ಣರು ತನ್ನ ಇಷ್ಟದೇವತೆಯಲ್ಲದೆ ಬೇರೆ ಯಲ್ಲ ಎಂದು ಗೊತ್ತಾಗಿ ಪ್ರಸನ್ನಚಿತ್ತೆಯಾದಳು. ಆಗ ಆಕೆಗೆ ಅವರ ತಿಂಡಿ ಪೋತತನದ ಗುಟ್ಟು ಹೊಳೆಯಿತು.

ಒಂದು ದಿನ ಅರ್ಧ ನಿರೀಶ್ವರವಾದಿಯಾಗಿದ್ದ ನರೇಂದ್ರನಾಥನು ದಕ್ಷಿಣೇ ಶ್ವರಕ್ಕೆ ಬಂದಿದ್ದಾಗ ' ಗೋಪಾಲನ ತಾಯಿ 'ಯೂ ಅಲ್ಲಿದ್ದಳು. ದರ್ಶನಗಳಿಗೆಲ್ಲ ಚಿತ್ತಭ್ರಮೆಯೇ ಕಾರಣವೆಂದು ವಾದಿಸುತ್ತಿದ್ದ ಆತನಿಗೆ ತನ್ನ ಅನುಭವದ

ವೃತ್ತಾಂತವನ್ನು ತಿಳಿಸಲು ವಿನೋದಶೀಲರಾಗಿದ್ದ ಪರಮಹಂಸರು ಅಘೋರ ಮಣಿದೇವಿಗೆ ಬೆಸಸಿದರು. ಆಕೆ ಮೊದಲು ಹಿಂಜರಿದರೂ ಕಡೆಗೆ ಶ್ರೀರಾಮ ಕೃಷ್ಣರ ಉತ್ತೇಜನದಿಂದ ಧೈರ್ಯಗೊಂಡು ತನ್ನ 'ಶಿಶುಗೋಪಾಲ ದರ್ಶನ'ದ ಕಥೆಯನ್ನು ಸವಿಸ್ತಾರವಾಗಿ ಹೇಳಿದಳು. ನಡುನಡುವೆ "ಅಪ್ಪಾ, ನರೇನ್, ನೀನು ಬುದ್ಧಿಶಾಲಿ; ಶಾಸ್ತ್ರಗಳನ್ನು ಓದಿದ್ದೀಯೆ. ನಾನೋ ಏನೂ ತಿಳಿಯದ ದರಿದ್ರ ಮೂರ್ಖ ವಿಧವೆ. ನನ್ನ ದರ್ಶನವು ನಿಜವೋ ಸುಳ್ಳೋ ನೀನೇ ಹೇಳಬೇಕು." ಎಂದು ಹೇಳುತ್ತಿದ್ದಳು. ಕಂಬನಿತುಂಬಿ ಆಲಿಸುತ್ತಿದ್ದ ನರೇಂದ್ರನು ಪ್ರತಿಸಲವೂ "ಸುಳ್ಳಲ್ಲ, ತಾಯಿ, ಸುಳ್ಳಲ್ಲ, ಅಕ್ಷರಶಃ ಸತ್ಯ; ಅಕ್ಷರಶಃ ಸತ್ಯ!" ಎಂದು ಹೇಳಿದನು.

ಪರಮಹಂಸ ಗುರುದೇವನ ಸ್ತ್ರೀಭಕ್ತರಲ್ಲಿ ಸರ್ವಶ್ರೇಷ್ಠವೂ ಪ್ರಥಮ ಪ್ರಧಾನವೂ ಸುಪ್ರಸಿದ್ಧವೂ ಆದ ವ್ಯಕ್ತಿ ಎಂದರೆ ಅವರ ಸಹಧರ್ಮಿಣಿ ಶ್ರೀ ಶಾರದಾಮಣಿದೇವಿ. ಹಿಂದಿನ ಅಧ್ಯಾಯಗಳಲ್ಲಿ ಪ್ರಾಸಂಗಿಕವಾಗಿ ಆ 'ಮಹಾ ಮಾತೆ'ಯ ವಿಚಾರವಾಗಿ ಅಲ್ಲಲ್ಲಿ ಪ್ರಸ್ತಾಪಿಸಿದ್ದೇವೆ. ಆದರೆ ಆಕೆಯ ವ್ಯಕ್ತಿತ್ವದ ಸಂಪೂರ್ಣ ನಿಷ್ಕೃಷ್ಟಪರಿಚಯಕ್ಕೆ ಅದು ಸಾಲದು. ಜಗತ್ತು ಪರಮಹಂಸರ ಆತ್ಮಜ್ಯೋತಿಯ ಮಹೋಜ್ಜ್ವಲಮಂಡಲವನ್ನು ದರ್ಶಿಸುವ ಸಂಭ್ರಮದಲ್ಲಿ ಆ ಪುಣ್ಯವನಿತೆಯ ನೀರವಧ್ಯಾನಜೀವನದ ಸಮ್ಯಗ್ದೀಪ್ತಿಯನ್ನು ಅಲ್ಪಜ್ಞಾನದಿಂದಾ ಗಲಿ, ನಿರ್ಲಕ್ಷ್ಯತೆಯಿಂದಾಗಲಿ ಅನಾದರದಿಂದ ಕಾಣದಂತೆ ಮಾಡುವುದು ಪ್ರತಿ ಯೊಬ್ಬ ಜೀವನ ಚರಿತ್ರಕಾರನ ಕರ್ತವ್ಯವಾಗಿದೆ. ಸಿದ್ಧಪುರುಷರಾದ ಶ್ರೀರಾಮ ಕೃಷ್ಣರ ಮಹಾತ್ಯಾಗವು ಸಂಶಯಲೇಶವೂ ಇಲ್ಲದ ಸ್ವಾನುಭವಜ್ಞಾನದ ಶಾಶ್ವತ ಶಿಲಾಸ್ತಿಭಾರದ ಮೇಲೆ ನಿಂತಿದೆ. ಕೇವಲ ಬಾಲಿಕೆಯಾದ ಶ್ರೀಶಾರದಾ ಮಣಿಯ ಮಹತ್ತರ ತ್ಯಾಗವಾದರೋ ಪತಿಯ ಮೇಲಣ ಶ್ರದ್ಧೆಯ ಮೇಲೆ ನಿಂತಿದೆ. ಸೀತೆ, ಸಾವಿತ್ರಿ, ದಮಯಂತಿ ಮೊದಲಾದ ಭರತಖಂಡದ ಆದರ್ಶ ಸ್ತ್ರೀಯರಲ್ಲಿ ಕಂಡುಬರುವುದಕ್ಕಿಂತಲೂ ಅತಿಶಯವಾದ, ಏಕೆಂದರೆ ವಿಶೇಷತಃ ಅಂತರ್ಮುಖಿಯಾದ ಪೌರಾಣಿಕ ಗಾಂಭೀರ್ಯವು 'ಶ್ರೀಮಾತೆ'ಯ ಜೀವನ ದಲ್ಲಿ ಮೂಡಿರುತ್ತದೆ. ಶಾರದಾದೇವಿಗೆ 'ಶ್ರೀಮಾತೆ' ಎಂಬ ಬಿರುದು ಅನ್ವರ್ಥ ನಾಮವಾಗಿ ಸಲ್ಲುತ್ತದೆ. ಶ್ರೀಗುರುದೇವನ ನಿರ್ಯಾಣಾನಂತರ ಶ್ರೀಮಾತೆಯು

ಭವ್ಯಜ್ಯೋತಿಯ ಆಶ್ರಯದಲ್ಲಿ ಅನೇಕ ಜೀವರು ತಮ್ಮ ಆತ್ಮ ಪ್ರದೀಪಗಳನ್ನು ಹೊತ್ತಿಸಿಕೊಂಡು ಧನ್ಯರಾದರು.

ಐದನೆಯ ವಯಸ್ಸಿನಲ್ಲಿ ಮದುವೆಯಾದದ್ದು, ಹತ್ತು-ಹನ್ನೆರಡು ವರ್ಷಗಳ ತರುವಾಯ ಪತಿಯ ದರ್ಶನವಾದದ್ದು, ಹಳ್ಳಿಯಿಂದ ದಕ್ಷಿಣೇಶ್ವರಕ್ಕೆ ತಾಯಿಯ ಆಣತಿಯನ್ನು ಪಡೆದು ಕಾಲುನಡಿಗೆಯಲ್ಲಿಯೇ ಹೊರಟದ್ದು, ದಾರಿಯಲ್ಲಿ ಅಸ್ವಸ್ಥಳಾಗಿ ರಾತ್ರಿಯ ಸಮಯದಲ್ಲಿ ದಕ್ಷಿಣೇಶ್ವರಕ್ಕೆ ಬರಲು ಪರಮಹಂಸರು ಬಹಳ ನೊಂದು ಎದೆಗರಗಿ ಶುಶ್ರೂಷೆಮಾಡಿದ್ದು, ತರುವಾಯ ಪತಿಪತ್ನಿಯರಿಬ್ಬರೂ ಪರಸ್ಪರಾನುಮತಿಯಿಂದ ಆಜೀವ ಬ್ರಹ್ಮಚರ್ಯವ್ರತವನ್ನು ಗ್ರಹಣಮಾಡಿದ್ದು, ಪರಮಹಂಸರು ತಮ್ಮ ಅರ್ಧಾಂಗಿಯನ್ನು ದೇವಿಯ ಪೀಠದ ಮೇಲೆ ಕುಳ್ಳಿರಿಸಿ ಪೂಜೆಮಾಡಿ ತಮ್ಮ ತಪಃಫಲ ಜಪಮಾಲೆಗಳನ್ನು ಆಕೆಯ ಪದತಲದಲ್ಲಿ ವಿಸರ್ಜಿಸಿ ನಿವೇದಿಸಿದ್ದು, ಪತ್ನಿ ಪತಿಯನ್ನು ಗುರುವೆಂದು ಸ್ವೀಕರಿಸಿ ಮುಖ್ಯಶಿಷ್ಯೆಯಾಗಿ ನಿಂತಿದ್ದು ಮೊದಲಾದ ಶ್ರೀಮಾತೆಯ ಬಾಲ್ಯಕೌಮಾರಜೀವನದ ಕಥಾವಿಷಯಗಳು ಈಗಾಗಲೆ ವಾಚಕರಿಗೆ ಸುಪರಿಚಿತವಾಗಿವೆ. ಅಂದಿನಿಂದ ಶ್ರೀಮಾತೆ ಪರಮಹಂಸರನ್ನು ‘ಗುರುದೇವ’ನೆಂದು ಭಾವಿಸಿ, ಸಂಭಾವಿಸಿ, ಸಂಬೋಧಿಸಿ, ದೈಹಿಕಸಂಬಂಧವಿಹೀನವಾದ ದೈವಿಕಪ್ರೇಮಪಾಶಬದ್ಧಳಾಗಿ, ಐಹಿಕ ಪಾರಲೌಕಿಕ ವ್ಯಾವಹಾರಿಕ ಪಾರಮಾರ್ಥಿಕ ಸಕಲವಿದ್ಯೆಗಳನ್ನು ಅವರಿಂದ ಕಲಿಯುತ್ತ ಆದರ್ಶಮಹಿಳೆಯಾಗಿ, ಮಹಿಳೆಯರಿಗೆ ಆದರ್ಶವಾಗಿ ಬೆಳೆದಳು. ಸಂನ್ಯಾಸಿಯಾಗಿದ್ದರೂ ಕ್ರಮ, ನಿಯಮ, ಸೌಂದರ್ಯ ಮತ್ತು ನೈರ್ಮಲ್ಯಪಕ್ಷಪಾತಿಯಾಗಿಯೂ ಇದ್ದ ಪರಮಹಂಸರು ಆಡಂಬರವಿಲ್ಲದಂತೆ, ಗಾಂಭೀರ್ಯ ಕೆಡದಂತೆ ಹೇಗೆ ಅಚ್ಚುಕಟ್ಟಾಗಿಯೂ ಚೊಕ್ಕಟವಾಗಿಯೂ ಬಾಳಬೇಕು ಎಂಬುದನ್ನು ಶ್ರೀಮಾತೆಗೆ ಪ್ರೇಮಪುರಸ್ಸರವಾಗಿ ಕಲಿಸಿದರು. ಶಾರದಾಮಣಿ ದೇವಿಯಲ್ಲಿ ಎಂದಾದರೂ ಸ್ತ್ರೀಸಹಜವಾದ ವಸ್ತ್ರಭೂಷಣಲಾಲಸೆ ಕಂಡುಬಂದಾಗ ಅದನ್ನು ಬಹು ಜಾಗರೂಕತೆಯಿಂದ ಅಭಿಮಾನ ಭಂಗವಾಗದ ರೀತಿಯಲ್ಲಿ ಖಂಡಿಸಿ ಉಪಾಯದಿಂದ ಆಚರಿಸುತ್ತಿದ್ದರು. ಒಂದು ಸಾರಿ ಕುಮಾರಿಯಾಗಿದ್ದ ಶ್ರೀಮಾತೆ ಎಂದಿಗಿಂತಲೂ ವಿಶೇಷವಾಗಿ ಅಲಂಕಾರಮಾಡಿಕೊಂಡು ಒಂದಿನಿತು ಹೆಮ್ಮೆಯಿಂದ ಪರಮಹಂಸರ ಬಳಿಗೆ ಹಣ್ಣುಹಂಪಲುಗಳಿದ್ದ ತಟ್ಟೆಯನ್ನು ತರಲು,

ಅವರು ಆಕೆಯನ್ನು ಎವೆಯಿಕ್ಕದೆ ಗಂಭೀರವಾಗಿ ನೋಡಿ "ಅದೆಲ್ಲಾ ಸರಿಯೇ, ಆದರೆ ಇಷ್ಟೊಂದು ವೈಯಾರವೇತಕ್ಕೆ?" ಎಂದರಂತೆ. ಶಿಶುಹೃದಯದ ಕುಮಾರಿಗೆ ಆಘಾತವಾದಂತಾಗಿ ನಸುಮುನಿದುಕೊಂಡು "ಇದ್ದರೇನಂತೆ! ನನಗಾಗಿ ಏನಲ್ಲ! . . . " ಎಂದು ತನ್ನೊಳಗೆ ತಾನೇ ಗೊಣಗುಟ್ಟುತ್ತ ನೀರವವಾಗಿ ರೋದಿಸುತ್ತ ಹೊರಟುಹೋದಳು. ಅದನ್ನು ನೋಡಿ ಶ್ರೀರಾಮಕೃಷ್ಣರು ನೊಂದುಕೊಂಡು ಬಳಿಯಿದ್ದವರೊಂದಿಗೆ "ಯಾರಾದರೊಬ್ಬರು ಹೋಗಿ ಯಪ್ಪಾ! ಆಕೆಯನ್ನು ಕರೆದು ತನ್ನಿ. ಆಕೆ ಅಳುವುದನ್ನು ಕಂಡರೆ ನನ್ನ ಈಶ್ವರಭಕ್ತಿಯೆಲ್ಲ ಹಾರಿಹೋಗಿ ಬಿಡುತ್ತದೆ!" ಎಂದರಂತೆ. ಯತಿಚಕ್ರವರ್ತಿಗೆ ಸತಿಯಲ್ಲಿ ಅಷ್ಟು ಅಕ್ಕರೆಯಿತ್ತು!

ನೋದರಿ ನಿವೇದಿತೆ ಹೀಗೆಂದು ಬರೆದಿದ್ದಾರೆ—

"ಶ್ರೀರಾಮಕೃಷ್ಣರಿಗೆ ಭರತಖಂಡದ ಆದರ್ಶಸ್ತ್ರೀತ್ವದ ವಿಚಾರವಾಗಿದ್ದ ಮಹೋನ್ನತವಾದ ಅಭಿಪ್ರಾಯವು ಶ್ರೀಮಾತೆಯಲ್ಲಿ ಮೂರ್ತಿಮತ್ತಾಗಿದೆ. ಆದರೆ ಆಕೆ ಪುರಾತನ ಸಂಪ್ರದಾಯದ ಭರತವಾಕ್ಯವೋ ಅಥವಾ ನೂತನ ಯುಗ ಧರ್ಮದ ನಾಂದಿಯೋ? ಆಕೆಯಲ್ಲಿ ಸರ್ವಸಾಮಾನ್ಯವಾದ ಮಹಿಳೆಯರಿಗೂ ಸುಲಭಸಾಧ್ಯವಾಗಬಹುದಾದ ಜಾಣ್ಮೆಯೂ ಮಾಧುರ್ಯವೂ ಒಂದುಗೂಡಿ ಮೂಡಿವೆ. ಆದರೂ ನನಗಂತೂ ಆಕೆಯ ರಾಜ್ಞೀಸ್ವಭಾವದ ಔದಾರ್ಯವೂ ಹೃದಯಮನೋವೈಶಾಲ್ಯವೂ ಆಕೆಯಲ್ಲಿ ಕಂಡು ಬರುವ ದಿವ್ಯಭಾವದಂತೆಯೇ ಮಹದಾಶ್ಚರ್ಯಕರವಾಗಿವೆ. ಎಂತಹ ಬಿಕ್ಕಟ್ಟಾದ ಸಮಸ್ಯೆಯಾಗಲಿ, ಎಂತಹ ತೊಡಕಾದ ಪ್ರಶ್ನೆಯಾಗಲಿ ಆಕೆ ಒಂದಿನಿತೂ ತಡವರಿಸದೆ ಉದಾರವಾಣಿಯಿಂದ ಸಮರ್ಪಕವಾಗಿ ಉತ್ತರ ಹೇಳುವುದನ್ನು ನಾನೆನಿತೋ ಸಾರಿ ನೋಡಿದ್ದೇನೆ. ಆಕೆಯ ಜೀವನವೆಲ್ಲ ಒಂದು ಮಹಾ ನೀರವ ಧ್ಯಾನವಾಗಿದೆ."

ಶಾರದಾದೇವಿ ತನ್ನ ತವರೂರಿನಿಂದ ಮೊದಲನೆಯ ಸಾರಿ ದಕ್ಷಿಣೇಶ್ವರಕ್ಕೆ ಬಂದ ಸಮಯದಲ್ಲಿ ಪರಮಹಂಸರ ಸಾನ್ನಿಧ್ಯಲಾಭವು ಆಕೆಗೆ ಉಲ್ಲಾಸಕರವಾಗಿದ್ದರೂ ಭಯಮಿಶ್ರವಾಗಿತ್ತು. ಪತಿಯ ಬಿರುಹೊನಲ ಹುಚ್ಚುಹೊಳೆಯಲ್ಲಿ ಅರಿಯದ ಬಾಲೆ ಕಂಗಾಲಾದಳು. ಒಮ್ಮೆ ಮೌನ, ಒಮ್ಮೆ ಹಾಸ್ಯ, ಒಮ್ಮೆ ಧ್ಯಾನ, ಒಮ್ಮೆ ಉಪದೇಶ, ಒಮ್ಮೆ ಕೀರ್ತನೆ, ಒಮ್ಮೆ ನೃತ್ಯ, ಒಮ್ಮೆ ಅಗಾಧ

ಗಭೀರಸಮಾಧಿ ಇಂತು ನಾನಾಭಾವಗಳಲ್ಲಿಯೂ ಭಾವಲಯಗಳಲ್ಲಿಯೂ ಹಾರಿ ಮುಳುಗಿ ಏಳುತ್ತಿದ್ದ ಈಶ್ವರೋನ್ಮತ್ತನ ಬಳಿ ತರಳೆ ದಿಗ್ಭ್ರಾಂತೆಯಾದಳು. ಆಕೆಗೆ ಸಮಾಧಿ ಮೂರ್ಛೆಗಳು ಅರ್ಥವಾಗುತ್ತಿರಲಿಲ್ಲ. ಒಂದು ದಿನ ಪರಮ ಹಂಸರು ಬಹಳ ಹೊತ್ತು ಸಮಾಧಿಸ್ಥರಾಗಿದ್ದುದನ್ನು ಕಂಡು ಶಾರದಾದೇವಿ ಬೆದರಿ ಅಳುತ್ತ ಓಡಿಹೋಗಿ ಹೃದಯರಾಮನನ್ನು ಕರೆತರಲು, ಆತನು ಒಂದು ನೋಡಿ ಸಂತೈಸಿ ಮಾವನ ಕಿವಿಯಲ್ಲಿ ಮಂತ್ರಘೋಷಮಾಡಲು ಬಾಹ್ಯಪ್ರಜ್ಞೆ ಯುಂಟಾಯಿತು. ಸಹಧರ್ಮಿಣಿಯ ದುರವಸ್ಥೆಯನ್ನು ತಿಳಿದ ಶ್ರೀರಾಮಕೃಷ್ಣರು ಆಕೆಗೆ ರಹಸ್ಯಮಂತ್ರಗಳನ್ನು ಹೇಳಿಕೊಟ್ಟು, ತಮಗೆ ಸಮಾಧಿಯುಂಟಾದಾಗ ಆಯಾ ದೈಹಿಕ ಚಿಹ್ನೆಗಳಿಗನುಸಾರವಾಗಿ ಆಯಾ ಮಂತ್ರಗಳನ್ನು ಕಿವಿಯಲ್ಲಿ ಉಚ್ಚರಿಸುವಂತೆ ಬೆಸಸಿದರು. ತರುವಾಯ ಶ್ರೀಮಾತೆ ಭಯಪಡದೆ ಪತಿಯನ್ನು ಸಮಾಧಿಯಿಂದ ಕೆಳಗಿಳಿಸಲು ಸಮರ್ಥೆಯಾದಳು.

ಒಂದು ಸಾರಿ ಶ್ರೀಮಾತೆ ಗುರುದೇವನ ಚರಣಶುಶ್ರೂಷೆಮಾಡುತ್ತ "ನೀವು ನನ್ನನ್ನು ಯಾವ ದೃಷ್ಟಿಯಿಂದ ಕಾಣುತ್ತೀರಿ?" ಎಂದು ಕೇಳಿದಳು.

ಪರಮಹಂಸರು ಹೇಳಿದರು: "ಯಾವ ಮಾತೆಯನ್ನು ನಾನು ನಿತ್ಯವೂ ದೇವಾಲಯದಲ್ಲಿ ಪೂಜಿಸುತ್ತೇನೆಯೋ ಆ ಮಾತೆಯೇ ಈ ಶರೀರವನ್ನು ಹೆತ್ತಳು; ಆ ಮಾತೆಯೇ ನೌಬತ್ತುಖಾನೆಯಲ್ಲಿ ವಾಸಿಸುತ್ತಿದ್ದಾಳೆ; ಅದೇ ಮಾತೆಯೇ ಈಗ ಈ ಕ್ಷಣದಲ್ಲಿ ನನ್ನ ಚರಣಶುಶ್ರೂಷೆಯನ್ನೂ ಮಾಡುತ್ತಿದ್ದಾಳೆ. ನಾನು ನಿನ್ನನ್ನು ಆನಂದಮಯಿಯಾದ ಜಗನ್ಮಾತೆಯ ಪ್ರತ್ಯಕ್ಷಪ್ರತಿನಿಧಿಯೆಂದು ಸರ್ವದಾ ಭಾವಿಸುತ್ತೇನೆ."

ಪರಮಹಂಸರ ಜೀವನವು ಸರ್ವಧರ್ಮಗಳ ಸಮನ್ವಯ ತತ್ತ್ವವನ್ನು ಹೇಗೆ ನಿದರ್ಶಿಸುತ್ತಿದೆಯೋ ಹಾಗೆಯೇ ಸರ್ವಾಶ್ರಮಗಳ ಸಮನ್ವಯವನ್ನೂ ತೋರು ತ್ತಿದೆ. ಸಂನ್ಯಾಸ ಸಂಸಾರಗಳ ಸಮನ್ವಯವೆಂದರೆ ವಿಚಿತ್ರವಾಗಿ ಕಾಣುತ್ತದೆ. ಆದರೂ ಗುರುದೇವನು ಸಂನ್ಯಾಸಿಗಳಿಗೆ ಆದರ್ಶವಾಗಿದ್ದಂತೆ ಸಂಸಾರಿಗಳಿಗೂ ಆದರ್ಶನಾಗಿರುತ್ತಾನೆ ಎಂಬುದು ನಿಸ್ಸಂದೇಹವಾದುದು. ಸಾಧಾರಣವಾಗಿ ನೋಡಿದರೆ, ಸಂನ್ಯಾಸಿಯಾದವನು ಎಂದಿಗೂ ಮದುವೆಮಾಡಿಕೊಳ್ಳುವುದಿಲ್ಲ. ಹಾಗೆ ವರ್ತಿಸಿದರೆ ಆತನು ಭ್ರಷ್ಟನಾಗುತ್ತಾನೆ. ಒಂದು ವೇಳೆ ಮೊದಲೇ ವಿವಾಹ

ವಾಗಿದ್ದರೂ ಪತ್ನಿಯ ಸಹಿತ ಸರ್ವಸಂಬಂಧಗಳನ್ನೂ ವರ್ಜಿಸಿ, ಆಕೆಯನ್ನೂ ತ್ಯಜಿಸಿ, ಗೃಹತ್ಯಾಗಿಯಾಗುತ್ತಾನೆ. ಪರಮಹಂಸ ರಾಮಕೃಷ್ಣರು ಸಂನ್ಯಾಸಿ. ತಮ್ಮ ಇಪ್ಪತ್ತುಮೂರನೆಯ ವಯಸ್ಸಿನಲ್ಲಿ ಚೆನ್ನಾಗಿ ಬುದ್ಧಿ ಬಂದ ಮೇಲೆ ಸ್ವಸಮ್ಮತಿಯಿಂದಲೇ ಲಗ್ನವಾದರು. ಆದರೂ ಸಾಧಾರಣ ಮಾನವರಂತೆ ಹೆಂಡತಿಯೊಡನೆ ಸಂಸಾರ ಹೂಡಲೂ ಇಲ್ಲ; ಆಕೆಯನ್ನು ಹೊರದೂಡಲೂ ಇಲ್ಲ; ಸತಿಯೊಡನೆ ಯಾವ ವಿಧವಾದ ದೈಹಿಕಸಂಬಂಧವನ್ನೂ ಇಟ್ಟುಕೊಳ್ಳದೆ ಆಕೆಯನ್ನು ಸ್ನೇಹವಚನಗಳಿಂದಲೂ ಉಪದೇಶಗಳಿಂದಲೂ ನಿಜಜೀವನದ ದೃಷ್ಟಾಂತಗಳಿಂದಲೂ ಉತ್ತಮೋತ್ತಮ ಜೀವನ ಶಿಖರಕ್ಕೆ ತಂದು ನಿಲ್ಲಿಸಿದರು. ಇದು ಅವರ ಜೀವನದಲ್ಲಿ ಒಂದು ವಿಶೇಷತೆ.

ಅಂತಹ ವಿಶೇಷತೆ ಶ್ರೀರಾಮಕೃಷ್ಣರ ಜೀವನದಲ್ಲಿ ಮಾತ್ರವಲ್ಲದೆ ಶಾರದಾಮಣಿದೇವಿಯ ಜೀವನದಲ್ಲಿಯೂ ಕಂಡುಬರುತ್ತದೆ. ಅರಿಯದ ಹುಡುಗಿ ಪತಿಯ ಮಹಾಜೀವನಕ್ಕಾಗಿ ತನ್ನ ಸರ್ವಸ್ವವನ್ನೂ ತ್ಯಾಗಮಾಡಿದ್ದು ಸಾಮಾನ್ಯ ಘಟನೆಯಲ್ಲ. ಶ್ರೀಮಾತೆಯ ಜೀವನ ಯಾತ್ರೆ ರೌಚಕವಾದ ಮಹಾಘಟನೆಗಳಿಂದ ಕೂಡಿರದಿದ್ದರೂ ಭಗಿನೀ ನಿವೇದಿತೆಯ ಮಾತಿನಂತೆ "ಆಕೆಯ ಜೀವನವೆಲ್ಲ ಒಂದು ಮಹಾನೀರವಧ್ಯಾನವಾಗಿದೆ." ಆದರೂ ಆಕೆಯ ಸವಿಸ್ತೃತ ಜೀವನ ಚರಿತ್ರೆಯೊಂದು ಇಲ್ಲದಿರುವುದು ಶೋಚನೀಯವಾದ ವಿಷಯವಾಗಿದೆ. ಪರಮಹಂಸರ ಜೀವನ ಚರಿತ್ರೆಯಲ್ಲಿ ಅಲ್ಲಲ್ಲಿ ಪ್ರಸಂಗಕ್ರಮವಾಗಿ ಬರುವ ಅಲ್ಪ ಸ್ವಲ್ಪ ವಿಷಯಗಳೇ ನಮಗೆ ದೊರೆಕೊಳ್ಳುವ ಕಥಾಸಾಮಗ್ರಿ. ಅದನ್ನು ಬಿಟ್ಟರೆ ಕೆಲವು ಭಕ್ತ ಭಕ್ತೆಯರು ಬರೆದಿಟ್ಟಿರುವ ದಿನಚರಿಯೇ ನಮಗೆ ಆಧಾರ. ಉಳಿದುದನ್ನು ವಾಚಕರು ತಮ್ಮ ಪ್ರತಿಭೆಗೆ ಸೂಕ್ತತೋರಿದಂತೆ ಕಲ್ಪಿಸಿಕೊಳ್ಳಬೇಕಾಗಿದೆ.

ಪರಮಹಂಸರ ಸಾನ್ನಿಧ್ಯದಿಂದ ಶ್ರೀಮಾತೆಯಲ್ಲಿ ಎಂತಹ ಧೈರ್ಯ ಸ್ಥೈರ್ಯ ವಿವೇಕಗಳು ಮೂಡಿದುವು ಎನ್ನುವುದಕ್ಕೆ ದೃಷ್ಟಾಂತ ರೂಪವಾಗಿ ನಡೆದ ಒಂದು ಸಂಗತಿಯನ್ನು ಹೇಳಿ ಮುಂದುವರಿಯುತ್ತೇವೆ.

ಶಾರದಾದೇವಿ ಕಾಮಾರಪುಕುರದಿಂದ ದಕ್ಷಿಣೇಶ್ವರಕ್ಕೆ ಬರಬೇಕಾದರೆ ನಡುವೆ ಹಬ್ಬಿದ್ದ ಕಾಡುಬಯಲುಗಳನ್ನು ಯಾನಾಭಾವವಿದ್ದುದರಿಂದ ಕಾಲುನಡಗೆಯಲ್ಲಿಯೇ ದಾಟಬೇಕಾಗಿತ್ತು. ಮಧ್ಯೆ ಕಳ್ಳಕಾಕರಿಂದಲೂ ಕಾಳೀಪೂಜಕ

ರಾದ ಡಕಾಯಿತರಿಂದಲೂ ತುಂಬ ಅಪಾಯಕರವಾಗಿದ್ದ ಒಂದು ಪ್ರಾಂತರ ವಿತ್ತು. ಆ ಪ್ರಾಂತರದ ಮಧ್ಯಭಾಗದಲ್ಲಿ ಭೀಷಣವಾದ ಕಾಳಿಯ ಮೂರ್ತಿ ಯೊಂದು ಈಗಲೂ ಕಂಡುಬರುತ್ತದೆ. ಪ್ರಯಾಣಿಕರು ಗುಂಪುಗುಂಪಾಗಲ್ಲದೆ ಆ ಹಾದಿಯನ್ನೇ ತುಳಿಯುತ್ತಿರಲಿಲ್ಲ.

ಒಂದು ಸಾರಿ ಶಾರದಾದೇವಿ ಇತರ ಸ್ತ್ರೀಪುರುಷಬಂಧುಗಣದೊಡನೆ ಆ ಮಾರ್ಗವಾಗಿ ದಕ್ಷಿಣೇಶ್ವರಕ್ಕೆ ಹೊರಟಳು. ದಾರಿಗರು ಆ ಪ್ರಾಂತರವನ್ನು ದಾಟುವ ಮೊದಲೇ ಬೈಗಾಯಿತು. ಸ್ವಲ್ಪ ಅಸ್ವಸ್ಥೆಯಾಗಿದ್ದ ಆಕೆ ದಾರಿ ನಡೆದು ಬಳಲಿ ಇತರ ದಾರಿಗರೊಡನೆ ಕಾಲು ಹಾಕಲಾರದೆ ಹೋದಳು. ಅವರೆಲ್ಲರೂ ಸ್ವಲ್ಪ ದೂರ ಹೋಗಿ ನಿಲ್ಲುವುದು, ಪುನಃ ಆಕೆ ಬಂದು ಸೇರಿದೊಡನೆ ಮುಂದುವರಿವುದು ಹೀಗೆ ಮಾಡುತ್ತ ಬಂದರು. ಇಷ್ಟರಲ್ಲಿಯೇ ಕತ್ತಲೆ ದಟ್ಟವಾಗಿ ಕವಿಯಿತು. ಅದನ್ನು ಕಂಡು ಆಕೆ ಹೇಳಿದಳು. " ನೀವು ನನಗಾಗಿ ನಿಲ್ಲಬೇಡಿ ; ಮೆಲ್ಲಗೆ ಕಾಲುಹಾಕಿ. ನಾನು ಆದಷ್ಟು ಬೇಗ ಬೇಗನೆ ಬರುತ್ತೇನೆ. ನೀವು ನಿಂತು ನಿಂತು ಹೋಗುವುದಾದರೆ ಎಲ್ಲರೂ ಡಕಾಯಿತರ ಪಾಲಾಗುತ್ತೇವೆ." ಜೊತೆ ಯವರು ಮೆಲ್ಲಮೆಲ್ಲಗೆ ನಿಲ್ಲದೆ ನಡೆಯತೊಡಗಿದರು. ತುಸುಹೊತ್ತಿನಲ್ಲಿಯೇ ಕಣ್ಮರೆಯಾದರು. ಕಗ್ಗತ್ತಲೆ ಕವಿದ ಆ ಭಯಂಕರ ಪ್ರಾಂತರದಲ್ಲಿ ಶಾರದಾದೇವಿ ಯೊಬ್ಬಳೇ ಸಿಕ್ಕಿಬಿದ್ದಳು. ಕಾಲು ಸೋತುದರಿಂದ ಆಕೆ ಎಷ್ಟು ಸಾಹಸ ಮಾಡಿದರೂ ಬೇಗ ನಡೆಯಲಾರದೆ ಕಂಗೆಟ್ಟಳು. ಅಷ್ಟರಲ್ಲಿ ಯಾವುದೋ ಒಂದು ಛಾಯೆ ತಿಮಿರಗರ್ಭದಿಂದ ತನ್ನೆಡೆಗೆ ಚಲಿಸುತ್ತಿದ್ದುದು ಆಕೆಯ ಕಣ್ಣಿಗೆ ಬಿತ್ತು. ನೋಡಿದರೆ, ದೀರ್ಘಾಕಾರದ ಘೋರತರ ಕೃಷ್ಣವರ್ಣದ ಭೀಷಣಪುರುಷ ನೊಬ್ಬನು ಹೆಗಲಿನ ಮೇಲೆ ಲಾಠಿಯೊಂದನ್ನು ಹೇರಿಕೊಂಡು ಮುಂದೆ ನಿಂತಿ ದ್ದಾನೆ! ಪಲಾಯನವಾಗಲಿ ಚೀತ್ಕಾರವಾಗಲಿ ಉಪಯೋಗವಿಲ್ಲವೆಂದು ತಿಳಿದು ಶಾರದಾದೇವಿ ಸ್ಥಿರಚಿತ್ತೆಯಾಗಿ ನಿಂತುಬಿಟ್ಟಳು.

ಅಲ್ಪಕ್ಷಣದಲ್ಲಿಯೇ ಆ ಡಕಾಯಿತನು ಬಳಿಸಾರಿ ಕರ್ಕಶಸ್ವರದಿಂದ " ಯಾರಲ್ಲಿ ? ಇಷ್ಟು ಹೊತ್ತಿನಲ್ಲಿ ? " ಎಂದು ಪ್ರಶ್ನೆಮಾಡಿದನು.

" ಬಾಬಾ, ನನ್ನ ಜೊತೆಯವರು ನನ್ನನ್ನು ಬಿಟ್ಟುಹೋದರು. ನಾನೂ ದಾರಿತಪ್ಪಿದೆ ಎಂದು ತೋರುತ್ತದೆ. ನನ್ನನ್ನು ಕರೆದುಕೊಂಡುಹೋಗಿ ಅವರ

ಹತ್ತಿರ ಬಿಟ್ಟರೆ ಬಹಳ ಉಪಕಾರವಾದೀತು. ನಿನ್ನ ಅಳಿಯನು ದಕ್ಷಿಣೇಶ್ವರದ ರಾಣಿ ರಾಸಮಣಿಯ ಕಾಳಿಗುಡಿಯಲ್ಲಿದ್ದಾನೆ. ನಾನು ಅಲ್ಲಿಗೆ ಹೋಗುತ್ತಿದ್ದೇನೆ. ನೀನು ನನ್ನನ್ನು ಅಲ್ಲಿಯವರೆಗೆ ಕರೆದುಕೊಂಡುಹೋದರೆ ಆತನು ನಿನಗೆ ಬೇಕಾದ ಉಪಚಾರಮಾಡುತ್ತಾನೆ."

ಅಷ್ಟರಲ್ಲಿಯೇ ಇನ್ನೊಂದು ವ್ಯಕ್ತಿಯೂ ಅಲ್ಲಿಗೆ ಬಂದಿತು. ಅದು ಸ್ತ್ರೀ ವ್ಯಕ್ತಿ. ಮಾತಾಡುತ್ತಿದ್ದ ಪುರುಷನ ಪತ್ನಿ. ಶಾರದಾಮಣಿ ಓಡಿಹೋಗಿ ಅವಳನ್ನು ಕೈಹಿಡಿದು ತಬ್ಬಿಕೊಂಡು "ಅಮ್ಮಾ, ನಾ ನಿನ್ನ ಮಗಳು, ಶಾರದೆ. ಜೊತೆಯವರು ತಪ್ಪಿಹೋದರು; ವಿಷಮವಿಪತ್ತಿನಲ್ಲಿ ಸಿಕ್ಕಿದ್ದೇನೆ. ಏನೋ ಪುಣ್ಯವಶಾತ್ ಬಾಬಾ ನೀನೂ ಇಲ್ಲಿಗೆ ಬಂದಿರಿ. ಇಲ್ಲದಿದ್ದರೆ ನನ್ನ ಗತಿ ಏನಾಗುತ್ತಿತ್ತೋ ನಾ ಹೇಳಲಾರೆ." ಎಂದು ನಿಃಸಂಕೋಚಸರಳಭಾವದಿಂದ ಹೇಳಿದಳು. ತರಳೆಯ ಮಾತಿನ ಮಾಧುರ್ಯಕ್ಕೆ ಮರುಳಾಗಿ ಆ ಮನುಷ್ಯನೂ ಸ್ತ್ರೀಯೂ ಎದೆಗರಗಿದರು. ಅವರಿಬ್ಬರೂ ಕೀಳುಜಾತಿಯವರಾಗಿದ್ದರು. ಆದರೂ ಸಾಮಾಜಿಕ ಆಚಾರ ಮತ್ತು ಜಾತಿಯ ಪಾರ್ಥಕ್ಯಗಳನ್ನು ಮರೆತುಬಿಟ್ಟು, ಅವರಿಬ್ಬರೂ ಶಾರದಾಮಣಿಯನ್ನು ನಿಜವಾಗಿಯೂ ತಮ್ಮ ಕನ್ಯೆಯೆಂದೇ ಭಾವಿಸಿ ಸಂತವಿಟ್ಟು, ಕ್ಲಾಂತೆಯಾಗಿದ್ದ ಆಕೆಯನ್ನು ಮುಂದೆ ಹೋಗಗೊಡದೆ, ವಿಶ್ರಾಂತಿಗಾಗಿ ನಿಕಟಸ್ಥ ಗ್ರಾಮಕ್ಕೆ ಕರೆದುಕೊಂಡುಹೋಗಿ, ತಮಗೆ ಪರಿಚಿತವಾಗಿದ್ದ ಒಂದು ಅಂಗಡಿಮನೆಯಲ್ಲಿ ಸ್ವಲ್ಪ ಸ್ಥಳ ಸಂಪಾದನೆ ಮಾಡಿ, ಅಲ್ಲಿ ಮಲಗಿ ರಾತ್ರಿಯನ್ನು ಕಳೆಯುವಂತೆ ಮಾಡಿದರು. ಆ ಡಕಾಯಿತನು ಅಂಗಡಿಯಿಂದ ಪುರಿಯನ್ನು ತಂದುಕೊಟ್ಟನು; ಆತನ ಸ್ತ್ರೀ ತನ್ನ ವಸ್ತ್ರಗಳಿಂದಲೇ ತನ್ನ ಹೊಸ ಮಗಳು ಶಾರದೆಗೆ ಹಾಸಿಗೆ ಮಾಡಿದಳು. ಇಂತು ರಾತ್ರಿಯೆಲ್ಲ ಕಾವಲಿದ್ದು ಪಿತಾಮಾತೆಯರಂತೆ ಆಕೆಯನ್ನು ಸಲಹಿದರು. ಬೆಳಗಾದ ಮೇಲೆ ಆಕೆಯನ್ನು ತಾರಕೇಶ್ವರದ ವರೆಗೂ ಕರೆದೊಯ್ದು ಅಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳುವಂತೆ ಮಾಡಿದರು.

ಆ ಸ್ತ್ರೀ ತನ್ನ ಪತಿಗೆ ಹೇಳಿದಳು: "ರಾತ್ರಿಯೆಲ್ಲ ನಮ್ಮ ಹುಡುಗಿ ಏನೂ ತಿಂದಿಲ್ಲ. ಬೇಗ ತಾರಕನಾಥನ ಪೂಜೆಮಾಡಿ, ಅಂಗಡಿಗೆ ಹೋಗಿ ಏನಾದರೂ ತರಕಾರಿ ತೆಗೆದುಕೊಂಡು ಬನ್ನಿ. ಇವತ್ತು ಮಗಳಿಗೆ ಹಬ್ಬದೂಟ ಬಡಿಸಬೇಕು."

ಹೆಂಡತಿಯು ಹೇಳಿಕೆಯಂತೆ ಡಕಾಯಿತನು ಪೇಟೆಗೆ ಹೋದನು. ಅಷ್ಟು ಹೊತ್ತಿಗೆ ಶಾರದಾಮಣಿಯ ಬಂಧುಗಳು ಆಕೆಯನ್ನು ಹುಡುಕುತ್ತ ಹೊತ್ತು ದುಗುಡದಿಂದ ಅಲ್ಲಿಗೆ ಒಂದು ಆಕೆಯನ್ನು ಕಂಡು ಆನಂದಿತರಾದರು. ಶಾರದೆ ಬಂಧುಗಳಿಗೆ ತನ್ನ ಬಾಗದಿ (ಕೀಳುಜಾತಿಯ ಹೆಸರು) ಮಾತಾಪಿತರ ಪರಿಚಯ ಮಾಡಿಕೊಟ್ಟು "ಇವರು ನನ್ನ ಸಹಾಯಕ್ಕೆ ಬಾರದಿದ್ದರೆ ನನ್ನ ಗತಿ ಏನಾಗುತ್ತಿತ್ತೋ!" ಎಂದು ಹೇಳಿದಳು.

ಡಕಾಯಿತ ದಂಪತಿಗಳು ಶಾರದೆಯನ್ನು ಕಂಬನಿಗರೆದು ಬೀಳ್ಕೊಂಡರು. ಶಾರದೆಯೂ ಕಣ್ಣೀರು ಸುರಿಸಿದಳು. ಒಂದೇ ರಾತ್ರಿಯಲ್ಲಿ ಅವರ ಪರಸ್ಪರ ಬಾಂಧವ್ಯವು ಅಷ್ಟರ ಮಟ್ಟಿಗೆ ಬೆಳೆದಿತ್ತು. ಶಾರದೆ ಅವರಿಬ್ಬರಿಗೂ ದಕ್ಷಿಣೇಶ್ವರಕ್ಕ ಬರುವಂತೆ ಆಹ್ವಾನಪಿತ್ತಳು. ಆ ಸ್ತ್ರೀಯಂತೂ ಅಳುತ್ತಾ ಅಳುತ್ತಾ ಬಹುದೂರದ ವರೆಗೆ ಬಂದು ಕಳುಹಿ, ಹಾದಿಯ ಪಕ್ಕದ ಹೊಲದಲ್ಲಿದ್ದ ಬಟಾಣಿಗಳನ್ನು ಕೊಯ್ದು ಶಾರದೆಯ ಸೆರಗಿನಂಚಿನಲ್ಲಿ ಕಟ್ಟಿ "ತಾಯಿ ಶಾರದೆ, ಇವತ್ತು ರಾತ್ರಿ ಅವಲಕ್ಕಿ ತಿನ್ನುವಾಗ ಜೊತೆಗೆ ಇದನ್ನೂ ತಿನ್ನು." ಎಂದು ಹೇಳಿ ಮುದ್ದಿಸಿದಳು.

ಶ್ರೀಮಾತೆಯ ಆಹ್ವಾನವನ್ನು ಮನ್ನಿಸಿ ಆ ಡಕಾಯಿತ ದಂಪತಿಗಳು ಅನೇಕ ಸಾರಿ ದಕ್ಷಿಣೇಶ್ವರಕ್ಕೆ ಬಂದರು. ಎಲ್ಲ ಕಥೆಯನ್ನೂ ಕೇಳಿ ತಿಳಿದುಕೊಂಡಿದ್ದ ಪರಮಹಂಸರು ಅವರಿಬ್ಬರನ್ನೂ ಅಳಿಯನಂತೆ ಉಪಚರಿಸುತ್ತಿದ್ದರು. "ಆದರೂ" ಶ್ರೀಮಾತೆ ಬಹುಕಾಲದ ಮೇಲೆ ಹೇಳುತ್ತಿದ್ದಳು, "ನನ್ನ ಡಕಾಯಿತ ತಂದೆ ನನ್ನ ಭಾಗಕ್ಕೆ ಸರಳ ಸಚ್ಚಾರಿತ್ರಮೂರ್ತಿಯಾಗಿದ್ದರೂ ಪೂರ್ವದಲ್ಲಿ ಅನೇಕ ಸಾರಿ ಡಕಾಯಿತಿ ಮಾಡಿರಬೇಕೆಂದು ಭಾವಿಸುತ್ತೇನೆ."

ತವರೂರಿನಿಂದ ದಕ್ಷಿಣೇಶ್ವರಕ್ಕೆ ಬಂದ ಮೇಲೆ ಶಾರದಾದೇವಿ ಚಂದ್ರಮಣಿದೇವಿಯೊಡನೆ ನೌಬತ್ತುಖಾನೆಯಲ್ಲಿ ವಾಸಿಸುತ್ತ ಅತ್ತೆ, ಪತಿ ಮತ್ತು ಇತರ ಭಕ್ತ ಅತಿಥಿಗಳ ಸೇವೆ ಶುಶ್ರೂಷೆಮಾಡತೊಡಗಿದಳು. ಆದರೆ ಕೆಲವು ಕಾಲದಲ್ಲಿಯೇ ಮೃತ್ಯುವು ಚಂದ್ರಾದೇವಿಯನ್ನು ಕೊಂಡೊಯ್ದಿತು. ತರಳೆಯಾದ ಶಾರದೆ ಏಕಾಕಿನಿಯಾದಳು. ಬೆಳಗಿನ ಜಾವ ಮೂರು ಅಥವಾ ನಾಲ್ಕು

ಗಂಟೆಯ ಹೊತ್ತಿಗೆ ಎದ್ದು ಗಂಗೆಯಲ್ಲಿ ಮಿಂದು ಮಡಿಯುಟ್ಟು ದೇವರಪೂ
ಧ್ಯಾನಗಳನ್ನು ಮಾಡಿ ಮುಗಿಸಿ, ಪತಿಗೂ ಬಂದ ಭಕ್ತರಿಗೂ ಅನ್ನಪಾನಾ
ಗಳನ್ನು ಸಿದ್ಧಪಡಿಸುವುದು ಆಕೆಯ ದೈನಂದಿನ ಕಾರ್ಯವಾಗಿತ್ತು. 'ಹಲ
ಸಾರಿ ಬಹಳ ಜನಗಳಿಗೆ ಅಡುಗೆಮಾಡುವ ಪ್ರಸಂಗವೂ ಒದಗುತ್ತಿತ್ತು. ಆದರೆ ಆ
ಹಗಲಿರುಳೆನ್ನದೆ ಹೊತ್ತುಗೊತ್ತೆನ್ನದೆ ಒಂದಿನಿತೂ ಬೇಸರಪಡದೆ ಗೊಣಗುಟ್ಟದೆ
ಭಕ್ತರ ಸೇವೆಯೇ ಸಾಧಕನ ತಪಸ್ಸೆಂದು ಭಾವಿಸಿ, ಮುದದಿಂದ ಕೆಲಸಮಾಡ
ತ್ತಿದ್ದಳು. ಬಡತನದಲ್ಲಿ ಕಷ್ಟಜೀವನಮಾಡುತ್ತಿದ್ದರೂ ಆಕೆಯಲ್ಲಿ ಧನಲೋ
ವಾಗಲಿ, ಭೋಗಾಭಿಲಾಷೆಯಾಗಲಿ, ಕೆಲಸಮಾಡಿಸಲು ಕಿಂಕರರು ಬೇಕೆಂ
ಆಸೆಯಾಗಲಿ ಎಳ್ಳನಿತೂ ಇರಲಿಲ್ಲ. ಪರಮಹಂಸರಲ್ಲಿದ್ದ ನಿರ್ಲೋಭತೆ ಆಕೆಯ
ಲ್ಲಿಯೂ ಎದೆಯೊಳಗೆ ಬೇರೂರಿತ್ತು. ಒಂದು ಸಾರಿ ಮಾರ್ವಾಡಿ ಭಕ್ತನೊಬ್ಬನ
ಗುರುದೇವನಲ್ಲಿಗೆ ಬಂದು ಪಾದಕಾಣಿಕೆಯಾಗಿ ಹತ್ತುಸಾವಿರ ರೂಪಾಯಿಗಳನ್ನು
ಸ್ವೀಕರಿಸಬೇಕೆಂದು ಬಹಳವಾಗಿ ಬೇಡಿಕೊಂಡನು. ಅವರು "ಅದನ್ನು ಕಟ್ಟಿ
ಕೊಂಡು ನಾನೇನು ಮಾಡಲಿ?" ಎಂದು ತಿರಸ್ಕರಿಸಿ ಸಹಧರ್ಮಿಣಿಯನ್ನು
ಪರೀಕ್ಷಿಸಲೆಂದು ಹಣವನ್ನು ಆಕೆಯಲ್ಲಿಗೆ ತೆಗೆಯಿಸಿಕೊಂಡುಹೋಗಿ "ಇದನ್ನೇ
ಸ್ವೀಕರಿಸಬಾರದು? ಒಡವೆ ಬಟ್ಟೆ ಮಾಡಿಸಿಕೊಳ್ಳಬಹುದು. ನನ್ನ ದಾರಿದ್ರ್
ದಿಂದ ನಿನಗೆ ಅವುಗಳೊಂದೂ ಇಲ್ಲದಾಗಿದೆ." ಎಂದು ಹೇಳಿದರು. ಶ್ರೀಮಾ
ಸ್ವಲ್ಪವೂ ಹಿಂದುಮುಂದು ನೋಡದೆ ಆ ಒಡವೆ ವಸ್ತುಗಳಿಂದ ನನಗೆ ಆ
ಬೇಕಾದ್ದೇನು? ನನಗೆ ಬೇಡ!" ಎಂದುಬಿಟ್ಟಳು. ಮಾರ್ವಾಡಿ ಹತಾ
ನಾಗಿ ಹಿಂದಿರುಗಿದನು. ಪರಮಹಂಸರು ಪತ್ನಿಯ ನಿರ್ಲೋಭತೆಯನ್ನು ಕಂಡ
ಹಿಗ್ಗಿಹೋದರು.

ಪರಮಹಂಸರ ಖ್ಯಾತಿ ಹಬ್ಬಿದ ಮೇಲೆ ಪುರುಷಭಕ್ತರಂತೆ ಸ್ತ್ರೀಭಕ್ತರೂ
ದಕ್ಷಿಣೇಶ್ವರಕ್ಕೆ ಬರತೊಡಗಿದರು. ಅವರಲ್ಲಿ ಅನೇಕ ಮಹಿಳೆಯರು ಶ್ರೀಮಾತೆಯ
ಸಾನ್ನಿಧ್ಯದಲ್ಲಿ ಕಾಲಕಳೆಯುತ್ತಿದ್ದರು. ಗುರುದೇವನ ಸಹಧರ್ಮಿಣಿಯಾದುದ
ರಿಂದಲೂ ಕಠೋರತಪಸ್ವಿನಿಯಾದುದರಿಂದಲೂ ಆಕೆಯಲ್ಲಿ ಜನರಿಗೆ ಮಹಾ
ಗೌರವವಿರುತ್ತಿತ್ತು. ಆದರೂ ಉದಾತ್ತಳಾದ ಶಾರದಾದೇವಿ ಇತರ ಸಾಮಾನ್ಯ
ಸ್ತ್ರೀಯರಂತೆ ದೀನಭಾವದಿಂದ ವರ್ತಿಸುತ್ತಿದ್ದಳೇ ಹೊರತು ಔದ್ಧತ್ಯಕ್ಕೆ ಒಂದಿ

ತಾದರೂ ಅವಕಾಶಕೊಡುತ್ತಿರಲಿಲ್ಲ. ಆಕೆ ಯಾವಾಗಲೂ ತಾಯಿಯಾಗಿರುತ್ತಿದ್ದಳೇ ಹೊರತು ರಮಣಿಯಂತಿರುತ್ತಿರಲಿಲ್ಲ.

ಕ್ರಿ. ಶ. ೧೮೮೬ ರಲ್ಲಿ ಶ್ರೀರಾಮಕೃಷ್ಣರು ದೇಹತ್ಯಾಗಮಾಡಿದಾಗ ಶ್ರೀಮಾತೆಗೆ ಮೂವತ್ತುಮೂರು ವರ್ಷ ವಯಸ್ಸಾಗಿತ್ತು. ಸ್ವಾಮಿಯ ತಿರೋಭಾವದ ಅನಂತರ ಆಕೆ ಪದ್ಧತಿಯಂತೆ ವಿಧವೆಯ ವೇಷಧಾರಣೆ ಮಾಡಲಿಲ್ಲ. ಕಾರಣವೇನೆಂದರೆ, ಪರಮಹಂಸರ ದೇಹಸಂಸ್ಕಾರ ಸಮಯದಲ್ಲಿ ಶ್ರೀಮಾತೆ ಸಂಪ್ರದಾಯದಂತೆ ತನ್ನ ಕೈಲಿದ್ದ ಬಳೆಗಳನ್ನು ಒಡೆದುಹಾಕಲು ಉದ್ಯುಕ್ತಳಾದಾಗ ಗುರುದೇವನು ಅರೋಗಶರೀರಿಯಾಗಿ ಆಕೆಗೆ ಪ್ರತ್ಯಕ್ಷನಾಗಿ, ಕೈ ಹಿಡಿದು ತಡೆದು ನಿಲ್ಲಿಸಿ “ಇದೇನು? ನಾನು ಮೃತನಾದೆನೆಂದು ತಿಳಿದು ಸಾಮಾನ್ಯ ಸ್ತ್ರೀಯಂತೆ ಕೈಬಳೆಗಳನ್ನು ಒಡೆದುಹಾಕುತ್ತಿದ್ದೀಯಾ?” ಎಂದು ಹೇಳಿ ಮಾಯವಾದನಂತೆ. ತರುವಾಯ ಶ್ರೀಮಾತೆ ವಿಧವಾವೇಷಧಾರಣೆ ಮಾಡಲು ಶಕ್ತಳಾಗಲಿಲ್ಲ. ಆತ್ಮದ ಅಮರತ್ವದಲ್ಲಿ ಇಂತಹ ದೃಢವಿಶ್ವಾಸವು ಎಲ್ಲರಲ್ಲಿಯೂ ಇರುವುದಾದರೆ ಸಂಸಾರದ ದುಃಖ ಪಾಪ ತಾಪ ದುರ್ಗತಿಗಳು ದೂರವಾಗುವುದರಲ್ಲಿ ಸಂದೇಹವಿಲ್ಲ.

ಗುರುದೇವನ ಮಹಾಸಮಾಧಿಯ ಅನಂತರ ಶ್ರೀಮಾತೆ ಮೂವತ್ತುನಾಲ್ಕು ವರ್ಷಗಳು ಬದುಕಿದ್ದಳು. ಆಕೆಯ ಆತ್ಮಜ್ಯೋತಿ ಸರ್ವದಾ ದೇದೀಪ್ಯಮಾನವಾಗಿದ್ದುಕೊಂಡು ಅನೇಕರಿಗೆ ಕಾಂತಿ ಶಾಂತಿಗಳನ್ನು ದಯಪಾಲಿಸಿತು. ಪರಮಹಂಸರ ಸಂನ್ಯಾಸಿ ಶಿಷ್ಯರೂ ಗೃಹಸ್ಥಭಕ್ತರೂ ಆಕೆಯನ್ನು ಮಾತೃಸ್ಥಾನದಲ್ಲಿ ಇಟ್ಟು ಪೂಜಿಸಿದರು. ಅವರೆಲ್ಲರೂ ಆಕೆಯ ಆಶೀರ್ವಾದವಿಲ್ಲದೆ ಯಾವ ಮಹಾಕಾರ್ಯವನ್ನೂ ಕೈಕೊಳ್ಳುತ್ತಿರಲಿಲ್ಲ. ಸ್ವಾಮಿ ವಿವೇಕಾನಂದರು ಆಕೆಯ ಆಶೀರ್ವಾದವನ್ನು ಪಡೆದ ಮೇಲೆಯೇ ಭರತಖಂಡದ ತೀರವನ್ನು ಬಿಟ್ಟು ಪಾಶ್ಚಾತ್ಯದೇಶಗಳಿಗೆ ಧರ್ಮಪ್ರಚಾರ ಮಾಡಲು ಹೋದುದು. ಭಾರತೀಯರಲ್ಲದೆ ಅನ್ಯದೇಶೀಯರೂ ಇಂಗ್ಲೆಂಡು ಮತ್ತು ಅಮೇರಿಕ ಮೊದಲಾದ ದೇಶಗಳ ರಮಣಿಯರೂ ಆಕೆಯಲ್ಲಿಗೆ ಬಂದು ಮಂತ್ರೋಪದೇಶವನ್ನು ಕೈಕೊಂಡು ಶಿಷ್ಯರಾದರು. ಆಕೆಯ ವಿಶಾಲ ಹೃದಯಕ್ಕೆ ರಾಷ್ಟ್ರ, ದೇಶ, ವರ್ಣ, ಜನಾಂಗ, ಮತ, ಭಾಷೆ ಯಾವ ಭೇದವೂ ಇರಲಿಲ್ಲ. ಸರ್ವರಿಗೂ ಆಕೆ ಜನನಿಯಾಗಿ

ದ್ದಳು. ಆಂಗ್ಲ ಮಹಿಳೆಯಾದ ಸೋದರಿ ನಿವೇದಿತೆ, ಅಮೇರಿಕದವಳಾದ ಭಗಿನಿ ದೇವಮಾತೆ ಮೊದಲಾದವರು ಶ್ರೀಮಾತೆಯ ವಿಚಾರವಾಗಿ ಭಾವಮಯವೂ ವಿಚಾರ ಪೂರ್ಣವೂ ಆದ ಪ್ರಶಂಸೆಗಳನ್ನು ಬರೆದಿದ್ದಾರೆ. ಶ್ರೀಮಾತೆ ಕ್ರಿಸ್ತಾಬ್ದ ೧೯೨೦ ನೆಯ ಸಂವತ್ಸರದಲ್ಲಿ ತನ್ನ ಅರುವತ್ತೇಳನೆಯ ವಯಸ್ಸಿನಲ್ಲಿ ಶರೀರ ತ್ಯಾಗಮಾಡಿದಳು.

ಆಕೆ ತನ್ನಲ್ಲಿಗೆ ಬಂದ ಮತ್ತು ತನ್ನೊಡನೆ ವಾಸಿಸುತ್ತಿದ್ದ ಭಕ್ತರೊಡನೆಯೂ ಇತರರೊಡನೆಯೂ ನಡೆಸಿದ ಸಂಭಾಷಣೆಗಳು ಗ್ರಂಥರೂಪವಾಗಿ ವಂಗ ಭಾಷೆಯಲ್ಲಿ ಮುದ್ರಿತವಾಗಿವೆ. ಆಕೆಯ ವ್ರತ, ತ್ಯಾಗ, ನಿಷ್ಠೆ, ಸಂಯಮ, ಸವಿನುಡಿ, ಸೇವಾಪರಾಯಣತೆ, ತನ್ನ ಸುಖದುಃಖಗಳಲ್ಲಿ ಸಂಪೂರ್ಣ ಔದಾಸೀನ್ಯ, ಶರಣತೆ, ನಿರಭಿಮಾನ, ಸಹಿಷ್ಣುತೆ, ದಯೆ, ಕ್ಷಮೆ, ಸಹಾನುಭೂತಿ, ನಿಸ್ವಾರ್ಥ ಪರತೆ, ಪರದುಃಖಕಾತರತೆ, ಪತಿತಪಾವನಾಕಾಂಕ್ಷೆ, ಕೃತಸಿದ್ಧರಾದವರಲ್ಲಿಯೂ ಅಪೂರ್ವವಾಗಿರುವ ಹೃದಯವೈಶಾಲ್ಯ ಇವುಗಳೆಲ್ಲವೂ ಆಕೆಯ ಪುಣ್ಯವಾಕ್ಯ ಗಳಲ್ಲಿ ಒಡೆದು ಮೂಡಿರುತ್ತವೆ. ನಿದರ್ಶನ ರೂಪವಾಗಿ ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸುತ್ತೇವೆ.

ಶ್ರೀಮಾತೆ ಪ್ರಾಚೀನ ಸಂಪ್ರದಾಯದ ಬ್ರಾಹ್ಮಣರ ಕುಲದಲ್ಲಿ ಜನಿಸಿದವಳು. ಶಾಲೆಗಳಲ್ಲಿ ಓದಲಿಲ್ಲ. ಆದರೂ ಆಕೆಯಲ್ಲಿ ಎಂತಹ ಸುಧಾರಕಚಿತ್ತವಿತ್ತು ಎಂಬುದು ಕೆಳಗೆ ಹೇಳುವ ಸಂಗತಿಯಿಂದ ಗೊತ್ತಾಗುತ್ತದೆ—

ಭಕ್ತೆಯೊಬ್ಬಳು ಮಾತೆಯಲ್ಲಿಗೆ ಒಂದು "ನನಗೆ ಐದು ಮಂದಿ ಹೆಣ್ಣು ಮಕ್ಕಳಿದ್ದಾರೆ. ಅವರಿಗೆ ವಿವಾಹಮಾಡುವುದೇ ಕಠಿನವಾಗಿ ನನಗೆ ಚಿಂತೆ ಹಿಡಿದುಕೊಂಡಿದೆ" ಎಂದಳು.

ಶ್ರೀಮಾತೆ ಹೇಳಿದಳು: "ಮದುವೆಮಾಡುವುದಕ್ಕೆ ಆಗದಿದ್ದರೆ ಚಿಂತೆಯೇಕೆ? ನಿವೇದಿತಾ ಸ್ಕೂಲಿಗೆ ಕಳುಹಿಸು. ಓದುಬರಹ ಕಲಿಯಲಿ. ಆ ಮೇಲೆ ಸ್ತ್ರೀವಿದ್ಯಾಪ್ರಚಾರಮಾಡಿ ದೇಶಸೇವೆಮಾಡುತ್ತಾರೆ. ಅದರಿಂದ ಆತ್ಮೋದ್ಧಾರವೂ ಆಗುತ್ತದೆ."

ಅಲ್ಲಿದ್ದ ಇನ್ನೊಬ್ಬರು ಹೇಳಿದರು: "ಈಗ ಗಂಡು ಸಿಕ್ಕುವುದೇ ಕಷ್ಟವಾಗಿದೆ. ಅನೇಕ ಹುಡುಗರು ಮದುವೆಗೇ ಒಪ್ಪುವುದಿಲ್ಲ."

"ಈಗ ಅವರಿಗೂ ಸ್ವಲ್ಪ ಬುದ್ಧಿ ಬಂದಿದೆ. ಸಂಸಾರದ ಅನಿತ್ಯತೆ ಅಸುಖ ಗಳು ಅವರಿಗೂ ತಿಳಿದುಬಂದಿವೆ. ಎಷ್ಟುದೂರವಾಗಿದ್ದರೆ ಅಷ್ಟು ಒಳ್ಳೆಯದು ಅವರಿಗೆ. ಏಕಾಗ್ರತೆಯಿಂದ ದೇಶಸೇವೆಮಾಡಲು ಸಾಧ್ಯವಾಗುತ್ತದೆ." ಎಂದು ಶ್ರೀಮಾತೆ ಹೇಳಿದಳು.

ಒಂದು ದಿನ ಸೆರೆದ ಗೃಹಿಣಿ ಭಕ್ತೆಯರೊಡನೆ ಮಾತೆಯಿಂತೆಂದಳು: "ವಿವಾಹಿತ ಸ್ತ್ರೀಪುರುಷರು ಒಂದೆರಡು ಮಕ್ಕಳಾದ ಮೇಲೆ ಸಂಯಮಿಗಳಾಗಿ ಬಾಳಬೇಕು ಎಂದು ಶ್ರೀಠಾಕೂರರು (ಪರಮಹಂಸರು) ಹೇಳಿದ್ದಾರೆ. ಆಂಗ್ಲೇಯ ರಲ್ಲಿ ದಂಪತಿಗಳು ತಮ್ಮ ಧನಸಂಪತ್ತಿಯನ್ನು ಮೀರಿ ಸಂತಾನ ಪಡೆಯುವುದಿಲ್ಲ ವಂತೆ. ನಮ್ಮಲ್ಲಿ ತಂದೆತಾಯಿಗಳಿಗೇ ಹೊಟ್ಟೆಗಿರಲಿ ಇಲ್ಲದಿರಲಿ ಮಕ್ಕಳಾಗುವು ದೇನೋ ತಪ್ಪುವುದಿಲ್ಲ. ಪಾಪ, ಆ ಮಕ್ಕಳೋ ಆಜನ್ಮದರಿದ್ರರಾಗಿ ನರಕಜೀವನ ಮಾಡುತ್ತಾರೆ. ಹುಡುಗಿಯನ್ನು ನೋಡಿದರೆ ಚೋಟುದ್ದ ಇರುತ್ತಾಳೆ; ಆಗಲೇ ಹಿಂದೆ, ಮುಂದೆ, ಸೊಂಟದ ಮೇಲೆ, ಮಕ್ಕಳು! ಆ ಮೇಲೆ ಸಂಸಾರದಲ್ಲಿ ಸುಖವಿಲ್ಲ ಎಂದು ಹತಾಶರಾಗಿ ಜುಗುಪ್ಸೆಯಿಂದ ಜೀವನವನ್ನೇ ಹಳಿಯುತ್ತಾರೆ."

ಅಲ್ಲಿದ್ದವರೊಬ್ಬರು—ಆದರೆ ಪತಿಯೇ ಪರದೈವವೆಂದು ಶಾಸ್ತ್ರಗಳು ಹೇಳು ತ್ತವೆ. ಹೀಗಿರಲು ಪತಿಯ ಮತಕ್ಕೆ ವಿರುದ್ಧವಾಗಿ ಸಂಯಮಿಯಾಗಲು ಪ್ರಯ ತ್ನಿಸುವುದು ಸ್ತ್ರೀಗೆ ಪಾಪವಲ್ಲವೇ?

ಶ್ರೀಮಾತೆ—ಭಗವಂತನಿಗಾಗಿ ಹಾಗೆ ಮಾಡಿದರೆ ಪಾಪವೆಲ್ಲಿಂದ ಬರುತ್ತ ದಮ್ಮಾ? ಇಂದ್ರಿಯ ಸಂಯಮವು ಆವಶ್ಯಕ. ಹಾಗೆ ಮಾಡಿದರೆ ಪತಿ ಉದ್ಧಾರವಾಗಿ ನಿಜವಾಗಿಯೂ ಪರದೈವವಾಗುತ್ತಾನೆ.

ಪರಿಶುದ್ಧವಾದುದು ಯಾರಲ್ಲಿಯೇ ಇರಲಿ, ಎಲ್ಲಿಯೇ ಇರಲಿ ಪೂಜ್ಯ ವಾದುದು ಎಂಬುದನ್ನು ಶ್ರೀಮಾತೆ ತನ್ನವರಿಗೆ ಹೇಗೆ ಬೋಧಿಸಿದ್ದಾಳೆ ಎಂಬು ದಕ್ಕೆ ಎರಡು ನಿದರ್ಶನಗಳನ್ನು ಕೊಡುತ್ತೇವೆ.

ಒಂದು ಸಾರಿ ವೈದ್ಯಜಾತಿಗೆ ಸೇರಿದ ಭಕ್ತನೊಬ್ಬನು ಮಾತೆಯಲ್ಲಿಗೆ ಬಂದನು. ಆತನ ಪವಿತ್ರಭಾವವು ಎಲ್ಲರಿಗೂ ತಿಳಿದ ವಿಷಯವೇ ಆಗಿತ್ತು. ಶ್ರೀಮಾತೆ ತನ್ನ ಅಣ್ಣನ ಮಗಳಾದ ರಾಧು ಎಂಬಾಕೆಯನ್ನು ಕುರಿತು ವೈದ್ಯನಿಗೆ ನಮಸ್ಕಾರಮಾಡುವಂತೆ ಬೆಸಸಲು, ತರಳೆ ಹಾಗೆಯೇ ಮಾಡಿದಳು. ವೈದ್ಯನು

ಅಲ್ಲಿಂದ ಹೊರಟುಹೋದ ಮೇಲೆ ಅಲ್ಲಿದ್ದವರಲ್ಲಿ ಒಬ್ಬರು ಶ್ರೀಮಾತೆಯನ್ನು ಕುರಿತು "ಆತನು ಬ್ರಾಹ್ಮಣನೇ ?" ಎಂದು ಪ್ರಶ್ನೆ ಮಾಡಿದರು.

ಶ್ರೀಮಾತೆ—ಅಲ್ಲ ; ವೈದ್ಯ.

ಒಬ್ಬರು—ಹಾಗಾದರೆ, ನಮಸ್ಕಾರಮಾಡಲು ಹೇಳಿದಿರಿ ?

ಶ್ರೀಮಾತೆ—ಮಾಡಬಾರದೆ ? ಆತನೆಂತಹ ಪರಿಶುದ್ಧಾತ್ಮನು ! ಆತನು ಬ್ರಾಹ್ಮಣನಿಗೆ ಸರಿಸಮ. ಆತನಲ್ಲದೆ ಮತ್ತಾರು ಬ್ರಾಹ್ಮಣ ? ಆತನಿಗಲ್ಲದೆ ಮತ್ತಾರಿಗೆ ಪ್ರಣಾಮಮಾಡಬೇಕು ? ನೀನೇ ಹೇಳಮ್ಮಾ !

ಇನ್ನೊಂದು ಸಾರಿ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಬಾರದ ಭಕ್ತನೊಬ್ಬನು ಅಡುಗೆ ಮನೆಯಿಂದ ದೂರ ನಿಂತುಕೊಂಡು ಮೇಲ್ವಿಚಾರಣೆ ನಡಸುತ್ತಿದ್ದುದನ್ನು ನೋಡಿ ಶ್ರೀಮಾತೆ ಅವನನ್ನು ಒಳಕ್ಕೆ ಬಂದು ಹತ್ತಿರ ನಿಲ್ಲುವಂತೆ ಕರೆದು, ಅಲ್ಲಿದ್ದ ಬ್ರಾಹ್ಮಣ ಪಾಚಕರನ್ನು ಕುರಿತು "ಅವನೇಕೆ ಹೊರಗೆ ನಿಂತುಕೊಳ್ಳಬೇಕು? ಏನು ಜನಿವಾರ ಇಲ್ಲ ಎಂತಲೇ ? ಅವನೂ ನಿಮ್ಮಂತೆ ಈಶ್ವರಭಕ್ತನಲ್ಲವೇ ?" ಎಂದು ಬುದ್ಧಿ ಹೇಳಿದಳಂತೆ.

ಶ್ರೀಮಾತೆಯಲ್ಲಿ ಪತಿತಪಾವನೆಯ ಗುಣ ಸಂಪೂರ್ಣವಾಗಿ ವ್ಯಕ್ತವಾಗಿತ್ತು. ಲೋಕದಲ್ಲಿ ಕರ್ಮವಿಪಾಕದಿಂದಲೋ ವಿಧಿವಶದಿಂದಲೋ ಸ್ತ್ರೀಯ ಹೃದಯ ದೌರ್ಬಲ್ಯದಿಂದಲೋ ಅಥವಾ ಸನ್ನಿವೇಶ ಸಹವಾಸ ದೋಷಗಳಿಂದಲೋ ಪ್ರಲೋಭನಗಳಿಗೆ ಶರಣಾಗಿ ದಾರಿ ತಪ್ಪಿದವರನ್ನು "ಎಲೈ ಪಾಪಿಗಳೇ" ಎಂದು ಸಂಬೋಧಿಸಿ, ನರಕಭಯವನ್ನು ತೋರಿ, ಪುಕ್ಕಟೆಯಾಗಿ ಬುದ್ಧಿ ಹೇಳಿ ಉಪದೇಶಮಾಡುವ ಮೂರ್ಖಾಚಾರ್ಯರು ಎಷ್ಟೋ ಮಂದಿ ಇದ್ದಾರೆ. ಆದರೆ ಪಾಪಿಗಳನ್ನು ಆಲಿಂಗಿಸಿ, ಧೈರ್ಯಹೇಳಿ, ಸಹಾನುಭೂತಿ ತೋರಿಸಿ, ಅವರನ್ನು ಉದ್ಧಾರಮಾಡುವವರು ಎಲ್ಲಿಯೋ ಬಹು ಸ್ವಲ್ಪ ಪುಣ್ಯಾತ್ಮರು. ಅಂತಹರೇ ಪತಿತಪಾವನರು.

ಒಂದು ಸಾರಿ ಸಂಭ್ರಾಂತ ಕುಲಮಹಿಳೆಯೊಬ್ಬಳು ಕರ್ಮವಿಪಾಕದಿಂದ ದುಷ್ಪ್ರವೃತ್ತಿಪರಾಯಣೆಯಾಗಿ, ತರುವಾಯ ಬಹಳ ಪಶ್ಚಾತ್ತಾಪಹೊಂದಿ ಶ್ರೀಮಾತೆಯಲ್ಲಿಗೆ ಬಂದಳು. ಬಂದವಳು ಮಾತೆಯಿದ್ದ ಮಂದಿರವನ್ನು ಪ್ರವೇಶಿಸದೆ ಬಾಗಿಲಾಚೆ ನಿಂತು ಕಂಬನಿಗರೆಯುತ್ತ ತನ್ನ ಪಾಪದ ಸಮಸ್ತ ಕಥೆಯನ್ನೂ

ಸವಿಸ್ತಾರವಾಗಿ ಹೇಳಿ ಬಿಕ್ಕಿ ಬಿಕ್ಕಿ ಅತ್ತಳು. ಮಾತೆಯ ಹೃದಯ ಕರಗಿ ನೀರಾಯಿತು. ತಟಕ್ಕನೆ ಎದ್ದುಹೋಗಿ ಆಕೆಯ ಕುತ್ತಿಗೆಯನ್ನು ತಬ್ಬಿಕೊಂಡು ಸಸ್ನೇಹವಾಣಿಯಿಂದ "ಬಾಮ್ಮಾ, ಒಳಗೆ ಬಾ. ಪಾಪವನ್ನು ಒಪ್ಪಿಕೊಂಡು ಅನುತಪ್ತೆಯಾಗಿದ್ದೀಯೆ. ಅನುತಾಪವೇ ಹಿರಿಯ ಪ್ರಾಯಶ್ಚಿತ್ತ. ಅದೇ ಗಂಗಾ ಸ್ನಾನ. ಬಾ ನಿನಗೆ ಮಂತ್ರೋಪದೇಶ ಕೊಡುತ್ತೇನೆ. ಗುರುದೇವನ ಅಡಿಯಲ್ಲಿ ಎಲ್ಲವನ್ನೂ ಅರ್ಪಿಸಿಬಿಡು, ಭಯವೇಕೆ ? " ಎಂದು ಹೇಳುತ್ತ ಆಕೆಯನ್ನು ಕರೆದು ಕೊಂಡುಹೋಗಿ ಸ್ನಾನಮಾಡಿಸಿ, ಮಂತ್ರದೀಕ್ಷೆಯನ್ನೂ ದಾನಮಾಡಿದಳು. ಇದನ್ನು ಕುರಿತು ಯಾರೋ ಒಬ್ಬರು ತರುವಾಯ ಪ್ರಶ್ನೆಮಾಡಲು ಶ್ರೀಮಾತೆ "ಗುರುದೇವನು ಅವತಾರಮಾಡಿದ್ದು ಇನ್ನೇತಕ್ಕೆ ? ರಸಗುಳ್ಳ ತಿನ್ನುವುದಕ್ಕೇನು ? ಪುಣ್ಯಾತ್ಮರಿಗೆ ಅವತಾರಗಳ ಆವಶ್ಯಕತೆ ಇಲ್ಲ. ಪರಮಾತ್ಮನು ಬರುವುದು ಪಾಪಿ ಗಳಿಗಾಗಿ. ನಾವೇ ಅವರನ್ನು ದೂರಮಾಡಿದರೆ ಅವರು ಉದ್ಧಾರವಾಗುವುದು ಹೇಗೆ ? " ಎಂದಳಂತೆ.

ಶ್ರೀಮಾತೆ ವ್ಯವಹಾರ ಆಚಾರಗಳ ವಿಚಾರವಾಗಿ ಎಂತಹ ಉದಾರ ಗಹನ ಭಾವಗಳನ್ನು ಹೊರಪಡಿಸುತ್ತಿದ್ದಳೋ ಹಾಗೆಯೇ ತತ್ತ್ವಧರ್ಮಗಳ ವಿಚಾರವಾಗಿಯೂ ಸೂಕ್ಷ್ಮಭಾವಗಳನ್ನು ವ್ಯಕ್ತಗೊಳಿಸುತ್ತಿದ್ದಳು. ಒಂದು ಸಾರಿ ಮೂರ್ತಿಪೂಜೆಯ ವಿಚಾರವಾಗಿ ಮಾತಾಡುತ್ತ "ಹಣ್ಣಿನ ಮರದಲ್ಲಿ ನೂರಾರು ಹಕ್ಕಿಗಳು ಕಲೆತು, ನೂರಾರು ವಿಧವಾಗಿ ತಮತಮಗೆ ಸಹಜವಾದ, ಸುಲಭವಾದ ರೀತಿಯಲ್ಲಿ ಇಂಚರಗೈದರೂ ನಾವು ಎಲ್ಲವನ್ನೂ ಕುರಿತು 'ಹಕ್ಕಿ ಹಾಡುತ್ತನೆ' ಎಂದು ಹೇಳುತ್ತೇವೆ. ಹಾಗೆಯೇ ಭಕ್ತರು ಅನೇಕ ಮಾರ್ಗಗಳಲ್ಲಿ ಭಗವಂತನನ್ನು ಪೂಜಿಸಿದರೂ ಅವರೆಲ್ಲರೂ ಭಕ್ತರಲ್ಲದೆ ಬೇರೆಯಲ್ಲ." ಎಂದು ಹೇಳಿದಳು.

ಸಂನ್ಯಾಸ ಮತ್ತು ಗಾರ್ಹಸ್ಥ್ಯಗಳ ವಿಚಾರವಾಗಿ ಮಾತಾಡುತ್ತಾ ಮಾತೆ ಇಂತೆಂದು ಹೇಳಿದ್ದಾಳೆ: "ಸಂನ್ಯಾಸವಿಲ್ಲದೆ ಮುಕ್ತಿಯಿಲ್ಲ ಎಂಬು ದೇನೋ ನಿಜ. ಆದರೆ ಗೃಹಸ್ಥರಾದವರು ಭಯಪಡುವುದೂ ಬೇಡ ; ಸಂನ್ಯಾಸಿ ಗಳಾದವರು ಹಿಗ್ಗುವುದೂ ಬೇಡ. ಏಕೆಂದರೆ, ಸಂನ್ಯಾಸ ಎಂದರೆ ಕಾವಿಬಟ್ಟೆ ತೊಡುವುದು ಎಂದು ಮಾತ್ರ ಅರ್ಥವಲ್ಲ ; ಮಾನಸಿಕ ಸಂನ್ಯಾಸ ಎಂದರ್ಥ.

ಕಾವಿಯುಟ್ಟಿರಲಿ, ಸಂಸಾರಿಯಾಗಿರಲಿ, ಬೇಕಾದುದು ನಿಷ್ಕಾಮತೆ. ಅದಿದ್ದವರು ಯಾವ ಆಶ್ರಮದಲ್ಲಿಯೇ ಇರಲಿ ಸಂನ್ಯಾಸಾಶ್ರಮದಲ್ಲಿ ಇದ್ದಂತೆಯೇ. ಅಂಥ ವರಿಗೆ ಮೋಕ್ಷ ಲಭಿಸಿಯೇ ಲಭಿಸುತ್ತದೆ.''

ಜಗಜ್ಜೀವನದಲ್ಲಿ ಬರುವ ಶೋಕತಾಪಗಳನ್ನು ಕುರಿತು ಹೇಳುತ್ತಿದ್ದಾಗ ಮಾತೆ ಇಂತೆಂದಳು : ''ಜನರು 'ಈಶ್ವರ ಕೃಪೆ' ಎಂದರೆ 'ತಮಗೊದಗುವ ಸುಖ' ಎಂದು ತಿಳಿದುಕೊಂಡಿದ್ದಾರೆ. ಅದು ಸರಿಯಾದ ಜ್ಞಾನವಲ್ಲ. ಈಶ್ವರನ ಕೃಪೆ ಸುಖದ ವೇಷವನ್ನು ತಳೆದಂತೆಯೇ ದುಃಖದ ವೇಷವನ್ನೂ ತಾಳುತ್ತದೆ. ದುಃಖವೂ ಈಶ್ವರ ಕೃಪೆಯ ಒಂದು ರೂಪ ಎಂದು ಭಾವಿಸಿ ಶಾಂತರಾಗುವುದೇ ಶ್ರೇಯಸ್ಸು.''

''ಕೃಪೆ ಕಾರ್ಯಕಾರಣವಾದಕ್ಕೆ ಸಿಲುಕಿಲ್ಲ. ಅದು ಸ್ವತಂತ್ರವಾದುದು. ಹುಡುಗನ ಕೈಯಲಿರುವ ಮಿಠಾಯಿಯಂತೆ. ಅನೇಕರು ನನಗೆ ಮಿಠಾಯಿ ಕೊಡು, ನನಗೆ ಮಿಠಾಯಿ ಕೊಡು ಎಂದು ಗೋಗರೆಯುತ್ತಾರೆ. ಹುಡುಗನು ಕೊಡು ವುದಿಲ್ಲ. ಆದರೆ ಇದ್ದಕ್ಕಿದ್ದ ಹಾಗೆ ಯಾರಾದರೊಬ್ಬರಿಗೆ, ಬೇಡದವರಾದರೂ ಸರಿಯೆ, ತಿಂಡಿಯನ್ನು ಕೊಟ್ಟುಬಿಡುತ್ತಾನೆ. ಹಾಗೆಯೇ ಈಶ್ವರನ ಕೃಪೆಯೂ ಕೂಡ ತರ್ಕಕ್ಕೆ ಕಟ್ಟುಬೀಳದೆ ಯಾರಿಗಾದರೂ ದೊರಕಿಬಿಡುತ್ತದೆ.''

ಇಂತಹ ಅನೇಕ ಘಟನೆಗಳೂ ವಚನಗಳೂ ಮಾತೆಯ ಜೀವನದಲ್ಲಿ ಕಂಡುಬರುತ್ತವೆ. ಪರಮಹಂಸರ ಸಹಧರ್ಮಿಣಿ ಅಕ್ಷರಶಃ, ತತ್ತ್ವತಃ ಅವರ ಅರ್ಧಾಂಗಿಯಾಗಿದ್ದಳೆಂಬುದರಲ್ಲಿ ಸಂಶಯ ಲೇಶವಿಲ್ಲ.

ಶ್ರೀಮಾತೆ ಕ್ರಿ. ಶ. ೧೯೨೦ ರಲ್ಲಿ ತನ್ನ ೬೭ನೆಯ ವಯಸ್ಸಿನಲ್ಲಿ ದೇಹತ್ಯಾಗ ಮಾಡಿದಳು. ಆಕೆ ಭರತಖಂಡದಲ್ಲೆಲ್ಲಾ ಸಂಚರಿಸಿ ಅನೇಕ ಶಿಷ್ಯರ ಭಕ್ತಿಗೆ ಪಾತ್ರ ಳಾಗಿದ್ದಳಲ್ಲದೆ, ವಿದೇಶಗಳಲ್ಲಿಯೂ ಆಕೆಯ ನೀರವಧ್ಯಾನ ಜೀವನದ ತೇಜಸ್ಸೂ ತಪಸ್ಸೂ ಹಬ್ಬಿತ್ತು. ಈಗಲೂ ಹಬ್ಬುತ್ತಾ ಇದೆ. ಹಬ್ಬಬೇಕಾದ ಜೀವನವದು. ಆ ಮೌನ ಮಹಾಜೀವನದಲ್ಲಿ ರೋಮಾಂಚಮಾಡುವ ರೌಚಕ ಘಟನೆಗಳಿಲ್ಲ; ಆದರೆ ನಿಜವಾದ ತಪಸ್ಸು ರೋಚನಮಯವಾದುದಲ್ಲ. ಮಹಾ ಔದಾರ್ಯವು ಮಾಹಾತ್ಮ್ಯಗೆ ಕುರುಹಾದ ಪಕ್ಷದಲ್ಲಿ ಆಕೆಯೂ ಭರತಖಂಡದ ಜೀವಜ್ಯೋತಿ ಗಳ ಶ್ರೇಣಿಗೆ ಸೇರಿದ್ದಾಳೆ. ಶ್ರೀಮಾತೆ ನವಯುಗದ ಆದರ್ಶ ತಪಸ್ವಿನಿ.

# ೬. ದೇವಶಿಲ್ಪಿ

ಮಾನಸ ಸರೋವರದಲ್ಲಿ ಅರಳಿದ ಮಹಾಪದ್ಮವು ಬಂಡಿನ ಜೊಲ್ಲಿನಿಂದ ಜಿರಿಜಿರಿದು ಪರಮೆಗಳ ಬರವನ್ನೇ ಹಾರುತ್ತಿತ್ತು ಎಂದು ಹಿಂದೆಯೇ ಹೇಳಿದ್ದೇವೆ. ತಾವರೆಯ ಹಾರೈಕೆಯಂತೆ ಕೆಲವು ಅಳಿಗಳೇನೋ ಒಂದುವು. ಆದರೆ ಅವುಗಳೆಲ್ಲ ಕಿರುಜೇನುಗಳಾದ್ದರಿಂದ ಕಮಲದ ಎದೆಯಂಚಿನಲ್ಲಿದ್ದ ಒಂದೆರಡು ಮಕರಂದ ಬಿಂದುಗಳನ್ನು ಪಾನಮಾಡಲು ಸಮರ್ಥವಾಗಿದ್ದುವೇ ಹೊರತು ಅದರ ಎದೆ ಯಾಳದ ಮಧುರ ಮಧುಖನಿಯನ್ನು ಪ್ರವೇಶಿಸಿ ಘನತರ ಮಾಧುರ್ಯವನ್ನು ಹೀರುವಷ್ಟು ಧೀರವಾಗಿರಲಿಲ್ಲ. ಆ ಸಾಹಸಮಾಡಲು ಹೆಜ್ಜೇನುಗಳೇ ಬರ ಬೇಕಾಯಿತು.

ಅವತಾರಪುರುಷರೆಲ್ಲರೂ ಭೂಮಿಗೆ ಬರುವಾಗ ತಮ್ಮ ಅಂತರಂಗದ ಗೋಷ್ಠಿಗೆ ಸೇರಿದ ಶಿಷ್ಯರೊಡಗೂಡಿಯೇ ಜನ್ಮವೆತ್ತುವರೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಅನೇಕರು ಅವರಿಗೆ ಭಕ್ತರಾಗಬಹುದು; ಆದರೆ ಕೆಲವರು ಮಾತ್ರವೇ ಅಂತರಂಗದ ಶಿಷ್ಯರಾಗುತ್ತಾರೆ. ಜಹಜಿನ ಯಜಮಾನನು ಪ್ರಯಾ ಣಿಕರೆಲ್ಲರಿಗೂ ಕೆಲಸ ಕೊಡುವುದಿಲ್ಲ; ಹಾಗೆ ಕೊಟ್ಟರೆ ಜಹಜಿಗೆ ಅಪಾಯ ವಾಗುತ್ತದೆ. ತಾನೇ ಆಯ್ದು ನೇಮಿಸಿಕೊಂಡ ಯಂತ್ರಕರ್ಮಜ್ಞರಿಗೆ ಮಾತ್ರ ಆ ಕೆಲಸವನ್ನು ವಹಿಸುತ್ತಾನೆ. ಹಾಗೆಯೇ ಅವತಾರಪುರುಷನೂ ತನ್ನ ಧರ್ಮ ನಾವೆಯನ್ನು ಮರ್ಮವರಿತ ಅಂತರಂಗ ಶಿಷ್ಯರಿಗಲ್ಲದೆ ಇತರರಿಗೆ ವಹಿಸುವುದಿಲ್ಲ. ಬುದ್ಧದೇವ, ಯೇಸು ಕ್ರಿಸ್ತ, ಶ್ರೀಶಂಕರಾಚಾರ್ಯ ಮತ್ತು ಶ್ರೀಕೃಷ್ಣ ಚೈತನ್ಯ ಇವರುಗಳ ಚರಿತ್ರೆಯನ್ನು ನೋಡಿದರೆ ಮೇಲೆ ಹೇಳಿದ ವಿಷಯವು ವಿಶದ ವಾಗುತ್ತದೆ.

ಇನ್ನೊಂದು ವಿಷಯವೇನೆಂದರೆ ಅವತಾರಪುರುಷರು ತಮ್ಮ ಅಂತರಂಗ ಶಿಷ್ಯರನ್ನು ಆಯುವ ವಿಧಾನವೂ ವಿಚಿತ್ರವಾದುದು. ಅವರು ಅಂತಹ ಶಿಷ್ಯ ರನ್ನು ಹೊಸದಾಗಿ ಕಂಡುಹಿಡಿಯುವುದಿಲ್ಲ; ಗುರುತು ಕಂಡುಹಿಡಿಯುತ್ತಾರೆ. ಅವರ ಆಯ್ಕೆಗೆ ಆಧಾರವಾವುದೋ ಅದು ಇತರರಿಗೆ ತಿಳಿಯುವಂತಿಲ್ಲ. ಅಂತೂ

ಆ ಆಯ್ಕೆ ವಿದ್ಯೆ, ಸ್ಥಾನ, ಮಾನ, ಕುಲ, ಐಶ್ವರ್ಯ ಮೊದಲಾದ ಯಾವ ಐಹಿಕ ಉಪಾಧಿಗಳಿಂದಲೂ ಬದ್ಧವಾಗಿಲ್ಲ ಎಂದು ಮಾತ್ರ ಗೊತ್ತಾಗುತ್ತದೆ. ಅಂತೂ ಶಿಷ್ಯರೂ ಆಚಾರ್ಯರೂ ಸಂಧಿಸಿದಾಗ ಅವರ ವರ್ತನೆಯನ್ನು ನೋಡಿದರೆ ಬಹುಕಾಲದ ಪರಿಚಿತರೆಂದು ತೋರುತ್ತದೆಯೇ ಹೊರತು ತತ್ಕಾಲದಲ್ಲಿ ಮಾತ್ರ ಸಂಧಿಸಿದವರೆಂದು ತೋರುವುದಿಲ್ಲ. ಒಂದು ವೇಳೆ ಶಿಷ್ಯನು ಹಳೆಯ ಪರಿಚಯವನ್ನು ಮರೆತವನಂತೆ ಆಚರಿಸಿದರೂ ಆಚಾರ್ಯನಿಗೆ ಸ್ವಲ್ಪವೂ ಸಂದೇಹ ವಿರುವುದಿಲ್ಲ. ಏನಾದರೂ ಸ್ವಲ್ಪ ಸಂಶಯ ತಲೆದೋರಿದರೆ ಅದನ್ನು ಪರೀಕ್ಷಿಸಿ ಬಹು ಬೇಗ ಪರಿಹಾರಮಾಡಿಕೊಳ್ಳುತ್ತಾನೆ. ಕ್ರಮೇಣ ಶಿಷ್ಯನಿಗೂ ಪೂರ್ವ ಪರಿಚಯದ ಅನುಭವವಾಗುತ್ತದೆ. ಶ್ರೀರಾಮಕೃಷ್ಣರ ಮತ್ತು ಅವರ ಅಂತರಂಗ ಶಿಷ್ಯರ ಸಂಬಂಧದಲ್ಲಿ ಪೂರ್ವೋಕ್ತವಿಚಾರವು ಚೆನ್ನಾಗಿ ಒಡೆದು ಮೂಡಿರುತ್ತದೆ.

ಹಸು ತನ್ನ ಕರುವಿನ ಬರವನ್ನೇ ಹಾರುವಂತೆ ಪರಮಹಂಸರು ತಮ್ಮ ಅಂತ ರಂಗದ ಶಿಷ್ಯರ ಆಗಮನವನ್ನು ತೀವ್ರ ವ್ಯಾಕುಲತೆಯಿಂದ ನಿರೀಕ್ಷಿಸುತ್ತಿದ್ದರು. ಅವರ ದಿವ್ಯದೃಷ್ಟಿಗೆ ಶಿಷ್ಯರೆಲ್ಲರೂ ಮೊದಲೇ ಗೋಚರವಾಗಿದ್ದರು. ಎಂದಿಗೆ ಅವರು ತಮ್ಮೆಡೆಗೆ ಬಂದಾರು? ಎಂದಿಗೆ ಅವರಿಂದ ಸರ್ವ ಧರ್ಮ ಸಮನ್ವಯ ತತ್ತ್ವವನ್ನು ಲೋಕಕ್ಕೆ ಬೋಧಿಸಿ, ನಿರರ್ಥಕವಾದ ಮತದ್ವೇಷವನ್ನು ಪರಿಹಾರ ಮಾಡಿಯೇನು? ಎಂದಿಗೆ ತಪ್ತಜೀವಿಗಳಿಗೆ ನವಧರ್ಮಾಮೃತವನ್ನು ನೀಡಿ ಯೇನು? ಎಂಬುದು ಅವರ ದಿನದಿನದ ಹಂಬಲಾಗಿತ್ತು.

ಅದನ್ನು ಕುರಿತು ಪರಮಹಂಸರು ಹೀಗೆ ಹೇಳಿದ್ದಾರೆ—

"ನನ್ನ ವ್ಯಾಕುಲತೆ ಅಸೀಮವಾಗಿತ್ತು. ಇತರರ ಮುಂದೆ ಅದನ್ನು ತೋರದೆ ಗುಟ್ಟುಮಾಡುತ್ತಿದ್ದೆ. ಪ್ರಾಪಂಚಿಕರ ನೀಚ ಕಥೋಪಕಥನಗಳನ್ನು ಕೇಳಿ ಕೇಳಿ ಅಸಹ್ಯವಾಗಿತ್ತು. ನನ್ನ ಗೋಷ್ಠಿಯ ಪ್ರಿಯ ಶಿಷ್ಯರು ಎಂದು ಬಂದಾರು? ಅವರು ಬಂದರೆ ನನ್ನ ಸಾಕ್ಷಾತ್ಕಾರ ಸಂಪತ್ತಿಯನ್ನೆಲ್ಲ ಅವರೆದುರು ಚೆಲ್ಲಿ, ಹೃದಯದ ಭಾರವನ್ನು ಕಡಮೆಮಾಡಿಕೊಳ್ಳಬಹುದು ಎಂದು ಗೋಗರೆಯುತ್ತಿದ್ದೆ. ಪ್ರತಿಯೊಂದು ಸಣ್ಣ ಘಟನೆಯೂ ನನಗೆ ಅವರ ನೆನಪನ್ನೇ ತಂದುಕೊಡುತ್ತಿತ್ತು. ನನ್ನ ಮನಸ್ಸೆಲ್ಲ ಅವರ ಚಿಂತೆಯೊಂದರಿಂದಲೇ ತುಂಬಿಹೋಗಿತ್ತು. ನನ್ನ ಯೌಗಿಕ ದೃಷ್ಟಿಗೆ ಅವರೆಲ್ಲರೂ ಗೋಚರವಾಗುತ್ತಿದ್ದರು. ಯಾರು ಯಾರಿಗೆ ಯಾವ

ಯಾವ ವಿಚಾರಗಳನ್ನು ಬೋಧಿಸಬೇಕೆಂದು ನಿರ್ಣಯಿಸಿದ್ದೆ. ಹಗಲುರುಳಿ ಇರುಳಿಳಿದು ಬರಲು ಯಾವುದೋ ಒಂದು ಯಾತನೆಯು ಭಾರದಿಂದ ನನ್ನೆದೆ ಸಿಡಿಯುತಿತ್ತು. ಮತ್ತೊಂದು ದಿನ ಕಳೆದುಹೋಯಿತು; ಅವರಿನ್ನೂ ಬರಲಿಲ್ಲ! ಎಂದು ಚಿಂತಿಸಿ ಜೀವವು ಸಂತಾಪದಿಂದ ಕುದಿಯುತಿತ್ತು. ಸಂಧ್ಯಾಕಾಲದಲ್ಲಿ ಮಂಗಳಾರತಿಯ ಸಮಯವನ್ನು ಸೂಚಿಸುತ್ತ ಘಂಟೆಗಳು ರವಗೈಯುತ್ತಿರೆ, ವಾದ್ಯಗಳು ಮೊಳಗುತ್ತಿರೆ, ದೀಪಗಳು ಬೆಳಗುತ್ತಿರೆ, ನಾನೊಬ್ಬನೇ ಆ ಮಡಲಿರಿಪ ಕತ್ತಲೆಯಲ್ಲಿ ದೇವಾಲಯದ ಮೇಲು ಮಾಡವನ್ನೇರಿ ಹೃದಯ ವಿದ್ರಾವಕವಾದ ದುಃಖಾತಿಶಯದಿಂದ 'ಓ ನನ್ನ ವತ್ಸರಿರಾ, ಎಲ್ಲಿದ್ದೀರಿ? ನಿಮ್ಮ ನ್ನಗಲಿ ನಾನಿನ್ನು ಇರಲಾರೆ! ಬನ್ನಿ, ಬನ್ನಿ, ಅಯ್ಯೋ, ಬೇಗನೆ ಬನ್ನಿ!' ಎಂದು ಉಚ್ಚಸ್ವರದಿಂದ ಉನ್ಮತ್ತನಂತೆ ಕೂಗುತ್ತಿದ್ದೆ. ನಾನು ನನ್ನ ಶಿಷ್ಯರ ಬರವಿಗಾಗಿ ಮರುಗಿ ಹಾರಿದಂತೆ ಮಾತೆ ಶಿಶುವಿಗಾಗಲಿ, ಸಖನು ಸಖನಿಗಾಗಲಿ, ಪ್ರಿಯನು ಪ್ರೇಯಸಿಗಾಗಿಯಾಗಲಿ ಕಾತರರಾಗಲಾರರು. ಅಯ್ಯೋ, ಆ ಯಾತನೆಯನ್ನು ಹೇಳಿ ಮುಗಿಯಿಸಲಾರೆ. ಅವರ ವಿಯೋಗದಿಂದ ನನ್ನ ಬಾಳು ಬೇಯುತ್ತಿತ್ತು.''

ಆತ್ಮದ ಈ ಮಹಾ ಆರ್ತವಾಣಿ ಅಂತರಿಕ್ಷಕ್ಕೇರಿ ಅಂತರಂಗದ ಶಿಷ್ಯರನ್ನು ಆಹ್ವಾನಿಸಿತು; ಆಕರ್ಷಿಸಿತು. ಏಕೆ? ಏನು? ಎಲ್ಲಿಂದ? ಎಂದರಿಯದೆ ಅದೃಶ್ಯಶಕ್ತಿಯಿಂದ ಆಕೃಷ್ಟರಾಗಿ ಅನೇಕ ದಿಕ್ಕುಗಳಿಂದ ಆತ್ಮಶಿಷ್ಯರೆಲ್ಲರೂ ಒಬ್ಬೊಬ್ಬರಾಗಿ ಬರತೊಡಗಿದರು. ಅವರಲ್ಲಿ ಸೇವಕರು, ಶ್ರೀಮಂತರು, ಅಕ್ಷರ ವಿದ್ಯಾಹೀನರು, ಕೃತವಿದ್ಯರು, ವಿವಾಹಿತರು, ಅವಿವಾಹಿತರು, ವಿದ್ಯಾರ್ಥಿಗಳು, ಅಧ್ಯಾಪಕರು, ವ್ಯಾಪಾರಿಗಳು, ಜಮೀನ್‌ದಾರರು, ಬ್ರಾಹ್ಮಣರು, ಕ್ಷತ್ರಿಯರು, ಶೂದ್ರರು, ಬ್ರಾಹ್ಮಸಮಾಜಿಗಳು, ಸಂಪ್ರದಾಯದ ಹಿಂದುಗಳು, ಬಾಲಕರು, ಯುವಕರು, ವಯಸ್ಕರು, ಯುಕ್ತಿವಾದಿಗಳು, ಭಕ್ತಿವಾದಿಗಳು, ಸಂದೇಹವಾದಿಗಳು, ನಿರೀಶ್ವರವಾದಿಗಳು ಮೊದಲಾದ ಅನೇಕ ವಿಧದ, ಅನೇಕ ಶ್ರೇಣಿಯ, ಅನೇಕ ಪಂಥದ ಪ್ರತಿನಿಧಿಗಳಿದ್ದಾರೆ. ಜೀವಮಾನವೆಲ್ಲವೂ ಸಂಸಾರಿಗಳಾಗಿದ್ದ ಕೆಲವು ಜನ ಅಂತರಂಗ ಶಿಷ್ಯರ ವಿಚಾರವಾಗಿ ಹಿಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಿದ್ದೇವೆ. ಈ ಅಧ್ಯಾಯದಲ್ಲಿ ಸಂನ್ಯಾಸವನ್ನು ಕೈಕೊಂಡ ಶಿಷ್ಯರನ್ನು ಕುರಿತು ಹೇಳುತ್ತೇವೆ. ಪರಮಹಂಸರ ಶಿಕ್ಷಣಕ್ರಮ ಜನರ ಸಂಸ್ಕಾರಗಳಿ

ಗನುಸಾರವಾಗಿ ಹೇಗೆ ಸರ್ವತೋಮುಖವಾಗಿತ್ತು ಎಂಬುದನ್ನು ವಾಚಕರು ಈಗಾಗಲೇ ತಿಳಿದಿರಬೇಕು. ಅವರು ಸಂಸಾರಿ ಶಿಷ್ಯರಿಗೆ ಮಾಡಿದ ಉಪದೇಶವು ಚಂದ್ರಾತಪದಂತೆ ಸೌಮ್ಯವಾದುದು. ಸಂನ್ಯಾಸಿ ಶಿಷ್ಯರಿಗೆ ಮಾಡಿದ ಬೋಧನೆ ಅದಕ್ಕಿಂತಲೂ ಸಮಧಿಕ ವೀರ್ಯವತ್ತಾದುದು. ಏಕೆಂದರೆ, ಸಂನ್ಯಾಸಿಯ ಜೀವನಕ್ರಮವೂ ಭಾವಗಳೂ ಉಗ್ರತಪೋಮಯವಾಗಿ ಇಲ್ಲದಿದ್ದರೆ ಆತನು ಪತಿತನಾಗುವನು. ಬಿಸಿಲಿನಲ್ಲಿ ಹೋಗುವವನಿಗೆ ಸಾಧಾರಣವಾದ ಒಂದು ಕೊಡೆಯೇ ಸಾಕು; ಬೆಂಕಿಯಲ್ಲಿ ಮುಳುಗುವವನಿಗೆ ವಜ್ರಕವಚವೇ ಬೇಕು. ಇಲ್ಲದಿದ್ದರೆ ಆತನು ಬೇಗೆಗೆ ಅಂಜಿ ಹಿಂಜರಿಯುತ್ತಾನೆ, ಅಥವಾ ಸುಟ್ಟು ಬೂದಿಯಾಗುತ್ತಾನೆ. ಸಂನ್ಯಾಸ ಜೀವನವೆಂದರೆ ಕೂರಲಗಿನ ಮೇಲೆ ನಡೆದಂತೆ ಎಂದು ಪರಮಹಂಸರೇ ಹೇಳಿದ್ದಾರೆ. ನಿಜವಾದ ತಪಸ್ಸಿನಲ್ಲಿ ಸತ್ಯಮಿಥ್ಯೆಗಳ ರಾಜಿಗೆ ಅವಕಾಶವೇ ಇಲ್ಲ.

ಲೋಕಕ್ಕೆ ಸಂನ್ಯಾಸಿ ಶಿಷ್ಯರಿಂದಲೇ ತನ್ನ ಸಮನ್ವಯಸಂದೇಶವನ್ನು ಬೋಧಿಸಲು ಸಾಧ್ಯ ಎಂದು ನಿರ್ಧರಮಾಡಿದ ಗುರುದೇವನು ಯೋದ್ಧನು ಆಯುಧಗಳನ್ನು ಮಸೆಯುವಂತೆ ಅವರನ್ನು ತರಬಿಯತ್ತು ಮಾಡಿದನು. ಸ್ವಂತ ಮುಕ್ತಿಯನ್ನು ಸಾಧಿಸುವುದಕ್ಕಾಗಲಿ, ಲೋಕಸಂಗ್ರಹ ಕಾರ್ಯಕ್ಕಾಗಲಿ ಸ್ಥಿತಪ್ರಜ್ಞತೆ ಬೇಕು. ತನ್ನ ಆತ್ಮದಲ್ಲಿಯೇ ಅಸ್ಥಿರವಾದವನು ಜನರಿಗೆ ಯಾವ ಶಾಶ್ವತ ಉಪಕೃತಿಯನ್ನೂ ಮಾಡಲಾರನು. ಅಂತರಂಗದಲ್ಲಿ ಘನ ತಪಸ್ಸಿದ್ದರೆ ಬಹಿರಂಗದಲ್ಲಿ ಮಹತ್ಕಾರ್ಯಗಳು ಸಾಧ್ಯವಾಗುತ್ತವೆ. ಒಳಗೆ ಟೊಳ್ಳಿದ್ದರೆ ಒರಿಯು ಬುಡುಬುಡಿಕೆಯಾಗುತ್ತದೆ. ಪಾತ್ರದ ಸ್ಥೈರ್ಯದಿಂದಲೇ ನದಿ ಹರಿಯಲು ಸಾಧ್ಯ. ಫಿರಂಗಿ ಸ್ಥಿರವಾಗಿ ನಿಲ್ಲುವುದರಿಂದಲ್ಲವೇ ಸಿಡಿದ ಗುಂಡು ಬಹು ದೂರ ಹೋಗುತ್ತದೆ? ಹಿಮಾಲಯದ ಸ್ಥಿತಪ್ರಜ್ಞತೆಯಿಂದಲ್ಲವೇ ಗಂಗೆ, ಸಿಂಧು, ಬ್ರಹ್ಮಪುತ್ರ ಮೊದಲಾದ ನದಿಗಳು ಶಾಶ್ವತ ಲೋಕೋಪಕಾರದಲ್ಲಿ ನಿರತವಾಗಿರುತ್ತವೆ? ಮನುಷ್ಯನೂ ತಪಶ್ಶಕ್ತಿಯನ್ನು ಆರ್ಜಿಸಿದಲ್ಲದೆ ಮಹಾಕಾರ್ಯವನ್ನು ನೆರವೇರಿಸುವುದು ಅಸಾಧ್ಯ. ಬಹುಕಾಲ ಏಕಾಂತವಾಸದಲ್ಲಿ ತಪಸ್ಸು ಮಾಡಿದ ಮೇಲೆಯೇ ಯೇಸು ಕ್ರಿಸ್ತನು ಶಿಲುಬೆಗೇರಲು ಸಮರ್ಥನಾದನು. ಸಿದ್ಧಾರ್ಥನು ಕಾನನಾಂತರದಲ್ಲಿ ಕಠೋರತಪಸ್ಸು ಮಾಡಿದ ತರುವಾಯವೇ

ಬುದ್ಧದೇವನಾಗಿ ಜಗದುದ್ಧಾರಮಾಡಿದನು. ಅದನ್ನರಿತೇ ಗುರುದೇವನು ತನ್ನ ಶಿಷ್ಯರಿಗೆ ಹೀಗೆಂದು ಹೇಳಿದ್ದ :

"ನಾವು ಮರಳಿನ ಮೇಲೆ ಮನೆಯನ್ನು ಕಟ್ಟಬಾರದು ; ಕಲ್ಲುಬಂಡೆಗಳ ಮೇಲೆಯೇ ಕಟ್ಟಬೇಕು. ಅಸ್ತಿಭಾರವು ಸ್ಥಿರವಾಗಿ ನಿಲ್ಲದಿದ್ದರೆ ಮಂದಿರವು ಬಹು ಬೇಗ ನಾಶವಾಗುತ್ತದೆ. ನಾವೀಗ ನಮ್ಮ ಅಂತರಂಗವನ್ನು ಶುದ್ಧಗೊಳಿಸಬೇಕು ; ಸಾಧನೆಮಾಡಿ ಅಪ್ರತಿಹತವಾದ ತಪಶ್ಶಕ್ತಿಯನ್ನು ಆರ್ಜಿಸಬೇಕು. ಆ ತಪೋಜೀವನದಿಂದಲೇ ಸತ್ಯಜ್ಯೋತಿ ಹೊರಹೊಮ್ಮಿ ಜಗತ್ತನ್ನು ಬೆಳಗಲು ಸಮರ್ಥವಾಗುತ್ತದೆ. ಪರ್ವತವು ಎಷ್ಟು ಸ್ಥಿರವಾದರೆ ನದಿಗಳು ಅಷ್ಟು ವೇಗವಾಗಿ, ದೃಢತರವಾಗಿ ಪ್ರವಹಿಸುತ್ತವೆ. ನದಿಗಳ ಸಾಮರ್ಥ್ಯಕ್ಕೆ ಪರ್ವತದ ಸ್ಥೈರ್ಯವೇ ಕಾರಣ. ಎಷ್ಟು ಕಾಲವಾದರೂ ಆಗಲಿ, ತಪಸ್ಸಿನಿಂದ ಮಹಾಬ್ರಹ್ಮಶೈಲವೊಂದನ್ನು ನಿರ್ಮಿಸೋಣ. ಆ ಶೈಲದಿಂದ ಜ್ಞಾನ ಭಕ್ತಿ ವೈರಾಗ್ಯ ಸೇವಾವಾಹಿನಿಗಳು ಹರಿದು, ಜೀವನದ ಮರುಭೂಮಿಯನ್ನು ಸ್ವರ್ಗದ ನಂದನವನವನ್ನಾಗಿ ಮಾಡುತ್ತವೆ. ನಮ್ಮಲ್ಲಿ ಸಾಕಾದಷ್ಟು ಸಹನೆ ಔದಾರ್ಯ ಪ್ರಯತ್ನಗಳಿರಲಿ."

ಗುರುದೇವನ ಸಂನ್ಯಾಸಿ ಶಿಷ್ಯರಲ್ಲಿ ಮೊತ್ತಮೊದಲು ಆತನಲ್ಲಿಗೆ ಬಂದವನು ಲಾಟು. ಆತನು ಬೀಹಾರ್ ಪ್ರಾಂತದವನು. ತಂದೆತಾಯಿಗಳು ಬಹು ಬಡವರು. ಲಾಟು ಕೂಲಿಮಾಡಿ ಬಾಳು ಹೊರೆಯಲು ಕಲ್ಕತ್ತೆಗೆ ಬಂದನು. ನಿರಕ್ಷರಕುಕ್ಷಿಯಾಗಿದ್ದ ಆತನು ರಾಮಚಂದ್ರದತ್ತನಲ್ಲಿ ಮನೆಗೆಲಸದ ಆಳಾಗಿ ನಿಂತನು. ರಾಮಚಂದ್ರದತ್ತನು ಪರಮಹಂಸರಲ್ಲಿಗೆ ಆಗಾಗಲೇ ಬಂದು ಅವರ ಭಕ್ತನಾಗಿದ್ದನೆಂಬುದು ಹಿಂದೆಯೇ ಸೂಚಿತವಾಗಿದೆ. ತನ್ನ ಯಜಮಾನನಿಂದ ಗುರುದೇವನ ವಿಚಾರವನ್ನು ಕೇಳಿ ತಿಳಿದ ಲಾಟು ಆತನ ದರ್ಶನಮಾಡಲು ಕ್ರಿ. ಶ. ೧೮೭೯ರಲ್ಲಿ ದಕ್ಷಿಣೇಶ್ವರಕ್ಕೆ ಹೋದನು. ಪರಮಹಂಸರು ಚಾವಡಿಯಲ್ಲಿ ಶತಪಥ ತಿರುಗುತ್ತಿದ್ದುದನ್ನು ಕಂಡು ಹೋಗಿ ಅಡ್ಡಬಿದ್ದು ನಮಸ್ಕಾರಮಾಡಿದನು.

ಶ್ರೀರಾಮಕೃಷ್ಣರು "ಎಲ್ಲಿಂದ ಬಂದೆ ?" ಎಂದು ಕೇಳಿದರು.

"ರಾಮಚಂದ್ರದತ್ತರ ಮನೆಯಿಂದ" ಎಂದು ಹೇಳಲು, ಪರಮಹಂಸರು ಆತನನ್ನು ತಮ್ಮ ಕೊಟಡಿಗೆ ಕರೆದುಕೊಂಡುಹೋಗಿ ಪ್ರಸಾದಕೊಟ್ಟು ಮಾತುಕತೆಯಾಡಿದರು. ಅವರು ಬಡಸೇವಕನಾದ ತನ್ನಲ್ಲಿ ತೋರಿದ ಆದರ ವಿಶ್ವಾಸ

ಗಳನ್ನು ಕಂಡು ಲಾಟು ಎದೆಗರಗಿಹೋದನು. ಸಂಜೆಯಾಗಲು ಲಾಟು ಹೊರ ಡಲುದ್ಯುಕ್ತನಾದನು.

ಪರಮಹಂಸರು "ನಡೆದುಕೊಂಡು ಹೋಗಬೇಡ, ದೋಣಿಯಲ್ಲಿ ಜಾಗ ಮಾಡಿಕೊಂಡುಹೋಗು, ದುಡ್ಡಿಲ್ಲದಿದ್ದರೆ ದುಡ್ಡು ಕೊಡುತ್ತೇನೆ" ಎಂದರು.

"ದುಡ್ಡು ಬೇಡ, ಮಹಾಶಯ ; ನನ್ನಲ್ಲಿದೆ."

"ಇದೆಯೋ ಇಲ್ಲವೋ ? ಇಲ್ಲದಿದ್ದರೆ ತೆಗೆದುಕೊಂಡುಹೋಗು, ಸಂಕೋಚ ಮಾಡಬೇಡ."

ಲಾಟು ಮುಗುಳುನಗೆ ನಗುತ್ತ ತನ್ನ ಜೇಬಿನಲ್ಲಿದ್ದ ಹಣವನ್ನು ಸದ್ದು ಮಾಡಿ "ನೋಡಿ, ಇಲ್ಲಿದೆ." ಎಂದನು.

ಪರಮಹಂಸರು "ಪುನಃ ಬಾ." ಎಂದರು.

"ಬರುತ್ತೇನೆ, ಮಹಾಶಯ ; ಖಂಡಿತ ಬರುತ್ತೇನೆ."

ಲಾಟು ಸ್ವಾಮಿ ಅದ್ಭುತಾನಂದರಾದರು. ಅವರ ತಪಸ್ಸನ್ನು ನೋಡಿ ಸ್ವಾಮಿ ವಿವೇಕಾನಂದರು "ಭಗವಾನ್ ಶ್ರೀರಾಮಕೃಷ್ಣರ ಅದ್ಭುತಶಕ್ತಿಯ ಮಹಿಮೆ ಗೊತ್ತಾಗಬೇಕಾದರೆ ಲಾಟುವನ್ನು ನೋಡಿ. ಅಂತಹ ತಪಸ್ವಿ ಅಪೂರ್ವ." ಎಂದರಂತೆ.

ರಾಖಾಲ ಚಂದ್ರಘೋಷನು ಕ್ರಿ. ಶ. ೧೮೬೩ ರಲ್ಲಿ ಜನಿಸಿದನು. ಆತನ ತಂದೆ ದೊಡ್ಡ ಜಮಿನ್ದಾರನಾಗಿದ್ದನು. ಬಾಲಕನು ಸುಖದಲ್ಲಿ ಬೆಳೆದು ಕಲ್ಕತ್ತೆ ಯಲ್ಲಿ ನವೀನ ವಿದ್ಯಾಭ್ಯಾಸಮಾಡಿದನು. ಆಗಿನ ಕಾಲದ ಮೇಧಾವಿಗಳಾದ ತರುಣರಂತೆ ಆತನೂ ಬ್ರಾಹ್ಮಸಮಾಜಕ್ಕೆ ಸೇರಿದನು. ಸುಮಾರು ಹದಿನಾರನೆಯ ವಯಸ್ಸಿನಲ್ಲಿ ಆತನಿಗೆ ಮನಮೋಹನಮಿತ್ರನ ತಂಗಿಯನ್ನು ಕೊಟ್ಟು ಮದುವೆ ಯಾಯಿತು. ಮನಮೋಹನಮಿತ್ರನಿಂದಲೇ ಮೊತ್ತಮೊದಲು ಪರಮಹಂಸರ ವಿಚಾರವನ್ನು ತಿಳಿದು ಅವರನ್ನು ನೋಡಲು ಕ್ರಿ. ಶ. ೧೮೮೧ ರಲ್ಲಿ ದಕ್ಷಿಣೇಶ್ವ ರಕ್ಕೆ ಬಂದನು. ಪ್ರಥಮ ದರ್ಶನದಲ್ಲಿಯೇ ಗುರುದೇವನು ತನ್ನ ಪ್ರಿಯ ಶಿಷ್ಯನ ಗುರುತು ಕಂಡುಹಿಡಿದನು. ರಾಖಾಲನು ಬರುವುದಕ್ಕೆ ಕೆಲವು ದಿನಗಳ ಮೊದಲು ಪರಮಹಂಸರಿಗೆ ಒಂದು ದರ್ಶನವಾಗಿತ್ತು. ಆ ದರ್ಶನದಲ್ಲಿ ಜಗ ನ್ಮಾತೆ ಶಿಶುವೊಂದನ್ನು ತಂದು ಅವರ ತೊಡೆಯ ಮೇಲೆ ಇಟ್ಟು "ಇದು ನಿನ್ನ

ಶಿಶು." ಎಂದಂತಾಯಿತು. ಪರಮಹಂಸರು ಬೆಚ್ಚಿಬಿದ್ದು "ಏನು! ನನಗೆಲ್ಲಿಯ ಶಿಶು!" ಎಂದರು. ಜಗನ್ಮಾತೆ ದರಸ್ಮಿತೆಯಾಗಿ "ಇದು ನಿನ್ನ ಧರ್ಮ ಶಿಶು!" ಎಂದು ಹೇಳಿ ಸಮಾಧಾನಮಾಡಿದಳು. ಇದಾದ ಸ್ವಲ್ಪ ದಿನಗಳಲ್ಲಿ ರಾಖಾಲನು ಬಂದಾಗ ಅವರು ಜಗನ್ಮಾತೆ ಕೊಟ್ಟ ತಮ್ಮ ಧರ್ಮಶಿಶುವನ್ನು ಗುರುತಿಸಿದರು. ಅವರಿಬ್ಬರ ಮೈತ್ರಿ ಅಸಾಧಾರಣವಾಗಿ ಬೆಳೆಯಿತು. ಶ್ರೀರಾಮ ಕೃಷ್ಣರಲ್ಲಿ ರಾಖಾಲನಿಗಿದ್ದ ಸಲಿಗೆ ಮತ್ತಾವ ಶಿಷ್ಯರಿಗೂ ಇರಲಿಲ್ಲವಂತೆ. ಅವರು ಆತನನ್ನು ನಿತ್ಯಸಿದ್ಧರ ಗುಂಪಿಗೆ ಸೇರಿಸಿದ್ದರು. ರಾಖಾಲನಿಗೆ ಮದುವೆ ಯಾಗಿದೆ ಎಂಬ ಸಮಾಚಾರವನ್ನು ಕೇಳಿ ಶ್ರೀರಾಮಕೃಷ್ಣರು ಉದ್ವಿಗ್ನ ರಾಗಿದ್ದರು. ಒಂದು ದಿನ ರಾಖಾಲನ ಪತ್ನಿಯಾದ ಬಾಲವಧು ಪರಮಹಂಸರ ಭಕ್ತರಲ್ಲಿ ಒಬ್ಬಳಾಗಿದ್ದ ತನ್ನ ಅತ್ತೆಯೊಡನೆ ದಕ್ಷಿಣೇಶ್ವರಕ್ಕೆ ಬಂದಳು. ಪರಮ ಹಂಸರು ಆಕೆಯನ್ನು ಪರೀಕ್ಷಿಸಿ ಆಕೆಯಿಂದ ಪತಿಯ ಧರ್ಮಜೀವನಕ್ಕೆ ಅಡಚಣೆ ಯಾಗದೆಂದು ತಿಳಿದು ಸಮಾಧಾನ ಹೊಂದಿದರು. ರಾಖಾಲನು ಗುರುವಿನ ಸಾನ್ನಿಧ್ಯದಲ್ಲಿ ದಕ್ಷಿಣೇಶ್ವರದಲ್ಲಿಯೇ ವಾಸಿಸತೊಡಗಿದನು. ಮುಂದೆ ರಾಖಾಲನು ಬ್ರಹ್ಮಾನಂದರಾದುದನ್ನು ನೋಡುತ್ತೇವೆ.

ರಾಖಾಲನು ಬಂದ ಕಾಲದಲ್ಲಿಯೇ ಮತ್ತೊಬ್ಬ ಶಿಷ್ಯನೂ ಪರಮಹಂಸ ರೆಡೆಗೆ ಬಂದನು. ಆತನನ್ನು ಗೋಪಾಲದಾದಾ ಎಂದು ಕರೆಯುತ್ತಿದ್ದರು. ಆತನು ಕಾಗದದ ವ್ಯಾಪಾರಿಯಾಗಿದ್ದನು. ತನ್ನ ಪತ್ನಿಯ ಮರಣದಿಂದ ದುಃಖಿತನಾಗಿ ಮಿತ್ರನೊಬ್ಬನ ಸಲಹೆಯಂತೆ ದಕ್ಷಿಣೇಶ್ವರಕ್ಕೆ ಬಂದನು. ಬಂದವನು ಶಿಷ್ಯನಾಗಿ ನಿಂತು ಕಡೆಗೆ ಸಂನ್ಯಾಸ ಸ್ವೀಕಾರಮಾಡಿ ಸ್ವಾಮಿ ಅದ್ವೈತಾನಂದರಾದರು.

ಕ್ರಿ. ಶ. ೧೮೮೧ ನೆಯ ಸಂವತ್ಸರದಲ್ಲಿ ದಕ್ಷಿಣೇಶ್ವರದ ಮಹಾಜ್ಯೋತಿಯ ಬಳಿಗೆ ಮತ್ತೊಂದು ಮಹಾಜ್ಯೋತಿ ಬಂದಿತು. ಆ ಜ್ಯೋತಿಯೇ ಮುಂದೆ ಸ್ವಾಮಿ ವಿವೇಕಾನಂದರೆಂದು ಪ್ರಸಿದ್ಧರಾದ ನರೇಂದ್ರನಾಥದತ್ತ. ಶ್ರೀರಾಮ ಕೃಷ್ಣ ಮತ್ತು ನರೇಂದ್ರರ ಪರಸ್ಪರ ಸಂದರ್ಶನವು ಭೂಮಂಡಲದ ಧರ್ಮಚರಿತ್ರೆ ಯಲ್ಲಿ ಒಂದು ಮಹಾಸಂಘಟನೆ. ಅದರಿಂದ ಪ್ರಾಚೀನ ಅರ್ವಾಚೀನಗಳೆರಡಕ್ಕೂ ಅಭಿಮಾನದ ವಿಷಯವಾದ ಒಂದು ದಿಗ್ವಿಜಯವು ಸಂಭವಿಸಿತೆಂದೇ ಹೇಳಬಹುದು. ಆ ಮಹಾಸಂದರ್ಶನದ ಅರ್ಥ, ವೈಭವ ಮತ್ತು ಪರಿಣಾಮಗಳು ಪರಮಹಂಸರಿಗೆ

ಚೆನ್ನಾಗಿ ತಿಳಿದಿತ್ತು. ಆದ್ದರಿಂದಲೇ ಅವರು ನರೇಂದ್ರನ ಆಗಮನವನ್ನು ವಿಶೇಷ ರೀತಿಯಿಂದ ಕಂಡರು. ತಮ್ಮ ಅಂತರಂಗ ಶಿಷ್ಯರಲ್ಲಿ ಅಗ್ರಗಣ್ಯನಾದ ಆತನನ್ನು ಕಂಡ ಕೂಡಲೆ ಕಂಡುಹಿಡಿದರು. ಹೆಚ್ಚೇನು? ನರೇಂದ್ರನ ಆಗಮನವನ್ನೇ ಕಾತರ ರಾಗಿ ನಿರೀಕ್ಷಿಸುತ್ತಿದ್ದರು ಎಂಬುದು ಅವರ ಆಚರಣೆಯಿಂದಲೇ ಗೊತ್ತಾಗುತ್ತದೆ.

ನರೇಂದ್ರನು ಪರಮಹಂಸರೆಡೆಗೆ ಬರುವ ಮೊದಲು ಅವರು ಕಂಡ ಒಂದು ಅದ್ಭುತ ದರ್ಶನವನ್ನು ಅವರ ಮಾತಿನಿಂದಲೇ ವರ್ಣಿಸುತ್ತೇವೆ. ಇಂದಿನ ಕನಸು ನಾಳೆಯ ನನಸು. ಮಹಾತ್ಮರ ಮಹಾಸ್ವಪ್ನಗಳಿಂದಲೆ ಭವಿಷ್ಯತ್ತಿನ ವಾಸ್ತವವು ಸಿದ್ಧವಾಗುತ್ತದೆ. ಗುರುದೇವನು ಕಂಡ ಕನಸನ್ನು ಮನಃಶಾಸ್ತ್ರ ಶಸ್ತ್ರದಿಂದ ವಿಶ್ಲೇಷಿಸಿ ನಾಶಮಾಡಬಹುದು. ಅದು ಒಂದು ವೇಳೆ ಸಾಧ್ಯವಾಗಬಹುದಾದರೂ ಇಲ್ಲಿ ಅಪ್ರಕೃತ. ಆ ಕನಸು ಮುಂದಿನ ನನಸನ್ನು ಸೂಚಿಸುತ್ತದೆ ಎಂಬುದು ನಮ್ಮ ವಾದ. ಅವರು ಹೀಗೆ ಹೇಳಿದ್ದಾರೆ:

"ಒಂದು ಸಾರಿ ಸಮಾಧಿಯಲ್ಲಿದ್ದಾಗ ನನ್ನಾತ್ಮವು ಯಾವುದೋ ಒಂದು ಜ್ಯೋತಿಪಥದಲ್ಲಿ ಊರ್ಧ್ವಮುಖವಾಗಿ ಹೋಗುತ್ತಿದ್ದಂತೆ ಭಾಸವಾಯಿತು. ಸ್ವಲ್ಪ ಕಾಲದಲ್ಲಿಯೇ ಭವಪ್ರಪಂಚದಿಂದ ಅತೀತನಾಗಿ ಭಾವಪ್ರಪಂಚವನ್ನು ಸೇರಿದೆನು. ಮೇಲಮೇಲಕ್ಕೆ ಹೋಗುತ್ತ ಹೋಗುತ್ತ ಹಾದಿಯ ಇಕ್ಕೆಲಗಳ ಲ್ಲಿಯೂ ಭಾವಶರೀರಿಗಳಾದ ದೇವದೇವತೆಗಳು ಹೊಳೆಯುತ್ತಿದ್ದುದು ನನ್ನ ಕಣ್ಣಿಗೆ ಬಿತ್ತು. ಕಡೆಗೆ ಶಾಂತಿಮುದ್ರಿತವಾದ ಭಾವಪ್ರಪಂಚವನ್ನು ದಾಟಿ ನಿರ್ಗುಣವನ್ನು ಪ್ರವೇಶಿಸಿದೆ. ಅಲ್ಲಿ ಯಾವ ವಿಧವಾದ ಸಶರೀರಭಾವವೂ ಇರಲಿಲ್ಲ. ದೇವತೆ ಗಳಿಗೂ ಕೂಡ ಅದು ಅಗಮ್ಯವಾದುದು. ಅತ್ತಕಡೆ ದೃಷ್ಟಿಪ್ರಸಾರಮಾಡಲು ಕೂಡ ಅವರು ಹೆದರುತ್ತಾರೆ. ಅಲ್ಲಿ ಇದ್ದಕ್ಕಿದ್ದ ಹಾಗೆ, ಸಮಾಧಿಮಗ್ನರಾಗಿ ಕುಳಿತ ಸಪ್ತಋಷಿಗಳು ನನಗೆ ಕಾಣಿಸಿದರು. ಎಲ್ಲ ಮನುಷ್ಯರನ್ನೂ ಎಲ್ಲ ದೇವತೆ ಗಳನ್ನೂ ಮೀರಿದ ಆತ್ಮದೀಪ್ತಿ ಅವರಲ್ಲಿ ರಂಜಿಸಿತ್ತು. ಅವರನ್ನು ನೋಡಿ ಮನದಲ್ಲಿಯೇ ಸ್ತೋತ್ರಮಾಡುತ್ತ ನಿಂತಿರಲು, ಹಠಾತ್ತಾಗಿ ಅಲ್ಲಿ ಅಖಂಡವಾಗಿ ಪ್ರಸರಿಸಿದ್ದ ಜ್ಯೋತಿ ಘನೀಭೂತವಾಗಿ ಒಂದು ದಿವ್ಯ ಶಿಶುವಿನ ಆಕಾರವನ್ನು ತಾಳಿ ಶೋಭಿಸಿತು. ಆ ಶಿಶು ಸಪ್ತರ್ಷಿಗಳಲ್ಲಿ ಒಬ್ಬಾತನ ಬಳಿಗೆ ಬಂದು ತನ್ನ ಮೃದುಕೋಮಲಬಾಹುಗಳಿಂದ ಆತನ ಕುತ್ತಿಗೆಯನ್ನು ಕಟ್ಟಿಕೊಂಡು ಸವಿ

ೋರಲಿನಿಂದ ಕರೆಕರೆದು ಋಷಿಯನ್ನು ಸಮಾಧಿಸ್ಥಿತಿಯಿಂದ ಕೆಳಗಿಳಿಯಲು ಪ್ರಯತ್ನಿಸಿತು. ಆ ಶಿಶುವಿನ ಮಂತ್ರಸ್ಪರ್ಶಕ್ಕೆ ಋಷಿ ಸಮಾಧಿಯಿಂದ ಜಗುಳ್ದು ನ್ನ 'ಪದ್ಮಸದೃಶವಿಶಾಲ ನೇತ್ರದ್ವಯಗಳಿಂದ ಹಸುಳೆಯನ್ನು ಅನಿಮೇಷ ಾಗಿ ನೋಡಿದನು. ತನ್ನ ಇಷ್ಟಮೂರ್ತಿಯನ್ನು ಸಂದರ್ಶಿಸಿದನೋ ಎಂಬಂತೆ ತನ ಮುಖಬಿಂಬವು ಪ್ರಫುಲ್ಲ ತೇಜಸ್ವಿಯಾಯಿತು. ಆ ಶಿಶು ಮುಗುಳುನಗೆ ೋರಿ 'ನಾನು ಕೆಳಗೆ ಹೋಗುತ್ತೇನೆ. ನೀನೂ ಬರಬೇಕು.' ಎಂದಿತು. ುಷಿ ಮಾತಾಡಲಿಲ್ಲ; ಆದರೆ ಸಮ್ಮತಿ ತೋರುವ ಕರುಣಾಮಯ ದೃಷ್ಟಿ ುನ್ನು ಬೀರಿ ಹಸುಳೆಯನ್ನು ನೋಡುತ್ತ ನೋಡುತ್ತ ಪುನಃ ಸಮಾಧಿಮಗ್ನ ಾದನು. ಆದರೆ ಆತನ ಅಂಶವೊಂದು ಜ್ಯೋತಿರೂಪದಿಂದ ಧರಾಭಿಮುಖವಾಗಿ ವತರಿಸುತ್ತಿದ್ದುದನ್ನು ಕಂಡು ವಿಸ್ಮಿತನಾದೆನು. ನರೇಂದ್ರನನ್ನು ನೋಡಿದಾ ಕ್ಷಣವೆ ಆ ಋಷಿಯೆಂದು ಗುರುತು ಹಿಡಿದೆನು."

ಆ ದಿವ್ಯ ಶಿಶು ಯಾರೆಂದು ಸಂದೇಹಪಡಬೇಕಾಗಿಲ್ಲ. ಪರಮಹಂಸರು ದನ್ನು ಬಹಿರಂಗವಾಗಿ ಹೇಳದಿದ್ದರೂ ತಮ್ಮ ಅಂತರಂಗ ಶಿಷ್ಯರೊಡನೆ ತಾವೇ ಶಿಶುವೆಂದು ಸೂಚನೆ ಕೊಟ್ಟಿದ್ದಾರೆ. ಅವರು ಜೀವಮಾನವೆಲ್ಲವೂ ಶಿಶು ಾಗಿಯೇ ಇದ್ದರು. ಕಠೋರಸಾಧನೆ ತಪಸ್ಸುಗಳನ್ನು ಮಾಡಿ ಸಮಸ್ತಯತತ್ತ್ವ ನ್ನೇನೋ ಅನುಭವದಿಂದ ಕಂಡುಹಿಡಿದರು. ಆದರೆ ಅದನ್ನು ಲೋಕದ ಮೇಲೆ ಪ್ರಯೋಗಮಾಡಲು ಉತ್ಸವ ಮೂರ್ತಿಯೊಂದು ಬೇಕಾಗಿತ್ತು. ಆ ಉತ್ಸವ ಮೂರ್ತಿಗೆ ಅದ್ಭುತ ಮೇಧಾಶಕ್ತಿ, ವೀರ್ಯವತ್ತಾದ ವಾಕ್ಶಕ್ತಿ, ವಜ್ರಸಮನಾದ ಶರೀರಶಕ್ತಿ, ಮಹಾತತ್ತ್ವಗಳನ್ನು ಜೀರ್ಣಿಸಿಕೊಳ್ಳುವ ತಪಸ್ಸು, ಜಗತ್ತನ್ನು ಕರ್ಷಿಸುವ ತೇಜಸ್ಸು, ನಾಯಕನಾಗಿ ಅಧಿಕಾರವಾಣಿಯಿಂದ ಜನರನ್ನು ನಡೆಸುವ ಓಜಸ್ಸು, ಎಲ್ಲಕ್ಕಿಂತಲೂ ಮಿಗಿಲಾಗಿ ವಿಶಾಲಹೃದಯ, ಹೃದಯ ಮಾರ್ದವ, ವಿಶ್ವಪ್ರೇಮ, ಕರುಣ, ದಯೆ ಮೊದಲಾದ ಮಹಾಗುಣಗಳು ಆವಶ್ಯಕ ವಾಗಿದ್ದುವು. ನರೇಂದ್ರನು ಮೇಲೆ ಹೇಳಿದ ಗುಣಗಳಿಗೆ ಗಣಿಯಾಗಿದ್ದನು. ಆದ್ದರಿಂದಲೇ ಗುರುದೇವನ ಕಣ್ಮಣಿಯಾದನು.

ಶ್ರೀಮಂತ ಕ್ಷತ್ರಿಯ ವಂಶದಲ್ಲಿ ಜನಿಸಿ ರಾಜರಾಜ್ಞೀ ಸದೃಶರಾದ ಪಿತಾ ಮಾತೆಯರ ಗೌರವಮಯ ನೇತೃತ್ವದಲ್ಲಿ ಬೆಳೆದು, ಪಾಶ್ಚಾತ್ಯ ಸಂಸ್ಕೃತಿಯ

ನವೀನ ವಿದ್ಯಾಭ್ಯಾಸಮಾಡಿ, ನರೇಂದ್ರನು ಕಲ್ಕತ್ತೆಯ ತರುಣರಲ್ಲಿ ಕೇಸರಿಯಾಗಿದ್ದನು. ಆತನಲ್ಲಿ ಸಿಂಹಸೌಂದರ್ಯವೂ ಹರಿಣಲಾಲಿತ್ಯವೂ ಒಂದುಗೂಡಿದ್ದುವು. ವ್ಯಾಯಾಮಶಾಲೆಗಳಲ್ಲಿಯೂ ಕ್ರೀಡಾಸ್ಥಾನಗಳಲ್ಲಿಯೂ ಆತನು ಮುಂದಾಳಾಗಿದ್ದಂತೆಯೇ ಸಂಗೀತಸಾಹಿತ್ಯ ದರ್ಶನಶಾಸ್ತ್ರಗಳಲ್ಲಿಯೂ ಆತನು ಅದ್ವಿತೀಯನಾಗಿದ್ದನು. ತರ್ಕದಲ್ಲಿಯೂ ವಾದದಲ್ಲಿಯೂ ಯಾರಿಗೂ ಬಿಟ್ಟುಕೊಡುತ್ತಿರಲಿಲ್ಲ. ಇಂತಹ ಸರ್ವತೋಮುಖತೆಯ ಫಲವಾಗಿಯೋ ಎಂಬಂತೆ ನಾನಾ ಭಾವರಾಗಗಳಿಂದ ತಾಡಿತವಾದ ಆತನ ಹೃದಯದಲ್ಲಿ ತುಮುಲವೆದ್ದಿತು. ಆಗಿನ ಪ್ರಗತಿಗಾಮಿಗಳಾದ ಯುವಕರ ಪದ್ಧತಿ ಅಥವಾ ಹವ್ಯಾಸದಂತೆ ಆತನೂ ಬ್ರಾಹ್ಮಸಮಾಜಕ್ಕೆ ಸೇರಿ ಅಲ್ಲಿಯೂ ಎಲ್ಲರ ಕಣ್ಣಿಗೆ ಬಂದನು. ಏನು ಮಾಡಿದರೂ ಯಾವ ಗ್ರಂಥಗಳನ್ನು ಓದಿದರೂ ಯಾವ ಸಂಸ್ಥೆಗೆ ಸದಸ್ಯನಾದರೂ ಯಾರೊಡನೆ ಎಷ್ಟು ತರ್ಕಮಾಡಿದರೂ ಸೃಷ್ಟಿಯ ಸಮಸ್ಯೆ ಪರಿಹಾರವಾಗಲಿಲ್ಲ; ಹೃದಯದ ಅಶಾಂತಿ ತೊಲಗಲಿಲ್ಲ; ಬೇಗೆ ಆರಲಿಲ್ಲ. ಜೀವ, ಜೀವನ, ಸುಖ, ದುಃಖ, ಜಗತ್ತು, ಈಶ್ವರ ಮೊದಲಾದ ಸಮಸ್ಯೆಗಳು ಬರಬರುತ್ತ ಕರ್ಕಶವಾಗುತ್ತ ಬಂದುವು. ಬೆಳಕನ್ನು ಹುಡುಕಿದಷ್ಟೂ ಕತ್ತಲೆ ಹೆಚ್ಚಿದಂತಾಯಿತು. ಕೇಶವಚಂದ್ರಸೇನ, ಮಹರ್ಷಿ ದೇವೇಂದ್ರನಾಥ ಠಾಕೂರ ಮೊದಲಾದವರನ್ನು ನಿರ್ದಾಕ್ಷಿಣ್ಯವಾಗಿ ಪ್ರಶ್ನೆಮಾಡಿದನು. ಅವರ ಉತ್ತರ ಉಪನ್ಯಾಸಗಳಲ್ಲಿ ಯಾವುದೂ ಸಮರ್ಪಕವಾಗಿ ತೋರಲಿಲ್ಲ. ಎದೆಯ ಕುದಿ ನಿಲ್ಲಲಿಲ್ಲ. ಕೊಟಡಿಯ ಬಾಗಿಲುಗಳನ್ನು ಮುಚ್ಚಿಕೊಂಡು ಧ್ಯಾನಮಾಡಿದನು. ಕತ್ತಲೆ ಹೆಚ್ಚಿತೇ ಹೊರತು ಕಡಮೆಯಾಗಲಿಲ್ಲ. ಕಡೆಗೆ ಹತಾಶನಾಗಿ ಸಂದೇಹವಾದಿಯಾಗಲು ಪ್ರಯತ್ನಿಸಿದನು. ಆದರೆ ಅಂತರಂಗದ ವಾಣಿ ಅದನ್ನು ಒಪ್ಪಲಿಲ್ಲ. ನಿಷ್ಪ್ರಯೋಜಕವಾದ ಸೃಷ್ಟಿಯ ಸಮಸ್ಯೆಯ ಪ್ರಶ್ನೆಗಳನ್ನೆಲ್ಲ ಮನಸ್ಸಿನಿಂದ ಆಚೆ ನೂಕಿ ಧನಮಾನಾರ್ಜನೆಗಳನ್ನು ಮಾಡಿ, ಐಹಿಕಸಂಪದ್ಯುಕ್ತನಾಗಿ, ಕೀರ್ತಿಭಾಜನನಾಗುವೆನೆಂದು ಆಲೋಚಿಸಿದನು. ಹೃದಯವು ಅದನ್ನೂ ಒಪ್ಪಲಿಲ್ಲ. ಹಾಗಾಗಿ ಹೀಗಾಗಿ ನರೇಂದ್ರನು ತೂಗುಯ್ಯಾಲೆಯಾದನು.

ಆಗಿನ ತಮ್ಮ ಸ್ಥಿತಿಯನ್ನು ಕುರಿತು ವಿವೇಕಾನಂದರು ಹೀಗೆ ಹೇಳಿದ್ದಾರೆ— "ರಾತ್ರಿ ನಿದ್ದೆಮಾಡುವ ಮೊದಲು ದಿನದಿನವೂ ಎರಡು ಜೀವನ ಚಿತ್ರಗಳು ನನ್ನ

ಕಣ್ಣಿನ ಮುಂದೆ ಸುಳಿಯುತ್ತಿದ್ದುವು. ಒಂದು ಚಿತ್ರದಲ್ಲಿ ನಾನು ಶ್ರೀಮಂತನಾಗಿ ಯಶಸ್ವಿಯಾಗಿ ಅಧಿಕಾರ ಮತ್ತು ಗೌರವಗಳಿಂದ ಕೂಡಿದವನಾಗಿ ಲೋಕದ ದೊಡ್ಡ ಮನುಷ್ಯರಲ್ಲಿ ಗಣ್ಯನಾಗಿರುವುದನ್ನು ಕಾಣುತ್ತಿದ್ದೆ. ಅದರಂತಾಗಲು ನನಗೆ ಶಕ್ತಿಯಿರುವುದೂ ಅನುಭವವಾಗುತ್ತಿತ್ತು. ಆದರ ಉತ್ತರಕ್ಷಣದಲ್ಲಿಯೆ ಮತ್ತೊಂದು ಮಹತ್ತರವಾದ ಚಿತ್ರವು ಶೋಭಿಸುತ್ತಿತ್ತು. ಅದರಲ್ಲಿ ನಾನು ಸಂನ್ಯಾಸಿಯಾಗಿ ಕೌಪೀನಧಾರಿಯಾಗಿ ಮಾಧುಕರೀಭಿಕ್ಷೆಯಿಂದ ತರುತಲ ಗಳಲ್ಲಿ ವಾಸಿಸುವಂತೆ ತೋರುತ್ತಿತ್ತು. ಪೂರ್ವಕಾಲದ ಋಷಿಗಳಂತೆ ಹಾಗೆ ಜೀವಿಸುವುದೂ ನನ್ನಿಂದ ಸಾಧ್ಯವೆಂದು ಭಾಸವಾಯಿತು. ಆ ಎರಡು ಚಿತ್ರಗಳಲ್ಲಿ ಎರಡನೆಯದೇ ನನ್ನ ಮನಸ್ಸನ್ನು ಹೆಚ್ಚುಹೆಚ್ಚಾಗಿ ಆಕರ್ಷಿಸಿತು. ಸಂನ್ಯಾಸ ವಿಲ್ಲದೆ ಸಚ್ಚಿದಾನಂದವು ದುರ್ಲಭವೆಂದು ತೋರಿತು. ಆ ಆಲೋಚನೆಯ ಆನಂದವನ್ನು ಅನುಭವಿಸುತ್ತ ನಿದ್ದೆ ಹೋಗುತ್ತಿದ್ದೆ. ದಿನದಿನವೂ ತಪ್ಪದೆ ಹೀಗಾ ಗುತ್ತಿತ್ತು.''

ನರೇಂದ್ರನು ಇಂತಹ ಮನಸ್ಸಾವಸ್ಥೆಯಲ್ಲಿದ್ದಾಗಲೇ ಕ್ರಿ. ಶ. ೧೮೮೧ ನೇ ವರ್ಷದ ನವಂಬರು ತಿಂಗಳಲ್ಲಿ ಮಿತ್ರನೊಬ್ಬನ ಮನೆಯಲ್ಲಿ ನಡೆದ ಒಂದು ಉತ್ಸವ ದಲ್ಲಿ ಮೊದಲು ಪರಮಹಂಸರ ಕಣ್ಣಿಗೆ ಬಿದ್ದನು. ಅಲ್ಲಿ ನರೇಂದ್ರನು ಕೆಲವು ಕೀರ್ತನೆಗಳನ್ನು ಹಾಡಿದನು. ಆ ಕಂಠದಲ್ಲಿ ಆತ್ಮದ ಅತೃಪ್ತಿ ವ್ಯಾಕುಲತೆ ಹಾರೈಕೆಗಳು ಚೆನ್ನಾಗಿ ಹೊರಹೊಮ್ಮುತ್ತಿದ್ದುವು. ಪರಮಹಂಸರ ಸುತೀಕ್ಷ್ಣ ವೈನತೇಯ ದೃಷ್ಟಿ ತಮ್ಮ ಆಗಾಮಿ ಶಿಷ್ಯನನ್ನು ಗೊತ್ತುಹಚ್ಚಿತು. ಆತನನ್ನು ದಕ್ಷಿಣೇಶ್ವರಕ್ಕೆ ಆಹ್ವಾನಿಸಿದರು.

ಕೆಲವು ದಿನಗಳು ಕಳೆದ ಬಳಿಕ ನರೇಂದ್ರನು ತನ್ನ ಕೆಲವು ನಿರಾಲೋಚನೆಯ ಚಂಚಲಸ್ವಭಾವದ ಮಿತ್ರರೊಡಗೂಡಿ ದಕ್ಷಿಣೇಶ್ವರಕ್ಕೆ ಬಂದನು. ಬಂದವನು ಚಿಂತಾಮುದ್ರಿತ ಅಂತರ್ಮುಖಿಯಾಗಿ ಒಂದು ಮೂಲೆಯಲ್ಲಿ ಕುಳಿತನು. ಅಂತ ರಂಗದ ಮಹಾಶಕ್ತಿಯನ್ನು ಹೊರಸೂಸುತ್ತಿದ್ದ ಆತನ ಸಮುಜ್ಜ್ವಲ ವಿಶಾಲ ನೇತ್ರದೀಪ್ತಿಯನ್ನು ನೋಡಿ ಪರಮಹಂಸರು "ಕಲ್ಕತ್ತೆಯಲ್ಲಿಯೂ ಇಂಥವ ನಿದ್ದಾನೆಯೇ?" ಎಂದು ಬೆರಗಾದರು. ಆತನಿಗೆ ಕೀರ್ತನೆಯೊಂದನ್ನು ಹಾಡು ವಂತೆ ಹೇಳಿದರು. ನರೇಂದ್ರನು ತನ್ನ ಸ್ವರ್ಗೀಯ ವಾಣಿಯಿಂದ ಹಾಡಿದನು.

ಗುರುದೇವನು ಭಾವವಶನಾಗಿ ತಟಕ್ಕನೆ ಮೇಲೆದ್ದು ಆತನ ಕೈಹಿಡಿದು ಉತ್ತರ ದಿಕ್ಕಿನ ವರಾಂಡಕ್ಕೆ ಕರೆದೊಯ್ದು ಬಾಗಿಲು ಹಾಕಿದನು. ಅಲ್ಲಿ ಯಾರೂ ಇರಲಿಲ್ಲ. ಪರಮಹಂಸರು ಆನಂದದಿಂದ ಕಂಬನಿಗರೆಯುವುದನ್ನು ನೋಡಿ ನರೇಂದ್ರನಿಗೆ ಆಶ್ಚರ್ಯವಾಯಿತು. ಬಹುಕಾಲದ ಮಿತ್ರನಂತೆ ಆತನನ್ನು ಸಂಬೋಧಿಸಿ "ಆಹಾ! ಇಷ್ಟು ತಡಮಾಡಿ ಬಂದೆಯಾ? ನಿನಗಾಗಿ ನಾನೆಷ್ಟು ಕಾದೆ! ನಿನಗೆ ಸ್ವಲ್ಪವೂ ಮರುಕವಿಲ್ಲವೇ? ಐಹಿಕ ವಿಷಯಗಳನ್ನು ಕೇಳಿ ಕೇಳಿ ನನಗೆ ಸಾಕಾಗಿದೆ. ನನ್ನ ಅಂತರಂಗದ ಅನುಭವಗಳನ್ನು ನೀಡಲು ಅಧಿಕಾರಿಯೊಬ್ಬನಿಗಾಗಿ ಕಾಯುತ್ತಿದ್ದೇನೆ." ಎಂದು ಬಿಕ್ಕಿ ಬಿಕ್ಕಿ ಅಳುತ್ತಾ ಕೈಮುಗಿದುಕೊಂಡು "ದೇವಾ, ನೀನು ನಾರಾಯಣನ ಅಂಶನಾದ ನರಮಹರ್ಷಿ ಎಂದು ನಾನು ಬಲ್ಲೆ. ಜಗತ್ತಿನ ದುಃಖ ಪರಿಹಾರಕ್ಕಾಗಿ ಅವತಾರಮಾಡಿದ್ದೀಯೆ." ಎಂದು ಮೊದಲಾಗಿ ಹೇಳಿದರು. ನರೇಂದ್ರನು ದಿಗ್ಭ್ರಾಂತನಾದನು. "ಇದೇನು ಇವನು ಹೇಳುವುದು? ವಿಶ್ವನಾಥ ದತ್ತನ ಮಗನಾದ ನನ್ನನ್ನು ನರಮಹರ್ಷಿಯೆಂದು ಕರೆಯುತ್ತಿದ್ದಾನೆ!" ಎಂದು ಸುಮ್ಮನೆ ನಿಂತಿರಲು, ಗುರುದೇವನು ಆತನ ಕೈಹಿಡಿದು ನೀನೊಬ್ಬನೇ ಒಂಟಿಯಾಗಿ ಇಲ್ಲಿಗೆ ಬೇಗಬರುತ್ತೇನೆ ಎಂದು ಮಾತುಕೊಡು ಎಂದು ಕಾತರಕಂಠದಿಂದ ಕೇಳಿದನು. ನರೇಂದ್ರನು ಆಗಲಿ ಎಂದು ಮಾತು ಕೊಟ್ಟ ಮೇಲೆ ಇಬ್ಬರೂ ಹಿಂದಿರುಗಿದರು.

ಪರಮಹಂಸರು ಅಲ್ಲಿ ನೆರೆದಿದ್ದವರೊಡನೆ ಮಾತಾಡತೊಡಗಿದರು. ನರೇಂದ್ರನು ಸ್ತಬ್ಧನಾಗಿ ಕುಳಿತು ಪರೀಕ್ಷಿಸಿದನು. ಆ ದಿನ ಆಚರಣೆಯಲ್ಲಿ ಉನ್ಮಾದದ ಚಿಹ್ನೆ ಲೇಶವೂ ಕಾಣಲಿಲ್ಲ. ಅಲ್ಲದೆ ಆತನ ವಚನಗಳಿಂದ ಆತನು ಜ್ಞಾನ ಭಕ್ತಿ ವೈರಾಗ್ಯಗಳ ಮೂರ್ತಿಯಾಗಿ ತೋರಿದನು. ನರೇಂದ್ರನು "ದೇವರಿದ್ದಾನೆಯೇ? ನೀವು ನೋಡಿದ್ದೀರಾ?" ಎಂದು ಪ್ರಶ್ನೆಮಾಡಲು, ಅವರು "ಹೌದು, ನೋಡಿದ್ದೇನೆ. ಆತನನ್ನು ತ್ರಿಕಾಲದಲ್ಲಿಯೂ ನೋಡುತ್ತಿದ್ದೇನೆ. ಈ ಜಗತ್ತನ್ನೂ ನಿಮ್ಮೆಲ್ಲರನ್ನೂ ನೋಡುತ್ತಿರುವುದಕ್ಕಿಂತಲೂ ಸತ್ಯತರವಾಗಿ ಆತನನ್ನು ನೋಡುತ್ತಿದ್ದೇನೆ. ದೇವರನ್ನು ಎಲ್ಲರೂ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಆದರೆ ಯಾರು ಪ್ರಯತ್ನಮಾಡುತ್ತಾರೆ? ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಕೊಡಗಟ್ಟಲೆ ಕಣ್ಣೀರು ಸುರಿಸುತ್ತಾರೆ. ಈಶ್ವರನಿಗಾಗಿ ಅಳುವವರು

ಯಾರಿದ್ದಾರೆ?'' ಎಂದು ಭಾವಪೂರ್ವಕವಾಗಿ ಹೇಳಿದರು. ಗುರುದೇವನು ಉನ್ಮತ್ತನೋ ಜ್ಞಾನಿಯೋ ಒಂದೂ ಅರ್ಥವಾಗಲಿಲ್ಲ. "ಅರ್ಧ ಉನ್ಮತ್ತ ನಿರಬೇಕು ; ಆದರೂ ಮಹಿಮೆಯಿಲ್ಲದೆ ಇಲ್ಲ. ಹುಚ್ಚನಾಗಿದ್ದರೂ ಚಿಂತೆಯಿಲ್ಲ, ಗೌರವಾರ್ಹವಾದ ವ್ಯಕ್ತಿ.'' ಎಂದುಕೊಂಡು ನಾನಾವಿಧವಾಗಿ ಆಲೋಚಿಸುತ್ತ ಕಲ್ಕತ್ತೆಗೆ ಹಿಂತಿರುಗಿದನು.

ಒಂದು ತಿಂಗಳಾದ ಮೇಲೆ ನರೇಂದ್ರನು ಪುನಃ ದಕ್ಷಿಣೇಶ್ವರಕ್ಕೆ ಹೋದನು. ಪರಮಹಂಸರೊಬ್ಬರೇ ತಮ್ಮ ಮಂಚದ ಮೇಲೆ ಕುಳಿತಿದ್ದರು. ನರೇಂದ್ರ ನನ್ನು ಆದರದಿಂದ ಕರೆದು ತಮ್ಮ ಪಕ್ಕದಲ್ಲಿಯೇ ಕುಳಿತುಕೊಳ್ಳುವಂತೆ ಮಾಡಿದರು. ಉತ್ತರಕ್ಷಣದಲ್ಲಿಯೇ ಭಾವಾವಿಷ್ಟರಾಗಿ ಆತನನ್ನು ಎವೆಯಿಕ್ಕದೆ ನೋಡುತ್ತ ಮೆಲ್ಲನೆ ಒಳಿಸಾರಿ ತಮ್ಮ ದಕ್ಷಿಣ ಪಾದವನ್ನು ಆತನ ಮೈಮೇಲಿಟ್ಟರು. ಅದ್ಭುತ ಅನುಭವದಿಂದ ನರೇಂದ್ರನು ತತ್ತರಿಸಿದನು. "ಕೊಟಡಿಯಲ್ಲಿದ್ದ ವಸ್ತುಗಳು, ಬಾಗಿಲು, ಗೋಡೆ, ಸಮಸ್ತ ಭುವನ, ನನ್ನ ಅಹಂಕಾರ ಎಲ್ಲವೂ ನಡನಡುಗಿ ಕನಸಿ ನಂತೆ ತೆಳ್ಳಗಾಗಿ ಶೂನ್ಯದಲ್ಲಿ ಲೀನವಾದಂತೆ ತೋರಿದುವು. ನಾನು ಸಾಯುತ್ತೇ ನೆಂದು ಭಾವಿಸಿದೆ. 'ಅಯ್ಯೋ, ನೀವೇನುಮಾಡುತ್ತಿದ್ದೀರಿ? ನನಗೆ ತಾಯಿತಂದೆ ಗಳಿದ್ದಾರೆ!' ಎಂದು ಕೂಗಿಕೊಂಡೆ. ಆಗ ಆತನು ಗಹಗಹಿಸಿ ನಕ್ಕು ನನ್ನೆದೆಯ ಮೇಲೆ ಕೈಯಾಡಿಸಿ 'ಸದ್ಯಕ್ಕಿರಲಿ! ಕಾಲ ಬರಲು ಎಲ್ಲ ಬರುತ್ತದೆ!' ಎಂದು ಸುಮ್ಮನಾದನು. ಒಡನೆಯೆ ಆ ಅದ್ಭುತ ಭಯಂಕರ ದರ್ಶನವು ಮಾಯವಾಗಿ ಎಲ್ಲವೂ ಮೊದಲಿದ್ದಂತೆಯೆ ಸ್ಥಿರಶಾಂತವಾಯಿತು. ನಾನು ನಾನಾದೆನು.''

ತರುವಾಯ ಪರಮಹಂಸರು ಎಂದಿನಂತೆಯೆ ಮಾತುಕತೆಗಳನ್ನಾಡಿ ನರೇಂದ್ರನನ್ನು ಕಳುಹಿಸಿದರು. ನಾನು ಕನಸಿನಲ್ಲಿ ಕಂಡ ನರಮಹರ್ಷಿ ಈತನೇ ನಿಜವೇ? ನಿಜವಾಗಿದ್ದರೆ ಸಮಾಧಿಯ ಅನುಭವಕ್ಕೆ ಬೆದರಿದನೇಕೆ? ಎಂಬ ಸಂದೇಹವು ಅವರಿಗೆ ತಲೆದೋರಿತು. ಇನ್ನೊಂದು ಸಾರಿ ನರೇಂದ್ರನು ಬಂದಾಗ ಅದನ್ನು ಪರಿಹಾರಮಾಡಿಕೊಂಡರು.

ಇದಾದ ಒಂದು ವಾರದ ಅನಂತರ ನರೇಂದ್ರನು ಮೂರನೆಯ ಸಾರಿ ಅವರಲ್ಲಿಗೆ ಹೋದನು. ಪರಮಹಂಸರು ಆತನನ್ನು ಮುಟ್ಟಿ ಬಾಹ್ಯಪ್ರಜ್ಞಾ ಶೂನ್ಯನನ್ನಾಗಿಮಾಡಿ, ಅನೇಕ ಪ್ರಶ್ನೆಗಳನ್ನು ಕೇಳಿ ಸಂಶಯ ಪರಿಹಾರಮಾಡಿ

ಕೊಂಡರು. ಎಲ್ಲವನ್ನೂ ನಿರ್ಧಾರಮಾಡಿಕೊಂಡ ಮೇಲೆ ದೇವಶಿಲ್ಪಿ ತನ್ನ ಮಹಾ ಉತ್ಸವ ಮೂರ್ತಿಯನ್ನು ಸಾವಧಾನವಾಗಿ ಕೆತ್ತತೊಡಗಿದನು.

ಇಷ್ಟಾದರೂ ನರೇಂದ್ರನು ಬೇರೆ ಶರಣು ಹೋಗಲಿಲ್ಲ. ಪಾಶ್ಚಾತ್ಯ ವಿಜ್ಞಾನ, ತತ್ತ್ವ, ಮನಃಶಾಸ್ತ್ರಗಳನ್ನು ಅಧ್ಯಯನಮಾಡಿ, ಜನ್ಮತಃ ಸೂಕ್ಷ್ಮಧೀಮತಿಯೂ ವಜ್ರಚಿತ್ತಾನ್ವಿತನೂ ಆಗಿದ್ದ ಆತನು ವಿಚಾರದ ಒರೆಗಲ್ಲಿಗೆ ಹಚ್ಚಿ ನೋಡಿದಲ್ಲದೆ ಅಂಧಶ್ರದ್ಧೆಯಿಂದಾಗಲಿ ಭಾವಾವೇಗದಿಂದಾಗಲಿ ಯಾವುದನ್ನೂ ಸತ್ಯವೆಂದು ಸ್ವೀಕರಿಸುವವನಾಗಿರಲಿಲ್ಲ. ತನ್ನಂತಹ ದೃಢಚಿತ್ತನಿಗೆ ಇಚ್ಛಾಮಾತ್ರದಿಂದ ಅದ್ಭುತ ಅನುಭವಗಳಾಗುವಂತೆ ಮಾಡಬಲ್ಲ ಮನುಷ್ಯನು ಅಸಾಧಾರಣ ನೆಂದೇನೋ ಭಾವಿಸಿದನು. ಆದರೆ ಆತನನ್ನು ಗುರುವೆಂದು ಒಪ್ಪಲಿಲ್ಲ. ಯಾರ ಶಿಷ್ಯನಾಗಲೂ ಆತನ ಶ್ರೀಮಂತ ಪೌರುಷಕ್ಕೆ ಮನಸ್ಸಿರಲಿಲ್ಲ. ಆದರೂ ನರೇಂದ್ರನು ದಕ್ಷಿಣೇಶ್ವರಕ್ಕೆ ಪದೇ ಪದೇ ಹೋಗುತ್ತಿದ್ದನು.

ಆ ಗುರುಶಿಷ್ಯರ ವಿಚಿತ್ರ ಸಂಬಂಧವು ವಿಸ್ಮಯಮಯವಾಗಿದೆ. ಶ್ರೀರಾಮ ಕೃಷ್ಣರು ಅಡಿಗಡಿಗೆ ಭಾವವಶರಾಗುವರು; ಅಡಿಗಡಿಗೆ ಸಮಾಧಿಮಗ್ನರಾಗು ವರು; ಅಡಿಗಡಿಗೆ ಭಕ್ತಿಯ ಉತ್ಕರ್ಷದಿಂದ ಕಂಬನಿಗರೆವರು. ನರೇಂದ್ರನಿ ಗಾದರೊ ಭಕ್ತಿಭಾವಾಶ್ರುಗಳೆಂದರೆ ಆಗದು. ಅವುಗಳೆಲ್ಲ ಆತನ ಭಾಗಕ್ಕ ದುರ್ಬಲತೆಯ ಚಿಹ್ನೆಗಳಾಗಿದ್ದುವು. ಬುದ್ಧಿಯನ್ನು ಶ್ರದ್ಧೆಗೆ ಶರಣಾಗಗೊಡು ತ್ತಿರಲಿಲ್ಲ; ಶ್ರುತಿಯಿಂದ ಮತಿಯನ್ನು ಆಳಗೊಡುತ್ತಿರಲಿಲ್ಲ. ಗುರುದೇವನಾದರೂ ಶಿಷ್ಯನ ಚಿತ್ತವೃತ್ತಿಯನ್ನು ಕಂಡು ಬಂದಿಸಿತೂ ಅಪ್ರತಿಭನಾಗದೆ, ಅದಕ್ಕಾಗಿಯೆ ಆತನನ್ನು ಪ್ರಶಂಸಿಸಿ ಹೆಚ್ಚಾಗಿ ಆದರಿಸುತ್ತಿದ್ದನು.

ನರೇಂದ್ರನು ತಮ್ಮೆಡೆಗೆ ಬರುವ ಮೊದಲು ಶ್ರೀರಾಮಕೃಷ್ಣರು ಜಗನ್ಮಾತೆ ಯನ್ನು ಕುರಿತು "ತಾಯಿ, ನನ್ನ ಅನುಭವಗಳನ್ನು ಪರೀಕ್ಷಿಸುವ ಶಿಷ್ಯನೊಬ್ಬ ನನ್ನು ದಯಪಾಲಿಸು." ಎಂದು ಪ್ರಾರ್ಥಿಸುತ್ತಿದ್ದರು.

ಪ್ರಾರ್ಥನೆಗೆ ಉತ್ತರವಾಗಿ ಜಗನ್ಮಾತೆ ನರೇಂದ್ರನನ್ನು ಕಳುಹಿದಳು. ಆತನು ದೇವದೇವತೆಗಳನ್ನು ತಿರಸ್ಕರಿಸುತ್ತಿದ್ದನಲ್ಲದೆ, ಬ್ರಾಹ್ಮಸಮಾಜದ ಸಿದ್ಧಾಂತ ದಂತೆ ಅದ್ವೈತವನ್ನು ಶೂನ್ಯವಾದವೆಂದು ಪರಿಹಾಸಮಾಡುತ್ತಿದ್ದನು. ಹಿಂದೂ ಶಾಸ್ತ್ರಗಳನ್ನಂತೂ ಬಾಯಿಗೆ ಬಂದಂತೆ ಬಹಿರಂಗವಾಗಿ ಅಲ್ಲಗಳೆಯುತ್ತಿದ್ದನು.

ಪರಮಹಂಸರನ್ನು ಕುರಿತು "ಲೋಕದ ಜನರೆಲ್ಲ ನಿಮ್ಮನ್ನು ಈಶ್ವರನ ಅವತಾರ ವೆಂದು ಪೂಜೆಮಾಡಿದರೂ ಮಾಡಲಿ; ನಾನು ಬೇರೆ ವಿಚಾರಮಾಡಿ ನಿರ್ಣಯಿಸಿ ದಲ್ಲದೆ ಅದನ್ನು ಒಪ್ಪುವುದಿಲ್ಲ." ಎಂದು ಹೇಳುತ್ತಿದ್ದನು.

ಗುರು ಮುಗುಳುನಗೆ ಬೀರಿ ಶಿಷ್ಯರನ್ನು ಕುರಿತು "ನಾನು ಹೇಳಿದೆ ಎಂದು ನೀವು ಏನನ್ನೂ ನಂಬಬೇಡಿ. ಚೆನ್ನಾಗಿ ಪರೀಕ್ಷಿಸಿ; ತರುವಾಯ ನಂಬಿ." ಎಂದು ಬುದ್ಧಿ ಹೇಳುವನು.

ಒಂದೊಂದು ಸಲ ನರೇಂದ್ರನ ಬುದ್ಧಿಶಕ್ತಿಯನ್ನು ನೋಡಿ ಹಿಗ್ಗಿ, ಗುರು ಅಲ್ಲಿ ನೆರೆದವರಿಗೆ "ನೋಡಿ, ನೋಡಿ, ಎಂತಹ ಜ್ಞಾನಜ್ಯೋತಿ ಆತನಲ್ಲಿದೆ! ಅವನೊಂದು ಮಹಾಪ್ರಲಯಾಗ್ನಿರಾಶಿ. ಮಹಾಮಾಯೆ ಕೂಡ ಅವನ ಬಳಿ ಸುಳಿಯಲು ಅಂಜುತ್ತಾಳೆ. ತಾನು ಹೊತ್ತಿಸಿದ ಬೆಂಕಿಗೆ ತಾನೇ ಅಂಜುತ್ತಾಳೆ!" ಎಂದು ಹೇಳಿದನು.

ಒಂದೊಂದು ಸಾರಿ ನರೇಂದ್ರನ ಕ್ರೂರ ವಿಮರ್ಶೆ ಪರಮಹಂಸರಿಗೆ ಶೂಲದಿರಿತವಾಗುತ್ತಿತ್ತು. ಅವನು ನಿರ್ದಾಕ್ಷಿಣ್ಯವಾಗಿ "ಅಲೌಕಿಕ ಅನುಭವ ಗಳೆಲ್ಲ ಚಿತ್ತವಿಭ್ರಾಂತಿಯಿಂದ ಮೂಡಿಲ್ಲವೆಂಬುದು ನಿಮಗೆ ಹೇಗೆ ಗೊತ್ತು?" ಎಂದು ಕೇಳಿಬಿಡುತ್ತಿದ್ದನು. ಆಗ ಅವರು ಜಗನ್ಮಾತೆಯ ಬಳಿಗೆ ಹೋಗುವರು. ಆಕೆ "ತಾಳ್ಮೆ! ನರೇಂದ್ರನ ಕಣ್ಣು ತೆರೆಯಲು ಇನ್ನು ಹೆಚ್ಚು ಕಾಲ ಹಿಡಿಯುವು ದಿಲ್ಲ." ಎಂದು ಸಮಾಧಾನ ಹೇಳುವಳು.

ಕೆಲವು ಸಾರಿ ಶಿಷ್ಯನ ವಾದಶೀಲತೆಯನ್ನು ಕಂಡು ಗುರುವರ್ಯನು "ಹೇ ಜಗನ್ಮಾತೆ, ನರೇಂದ್ರನ ಮೇಲೆ ಸ್ವಲ್ಪ ನಿನ್ನ ಮಾಯೆಯನ್ನು ಬೀಸು. ಅವನ ಉಗ್ರಬುದ್ಧಿಯ ಬೆಂಕಿ ಕಡಮೆಯಾಗಿ ಹೃದಯಕ್ಕೆ ಈಶ್ವರಾನುಭವ ವಾಗಲಿ." ಎಂದು ಬೇಡಿದರು.

ಆದರೆ ನರೇಂದ್ರನು "ನನಗೆ ನಿಮ್ಮ ಈಶ್ವರನು ಬೇಡ. ನನಗೆ ಬೇಕಾದುದು ಶಾಂತಿ—ಕೇವಲ ಸಚ್ಚಿದಾನಂದ." ಎಂದು ಕೂಗುವನು.

ಈಶ್ವರನನ್ನು ತರ್ಕಬುದ್ಧಿಯಿಂದಲೇ ಸಾಧಿಸಲು ಅಸಾಧ್ಯ ಎಂಬುದು ಅವನಿಗೆ ಗೊತ್ತಾಗಿರಲಿಲ್ಲ. ಈಶ್ವರನಿರುವುದು ಸತ್ಯವಾದರೆ ಅವನನ್ನು ಕಾಣಲೇ ಬೇಕು ಎಂಬುದು ಅವನ ವಾದವಾಗಿತ್ತು. ಪರಮಹಂಸರು ತನಗಿಂತಲೂ

ಮಹತ್ತರವಾದ ಧೀಶಕ್ತಿಯುಳ್ಳ ಜ್ಞಾನಿ ಎಂಬುದೂ ಅವರ ಭಕ್ತಿಪ್ರದರ್ಶನದ ಹಿಂದೆ ಮಹಾತತ್ತ್ವವೇತ್ತನ ಮೇಧಾಶಕ್ತಿ ನಿರಂತರವೂ ಪ್ರೋಜ್ಜ್ವಲವಾಗಿರುತ್ತದೆ ಎಂಬುದೂ ಆತನಿಗೆ ಕ್ರಮೇಣ ತಿಳಿದುಬಂದಿತು. ತರುವಾಯ ಆತನು ಶ್ರೀರಾಮ ಕೃಷ್ಣರನ್ನು ಕುರಿತು ಹೀಗೆ ಹೇಳಿದ್ದಾನೆ—

"ಬಾಹ್ಯದಲ್ಲಿ ಅವರು ಸಂಪೂರ್ಣಭಕ್ತರಂತೆ ಕಾಣುತ್ತಿದ್ದರೂ ಅಂತ ರಂಗದಲ್ಲಿ ಕೇವಲ ಜ್ಞಾನಿಗಳಾಗಿದ್ದರು. ನಾನು ಹೊರಗಡೆ ಜ್ಞಾನಿಯಂತೆ ತೋರಿದರೂ ಒಳಗಿರುವುದೆಲ್ಲ ಸಂಪೂರ್ಣಭಕ್ತಿ."

ನರೇಂದ್ರನು ಅದ್ವೈತಜ್ಞಾನಕ್ಕೆ ಅರ್ಹನಾದ ಅಧಿಕಾರಿಯೆಂದು ತಿಳಿದು ಅವನಿಗೆ ಅದನ್ನು ಹೇಳಲು ಪರಮಹಂಸರು ಹವಣಿಸಿದರೆ ಆತನು ಅದನ್ನು ಶೂನ್ಯವಾದವೆಂದೂ ಬರಿಯ ಶಿಶುಪ್ರಲಾಪವೆಂದೂ ಹಾಸ್ಯಮಾಡಿ ತಿರಸ್ಕರಿಸು ತ್ತಿದ್ದನು. ಒಂದು ಸಾರಿ ಸ್ನೇಹಿತನೊಬ್ಬನೊಡನೆ ಅದ್ವೈತವೇದಾಂತವನ್ನು ಹಳಿಯುತ್ತ "ಈ ಹೂಜಿಯೂ ಬ್ರಹ್ಮ, ಈ ನೊಣಗಳೂ ಬ್ರಹ್ಮ, ಈ ಸಿಗರೇಟೂ ಬ್ರಹ್ಮ, ಹೊಗೆಯೂ ಬ್ರಹ್ಮ, ನಾನೂ ಬ್ರಹ್ಮ, ನೀನೂ ಬ್ರಹ್ಮ!" ಎಂದು ಹೇಳಿ ಗಹಗಹಿಸಿ ನಗುತ್ತಿದ್ದಾಗ, ಗುರುದೇವನು ಅಲ್ಲಿಗೆ ಬಂದು ಆತನನ್ನು ಮುಟ್ಟಿದನು. ಆ ಕ್ಷಣವೇ ಬ್ರಹ್ಮವಲ್ಲದ ವಸ್ತುವೊಂದೂ ಇಲ್ಲವೆಂಬ ಅನುಭವವು ಆತನಿಗಾಗಿ ಮೂರು ದಿನಗಳ ತನಕ ಉನ್ಮಾದಗ್ರಸ್ತನಾದವನಂತಿದ್ದನು. ಅಂದು ಮೊದಲಾಗಿ ಅವನು ಅದ್ವೈತವನ್ನು ಮೊದಲಿನಂತೆ ಹಳಿಯುತ್ತಿರಲಿಲ್ಲ.

ಕ್ರಿ. ಶ. ೧೮೮೪ ರಲ್ಲಿ ನರೇಂದ್ರನ ತಂದೆ ಸಾಯಲು ಸಂಸಾರವು ಹಠಾ ತ್ತಾಗಿ ದಾರಿದ್ರ್ಯದ ಪೀಡೆಗೆ ಸಿಕ್ಕಿತು. ನರೇಂದ್ರನು ಒಂದೊದಗಿದ ಕಠೋರ ದುಃಖಗಳಿಂದ ಎದೆನೊಂದು ದೇವರ ಮೇಲೆ ದಂಗೆಯೆದ್ದನು. "ಈಶ್ವರನು ಕರುಣಾಶಾಲಿಯಾಗಿದ್ದರೆ ಜಗತ್ತಿನಲ್ಲಿ ಇಷ್ಟೊಂದು ದುಃಖವೇಕೆ? ಹೊಟ್ಟೆಗಿಲ್ಲದೆ ಲಕ್ಷಾಂತರ ಜನರು ಸಾಯುವುದೇಕೆ? ರೋಗರುಜನಗಳೇಕೆ?" ಎಂದು ಮೊದ ಲಾಗಿ ವಾದಿಸುತ್ತ, ತಾನು ನಾಸ್ತಿಕನೆಂದು ಬಹಿರಂಗವಾಗಿ ಸಾರಿದನು. ಮಿತ್ರರೂ ಬಂಧುಗಳೂ ಆತನನ್ನು ತ್ಯಜಿಸಿದರು. ಆದರೆ ಗುರುದೇವನು ಕೈಬಿಡಲಿಲ್ಲ. ಚುಚ್ಚಿದ ಬಾಣಸಮೇತನಾಗಿ ತಮ್ಮೆಡೆಗೆ ಬಂದ ಶಿಷ್ಯನಿಗೆ ಐಶ್ವರ್ಯಪ್ರಾಪ್ತಿ ಗಾಗಿ ಜಗನ್ಮಾತೆಯನ್ನು ಬೇಡುವಂತೆ ಬಿಸಸಿದರು. ನರೇಂದ್ರನು ಕಾಳಿಯ

ಗುಡಿಗೆ ಹೋಗಿ ಮೂರು ಸಲವೂ ಭಕ್ತಿ ಜ್ಞಾನ ವೈರಾಗ್ಯಗಳನ್ನು ಭಿಕ್ಷೆ ಬೇಡಿದನೇ ಹೊರತು ಧನವನ್ನು ದಯಪಾಲಿಸೆಂದು ಕೇಳಲು ಸಮರ್ಥನಾಗಲಿಲ್ಲ. ಕಡೆಗೆ 'ದೇವಿಯ ಕೃಪೆಯಿಂದ ಎಲ್ಲವೂ ಸರಿಹೋಗುವುದೆಂದು ಗುರುದೇವನೇ ಭರವಸೆಯಿತ್ತು ಕಳುಹಿದನು. ದುಃಖದ ಆಘಾತದಿಂದ ನರೇಂದ್ರನ ಜ್ಞಾನಗರ್ವವು ನನು ಕುಗ್ಗಿತು. ಹೃದಯದಲ್ಲಿ ಭಕ್ತಿಸಂಚಾರವಾಯಿತು. ಮೆಲ್ಲಮೆಲ್ಲನೆ ಶ್ರೀರಾಮ ಕೃಷ್ಣ ಪರಮಹಂಸರನ್ನು ಗುರುದೇವನೆಂದು ಭಾವಿಸತೊಡಗಿದನು. ಆ ಕಥೆಯ ವಿವರವನ್ನು ವಾಚಕರು ಬೇರೊಂದೆಡೆ ಕಾಣುವರು. ಸದ್ಯಕ್ಕೆ ಇತರ ಶಿಷ್ಯರ ಆಗಮನವನ್ನು ಕುರಿತು ಪ್ರಸ್ತಾಪಿಸುತ್ತೇವೆ.

ಕ್ರಿ. ಶ. ೧೮೮೨ರಲ್ಲಿ ಶ್ರೀರಾಮಕೃಷ್ಣರೆಡೆಗೆ ಇನ್ನಿಬ್ಬರು ಶಿಷ್ಯರು ಬಂದರು—ತಾರಕನಾಥ ಘೋಷಾಲ ಮತ್ತು ಯೋಗೇಂದ್ರನಾಥ ಚೌಧುರಿ.

ಶ್ರೀಮಂತ ವಕೀಲನ ಪುತ್ರನಾದ ತಾರಕನು ಕಲ್ಕತ್ತೆಯಲ್ಲಿ ವಿದ್ಯಾರ್ಜನೆ ಮಾಡಿದನು. ಬಾಲ್ಯದಿಂದಲೂ ಅಧ್ಯಾತ್ಮಜೀವನಪ್ರೇಮಿಯಾಗಿದ್ದ ಆತನಿಗೆ ಈಶ್ವರಸಾಕ್ಷಾತ್ಕಾರಮಾಡಬೇಕೆಂದು ಮನಸ್ಸಿನಲ್ಲಿ ವ್ಯಾಕುಲತೆ ಜನಿಸಿತು. ಆಗಿನ ಶಿಕ್ಷಿತ ತರುಣರ ಪದ್ಧತಿಯಂತೆ ಆತನೂ ಕೇಶವಚಂದ್ರಸೇನನ ಬ್ರಾಹ್ಮ ಸಮಾಜಕ್ಕೆ ಸದಸ್ಯನಾದನು. ಆದರೆ ಬ್ರಾಹ್ಮಸಮಾಜದ ತತ್ತ್ವಗಳು ಅವನಿಗೆ ಸಮರ್ಪಕವಾಗಿ ತೋರಲಿಲ್ಲ. ಶಾಂತಿಗಾಗಿ ಎದೆ ಹಾತೊರೆಯುತ್ತಿತ್ತು. ಇಂತಿರಲು ಒಂದುದಿನ ರಾಮಚಂದ್ರದತ್ತನ ಮನೆಯಲ್ಲಿ ಶ್ರೀರಾಮಕೃಷ್ಣರನ್ನು ಕಂಡನು. ಅವರ ಸಮಾಧಿಯನ್ನು ನೋಡಿ, ವಚನಾಮೃತವನ್ನು ಸವಿದು ಆಕರ್ಷಿತ ನಾದನು. ಮರುದಿನ ಸಾಯಂಕಾಲ ದಕ್ಷಿಣೇಶ್ವರಕ್ಕೆ ಹೋಗಿ ಗುರುದೇವನನ್ನು ಕಂಡನು. ಪರಮಹಂಸರು ಆತನನ್ನು ಕುರಿತು "ನಿನಗೆ ಸಾಕಾರ ಈಶ್ವರನು ಇಷ್ಟವೋ? ನಿರಾಕಾರ ಈಶ್ವರನು ಇಷ್ಟವೋ?" ಎಂದು ಕೇಳಿದರು. "ನಿರಾಕಾರ ಈಶ್ವರನು!" ಎಂದನು ತಾರಕನು. "ಆದರೂ ಈಶ್ವರನ ಮಾಯಾ ಶಕ್ತಿಯನ್ನು ಒಪ್ಪಲೇ ಬೇಕಷ್ಟೆ?" ಎಂದು ಹೇಳಿ, ಆತನನ್ನು ಕಾಳಿಯ ಗುಡಿಗೆ ಕರೆದೊಯ್ದು, ಮೊದಲು ತಾವೇ ದೇವಿಯ ಮುಂದೆ ಸಾಷ್ಟಾಂಗಪ್ರಣಾಮ ಮಾಡಿದರು. ತಾರಕನಿಗೆ ರಗಳೆಗಿಟ್ಟುಕೊಂಡಿತು. ಬ್ರಾಹ್ಮಸಮಾಜಕ್ಕೆ ಸೇರಿದ್ದ ಆತನು ಮೂರ್ತಿಯ ಮುಂದೆ ತಲೆಬಾಗುವುದಿಲ್ಲವೆಂದು ಮಾತುಕೊಟ್ಟಿದ್ದನು,

ಪಣತೊಟ್ಟಿದ್ದನು. ಕಲ್ಲಿನ ಮುಂದೆ ತಲೆಬಾಗುವುದು ಹೇಗೆ? ಉತ್ತರಕ್ಷಣದಲ್ಲಿಯೇ ಹೀಗೆ ಆಲೋಚಿಸಿದನು: "ಸಂಕುಚಿತ ಭಾವವೇಕಿರಬೇಕು? ಈಶ್ವರನು ಸರ್ವವ್ಯಾಪಿಯಂತೆ! ಹಾಗಾದರ ಕಲ್ಲಿನಲ್ಲೇಕೆ ಇರಬಾರದು?" ತಾರಕನೂ ವಿಗ್ರಹದ ಮುಂದೆ ಅಡ್ಡಬದ್ದನು. ಹೃದಯದಲ್ಲಿ ಆನಂದಸಂಚಾರವೂ ಆಯಿತು. ಅಂದಿನಿಂದ ಆತನು ಪರಮಹಂಸರಲ್ಲಿಗೆ ಬಂದುಹೋಗಲು ತೊಡಗಿದನು. ಪಂಚವಟಿಯಲ್ಲಿ ಗುರುದೇವನ ನೇತೃತ್ವದಲ್ಲಿ ಧ್ಯಾನ ಮೊದಲಾದ ಸಾಧನೆಗಳಲ್ಲಿ ನಿರತನಾಗಿ ಜಯಶೀಲನಾದನು. ಕಡೆಗೆ ಆತನು ಸ್ವಾಮಿ ಶಿವಾನಂದರಾದರು. ಈಗ ಶ್ರೀರಾಮಕೃಷ್ಣ ಸಂಘಕ್ಕೆ ಅವರು ಮಹಾಧ್ಯಕ್ಷರಾಗಿದ್ದಾರೆ.[1]

ತರುಣ ಯೋಗೇಂದ್ರನಾಥನು ಒಂದು ದಿನ ವಿಹಾರಾರ್ಥವಾಗಿ ದಕ್ಷಿಣೇಶ್ವರಕ್ಕೆ ಬಂದಾಗ ಶ್ರೀರಾಮಕೃಷ್ಣರನ್ನು ಸಂಧಿಸಿದನು. ಸಂಪ್ರದಾಯದ ಬ್ರಾಹ್ಮಣಕುಲದಲ್ಲಿ ಜನಿಸಿದವನಾದರೂ ನವೀನ ವಿದ್ಯಾರ್ಜನೆಮಾಡಿದ ಆತನ ವಿಶಾಲಬುದ್ಧಿಗೆ ಪರಮಹಂಸರು ಅಸಾಧಾರಣ ವ್ಯಕ್ತಿ ಎಂಬುದು ಗೊತ್ತಾಗಿ ಅವರ ಭಕ್ತನಾದನು. ಬ್ರಹ್ಮಚರ್ಯವ್ರತದಿಂದ ಸತ್ಯಸಾಧನೆಮಾಡಬೇಕೆಂದಿದ್ದ ಆತನ ನಿಶ್ಚಿತವನ್ನು ಕೇಳಿ ಶ್ರೀರಾಮಕೃಷ್ಣರು ಅತ್ಯಂತ ಹರ್ಷಚಿತ್ತರಾದರು. ಆದರೆ ಯೋಗೇಂದ್ರನ ತಂದೆ ಮಗನಿಗೆ ತಿಳಿಯದಂತೆ ಮದುವೆಗೆ ಏರ್ಪಾಡು ಮಾಡಿದನು. ವಿವಾಹದ ದಿನವು ಬರಲು ಗುಟ್ಟು ಬಯಲಾಯ್ತು. ಯೋಗೇಂದ್ರನು ಕಂಗೆಟ್ಟನು. ಪಿತನನ್ನು ಪ್ರತಿಭಟಿಸಿ ಮದುವೆಯಾಗುವುದಿಲ್ಲವೆಂದು ಹೇಳಿಬಿಟ್ಟನು. ಆದರೆ ಪಿತನು ಹೆಣ್ಣಿನವರಿಗೆ ಮಾತುಕೊಟ್ಟದ್ದರಿಂದ ತನಗೆ ಅವಮಾನವಾಗುವುದೆಂದು ಬಲಾತ್ಕಾರಮಾಡಿದನು. ಆದರೆ ಮಗನು ಜಗ್ಗಲಿಲ್ಲ. ಕಡೆಗೆ ತಾಯಿ ಗೋಳಾಡುತ್ತ ಬಂದು "ನಿನಗೆ ಬೇಡದಿದ್ದರೆ ಚಿಂತೆಯಿಲ್ಲ, ನನಗಾಗಿ ಮದುವೆಯಾಗು!" ಎಂದು ಮಗನ ಕೈಕಾಲು ಕಟ್ಟಿಕೊಂಡಳು. ತಾಯ ಗೋಳು ಮಗನ ದೃಢನಿಶ್ಚಯವನ್ನು ಅಲ್ಲಾಡಿಸಿಬಿಟ್ಟಿತು. ವಿಧಿ ಮಾಡಿದಂತಾಗಲಿ ಎಂದು ಯೋಗೇಂದ್ರನು ಮದುವೆಗೆ ಸಮ್ಮತಿಸಿದನು.

ವಿವಾಹವಾದ ಮೇಲೆ ಅವನು ಅತ್ಯಂತ ವ್ಯಾಕುಲಚಿತ್ತನಾದನು. ಪರಮ

---

[1] ಕ್ರಿ. ಶ. ೧೯೩೪ ನೆಯ ಫೆಬ್ರವರಿ ತಿಂಗಳು ೨೦ ನೆಯ ತೇದಿಯ ದಿನ ಸ್ವಾಮಿ ಶಿವಾನಂದರು ಇಹಯಾತ್ರೆಯಿಂದ ಮುಕ್ತರಾದರು.

ಹಂಸರ ಬಳಿಗೆ ಹೋಗಲು ನಾಚಿದನು. ಗುರುದೇವನು ಯೋಗೇಂದ್ರನ ಮದುವೆಯ ವಿಚಾರವನ್ನು ಕೇಳಿ, ಅವನಿಗೆ ಬರುವಂತೆ ಹೇಳಿಕಳುಹಿಸಿದನು. ಆದರೂ ಯೋಗೇಂದ್ರನು ಹಿಂಜರಿದನು. ಅವರ ಜುಗುಪ್ಸೆಗೆ ಭಾಜನನಾಗುವೆನೆಂದು ವಿಷಾದಿಸಿದನು. ಕಟ್ಟಕಡೆಗೆ ದಕ್ಷಿಣೇಶ್ವರಕ್ಕೆ ಅಪರಾಧಿಯಂತೆ ಹೋದನು. ಪರಮಹಂಸರಿತ್ತ ಸ್ವಾಗತವು ಎಂದಿಗಿಂತಲೂ ಉತ್ತೇಜನಕರವಾಗಿತ್ತು! ತಮ್ಮ ಪೀಠದಿಂದ ಎದ್ದು ಓಡಿಬಂದು ಶಿಷ್ಯನ ಕೈಹಿಡಿದು ಸಾಂತ್ವನ ವಾಣಿಯಿಂದ "ಮದುವೆಯಾದರೇನಂತೆ? ನಾನು ಮದುವೆಯಾಗಿಲ್ಲವೇ? ಅದಕ್ಕೇಕೆ ಭಯ ಪಡಬೇಕು? ಹೃದಯ ಶುದ್ಧಿಯಿದ್ದರೆ ನೂರು ಮದುವೆಗಳಿಂದಲೂ ಏನೂ ಆಗದು! ನಿನಗೆ ಸಂಸಾರದಲ್ಲಿರುವ ಇಚ್ಛೆಯಿದ್ದರೆ ನಿನ್ನ ಪತ್ನಿಯನ್ನು ಇಲ್ಲಿಗೆ ಕರೆದು ತಾ. ಧರ್ಮಜೀವನದಲ್ಲಿ ನಿನಗೆ ಸರ್ವದಾ ಸಹಕಾರಿಯಾಗುವಂತೆ ಆಕೆಯ ಮನಸ್ಸನ್ನು ತಿರುಗಿಸುತ್ತೇನೆ. ಸಂಸಾರಿಯಾಗಿರಲು ಇಷ್ಟವಿಲ್ಲದಿದ್ದರೆ ಹೇಳಿಬಿಡು! ನಿನ್ನ ಸಂಗಸಮುದಾಯವನ್ನೆಲ್ಲ ನುಂಗಿಬಿಡುತ್ತೇನೆ!' ಕಡೆಯ ಮಾತುಗಳನ್ನು ಹೇಳುತ್ತಿದ್ದಾಗ ಪರಮಹಂಸರ ಭಾವವು ಭೀಷಣವಾಗಿತ್ತು. ಅವರ ಮುಖಮಂಡಲವು ಪ್ರಲಯಾಗ್ನಿಯನ್ನೇ ಕಾರುತ್ತಿದ್ದಂತೆ ತೋರುತ್ತಿತ್ತು. ಯೋಗೇಂದ್ರನು ಮೊದಲು ಬೆಚ್ಚಿಬಿದ್ದನು. ಕಡೆಗೆ ಆಶಾರಶ್ಮಿಯನ್ನು ಕಂಡವನಂತೆ ಸುಯ್ದನು. ಸಂಸಾರಿಯಾಗಿದ್ದ ಮಹೇಂದ್ರನಾಥ ಗುಪ್ತನಿಗೆ "ಸಂಸಾರದಲ್ಲಿಯೇ ಇರು" ಎಂದು ಪರಮಹಂಸರು ಆಜ್ಞೆಮಾಡಿದ್ದನ್ನು ವಾಚಕರು ಈ ಸಂದರ್ಭದಲ್ಲಿ ಹೋಲಿಸಿ ನೋಡಲಿ!

ಯೋಗೇಂದ್ರನ ಔದಾಸೀನ್ಯವನ್ನು ಕಂಡು ಆತನ ತಾಯಿತಂದೆಗಳು ಗೊಣಗತೊಡಗಿದರು. ಒಂದು ದಿನ ಅವನ ತಾಯಿ "ನೀನು ಹಣ ಸಂಪಾದನೆ ಮಾಡದಿದ್ದರೆ ಮದುವೆಯನ್ನೇಕೆ ಮಾಡಿಕೊಂಡೆ?" ಎಂದು ನಿಷ್ಠುರವಾಗಿ ನುಡಿದಳು.

ಯೋಗೇಂದ್ರನು "ನಾನು ನಿನಗೆ ಮೊದಲೇ ಹೇಳಲಿಲ್ಲವೇ: ನನಗೆ ವಿವಾಹವಾಗಲು ಇಷ್ಟವಿಲ್ಲ ಎಂದು. ನಿನ್ನ ಕಣ್ಣೀರಿಗೆ ನಾನು ಕರಗಬೇಕಾಯಿತು." ಎಂದನು.

ತಾಯಿ ರೇಗಿಬಿದ್ದು "ಏನೆಂದೆ? ನಿಜವಾಗಿಯೂ ಇಷ್ಟವಿಲ್ಲದಿದ್ದರೆ ನೀನು ಮದುವೆಮಾಡಿಕೊಳ್ಳುತ್ತಿದ್ದೆಯೇನು? ಎಲ್ಲ ಬೂಟಾಟಿಕೆ!" ಎಂದಳು.

ಯೋಗೇಂದ್ರನು ತನ್ನಲ್ಲಿಯೇ "ಅಯ್ಯೋ ದೇವರೇ, ತಾಯಿಯ ದುಃಖ ಶಮನಕ್ಕಾಗಿ ನಾನು ಒಪ್ಪಿದೆ, ಈಗ ಆಕೆಯೇ ಹೇಗೆ ವರ್ತಿಸುತ್ತಿದ್ದಾಳೆ! ಲೋಕವೇ ಹೀಗೆ! ತಂದೆಯಾದರೇನು? ತಾಯಿಯಾದರೇನು? ಆಡಿದಂತೆ ಮಾಡುವವನೆಂದರೆ ಶ್ರೀರಾಮಕೃಷ್ಣದೇವನೊಬ್ಬನೇ!" ಎಂದುಕೊಂಡು ಜುಗುಪ್ಸೆಯಿಂದ ಹೊರಟುಹೋದನು.

ಯೋಗೇಂದ್ರನು ಸ್ವಾಮಿ ಯೋಗಾನಂದರಾದರು.

ಕ್ರಿ. ಶ. ೧೮೮೩ ರಲ್ಲಿ ಶ್ರೀರಾಮಕೃಷ್ಣರೆಡೆಗೆ ಇನ್ನೂ ಐದು ಮಂದಿ ಶಿಷ್ಯರು ಬಂದರು—ಶಶಿಭೂಷಣ ಚಕ್ರವರ್ತಿ, ಶರಚ್ಚಂದ್ರ ಚಕ್ರವರ್ತಿ, ಕಾಳೀಪ್ರಸಾದ ಚಂದ್ರ, ಹರಿನಾಥ ಚಟ್ಟೋಪಾಧ್ಯಾಯ, ಹರಿಪ್ರಸನ್ನ ಚಟ್ಟೋಪಾಧ್ಯಾಯ.

ಶಶಿಭೂಷಣ ಶರಚ್ಚಂದ್ರರಿಬ್ಬರೂ ಹತ್ತಿರದ ಬಂಧುಗಳು; ಬ್ರಾಹ್ಮಣರು; ಕಲ್ಕತ್ತೆಯ ನಿವಾಸಿಗಳು; ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು; ಕೇಶವಚಂದ್ರಸೇನನ ಬ್ರಾಹ್ಮಸಮಾಜಕ್ಕೆ ಸೇರಿದ್ದರು. ಒಂದು ಸಾರಿ ಬ್ರಾಹ್ಮಸಮಾಜದವರು ಶ್ರೀರಾಮಕೃಷ್ಣರ ಪವಿತ್ರ ಸಂಗಲಾಭವು ದೊರೆಕೊಳ್ಳುವುದೆಂದು ಹಾರೈಸಿ ತಮ್ಮ ವಾರ್ಷಿಕೋತ್ಸವವನ್ನು ದಕ್ಷಿಣೇಶ್ವರದ ಉದ್ಯಾನವನದಲ್ಲಿ ನಡಸಿದರು. ಆ ದಿನದ ಪ್ರಾತಃಕಾಲವನ್ನೆಲ್ಲಾ ವಿನೋದ ಕ್ರೀಡೆಗಳಲ್ಲಿ ಕಳೆದು ಮಧ್ಯಾಹ್ನದಲ್ಲಿ ಶಶಿಭೂಷಣ ಶರಚ್ಚಂದ್ರರಿಬ್ಬರೂ ಪರಮಹಂಸರನ್ನು ಕಾಣಲು ಹೋದರು. ಅವರು ತರುಣರ ಹೆಸರು, ಸ್ಥಳ ಮೊದಲಾದ ವಿಷಯಗಳನ್ನು ಕೇಳಿ, ಕೇಶವನ ಸಮಾಜಕ್ಕೆ ಸದಸ್ಯರಾಗಿದ್ದಾರೆಂದು ಗೊತ್ತಾಗಲು ಬಹಳ ಸಂತೋಷಪಟ್ಟರು. ಮಾತಾಡುತ್ತ ಆಡುತ್ತ ಪರಮಹಂಸರೆಂದರು:

"ಇಟ್ಟಿಗೆಗಳನ್ನಾಗಲಿ ಹೆಂಚುಗಳನ್ನಾಗಲಿ ವಾಣಿಜ್ಯಮುದ್ರೆಯೊತ್ತಿದ ಮೇಲೆ ಚೆನ್ನಾಗಿ ಸುಟ್ಟರೆ ಆ ಮುದ್ರೆ ನಾಸದೆ ನಿಲ್ಲುತ್ತದೆ. ಹಾಗೆಯೇ ನೀವೂ ಧರ್ಮಜೀವನದಲ್ಲಿ ಸ್ವಲ್ಪ ಮುಂದುವರಿದ ಮೇಲೆಯೇ ಸಂಸಾರದಲ್ಲಿ ಪ್ರವೇಶಿಸಬೇಕು. ಹಾಗೆ ಮಾಡಿದರೆ ಪ್ರಪಂಚದ ಕೆಸರಿನಲ್ಲಿ ಹೂತುಕೊಳ್ಳುವುದಿಲ್ಲ. ಆದರೆ ಈಗ ತಂದೆತಾಯಿಗಳು ತಮ್ಮ ಮಕ್ಕಳು ಚಿಕ್ಕವರಾಗಿದ್ದಾಗಲೇ ಮದುವೆ ಮಾಡಿ ಅವರ ಶ್ರೇಯಸ್ಸನ್ನೇ ಹಾಳುಮಾಡಿಬಿಡುತ್ತಿದ್ದಾರೆ. ಹುಡುಗನು ಓದು ಪೂರೈಸಿ ಶಾಲೆಯಿಂದ ಹೊರಬೀಳುವುದೇ ತಡ, ತಾನು ಏಳು ಮಕ್ಕಳ ತಂದೆ

ಯಾಗಿರುವುದನ್ನು ಕಂಡು ದಿಗಿಲುಬೀಳುತ್ತಾನೆ. ಚಾಕರಿಗಾಗಿ ಅಲೆಯುತ್ತಾನೆ. ಕೆಲಸ ಸಿಕ್ಕಿದರೂ ಅಲ್ಪ ಸಂಪಾದನೆಯಿಂದ ಸಂಸಾರವನ್ನು ನಿರ್ವಹಿಸುವುದೇ ಕಠಿನವಾಗುತ್ತದೆ. ಹೀಗಾಗಿ ಮೂರು ಹೊತ್ತೂ ಹೊಟ್ಟೆಯ ಪಾಡಿನ ಚಿಂತೆಯೇ ಹಿಡಿದುಬಿಟ್ಟು ಉತ್ತಮ ಚಿಂತನೆಗಳಿಗೆ ಅವಕಾಶವೇ ಇರುವುದಿಲ್ಲ.''

ತರುಣರಲ್ಲೊಬ್ಬನು ಕೇಳಿದನು: "ಮಹಾಶಯ, ಹಾಗಾದರೆ, ಮದುವೆ ಮಾಡಿಕೊಳ್ಳುವುದು ತಪ್ಪೇ? ಅದು ಈಶ್ವರೇಚ್ಛೆಗೆ ವಿರುದ್ಧವಾದುದೇ?''

ಶ್ರೀರಾಮಕೃಷ್ಣರು ಗೋಡೆಯ ಗೂಡಿನಲ್ಲಿದ್ದ ಒಂದು ಗ್ರಂಥವನ್ನು ತೆಗೆದು ಅದರಲ್ಲಿ ಮದುವೆಯ ವಿಚಾರವಾಗಿದ್ದ ಯೇಸು ಕ್ರಿಸ್ತನ ಮತವನ್ನು ಓದುವಂತೆ ಹೇಳಿದರು. ಅದರಲ್ಲಿ ಹೀಗಿತ್ತು[1]:

"ಕೆಲವರು ತಾಯಿಯ ಹೊಟ್ಟೆಯಿಂದ ಹುಟ್ಟುವಾಗಲೇ ನಪುಂಸಕರಾಗಿರುತ್ತಾರೆ; ಕೆಲವರು ಹುಟ್ಟಿದ ಮೇಲೆ ಮಾನವರಿಂದ ನಪುಂಸಕರಾಗುತ್ತಾರೆ, ಕೆಲವರು ಈಶ್ವರ ರಾಜ್ಯದ ಸಲುವಾಗಿ ನಪುಂಸಕ ಜೀವನವನ್ನು ಕೈಕೊಳ್ಳುತ್ತಾರೆ. ಅದನ್ನು ಪಡೆಯಲು ಶಕ್ತಿಯುಳ್ಳವನಿದ್ದರೆ ಪಡೆಯಲಿ. . . . ಆದ್ದರಿಂದ ಅವಿವಾಹಿತರಿಗೂ ವಿಧವೆಯರಿಗೂ ನಾನು ಹೇಳುವುದೇನೆಂದರೆ ನನ್ನಂತೆಯೇ ಅವರಿರುವುದಾದರೆ ಶುಭವಾಗುತ್ತದೆ. ಸಮರ್ಥರಲ್ಲದಿದ್ದರೆ ಮದುವೆಮಾಡಿಕೊಳ್ಳಲಿ; ಏಕಂದರೆ, ಎದೆ ಬೇಯುವುದಕ್ಕಿಂತ ಮದುವೆಮಾಡಿಕೊಳ್ಳುವುದೇ ಲೇಸು."

ಓದಿದ ಮೇಲೆ ಪರಮಹಂಸರು "ವಿವಾಹವೇ ಬಂಧನದ ಬೇರು.'' ಎಂದರು.

ಸದಸ್ಯರಲ್ಲೊಬ್ಬನು "ಮಹಾಶಯ, ವಿವಾಹವು ಈಶ್ವರೇಚ್ಛೆಗೆ ವಿರುದ್ಧವೆಂಬುದು ನಿಮ್ಮ ಅರ್ಥವೇ? ವಿವಾಹವು ನಿಂತುಹೋದರೆ ಸೃಷ್ಟಿ ಮುಂದುವರಿಯುವುದಾದರೂ ಹೇಗೆ?'' ಎಂದು ಸೃಷ್ಟಿಕರ್ತನ ಯೋಗಕ್ಷೇಮಕಾರಿಯೋ ಎಂಬಂತೆ ಪ್ರಶ್ನೆ ಮಾಡಿದನು.

ಪರಮಹಂಸರು ನಗುನಗುತ್ತ ಹೇಳಿದರು: "ಅದರ ಚಿಂತೆ ನಿನಗೇಕೆ?

---

[1] 'For there are some eunuchs, which were so born from the mother's womb, there are some eunuchs, which were made eunuchs of men, and there be eunuchs, which have made themselves eunuchs for the Kingdom of Heaven's sake . . I say, therefore to the unmarried and the widows, it is good for them if they abide even as I But if they cannot contain, let them marry. for it is better to marry than to burn '

ಇಷ್ಟವಿದ್ದವರು ಬೇಕಾದ ಹಾಗೆ ಮದುವೆಮಾಡಿಕೊಳ್ಳಲಿ. ಅದಕ್ಕೇನೂ ಅಡ್ಡಿ ಯಿಲ್ಲ! ನಾನು ಹೇಳಿದುದು ನನ್ನ ನಿನ್ನ ಮಾತು. ಪ್ರಕೃತವನ್ನು ಕುರಿತು ಮಾತ್ರ ಹೇಳುತ್ತಿದ್ದೇನೆ. ನಿನಗೆ ಬೇಕಾದಷ್ಟನ್ನೇ ಸ್ವೀಕರಿಸು; ಉಳಿದುದನ್ನು ಬಿಟ್ಟುಬಿಡು."

ತರುವಾಯ ಶಶಿಭೂಷಣನನ್ನು ಕುರಿತು "ಸಾಕಾರ ನಿರಾಕಾರಗಳಲ್ಲಿ ನಿನಗೆ ಯಾವುದರಲ್ಲಿ ನಂಬುಗೆ?" ಎಂದು ಕೇಳಿದರು.

"ಮಹಾಶಯ, ದೇವರಿದ್ದಾನೆಯೋ ಇಲ್ಲವೋ ಅದೇ ನನಗೆ ಸಂದೇಹ. ಎಂದ ಮೇಲೆ ಸಾಕಾರ ನಿರಾಕಾರಗಳ ವಿಚಾರವಾಗಿ ನಾನು ಏನೂ ಹೇಳಲಾರೆ." ಎಂದುಬಿಟ್ಟನು ಶಶಿ. ಮನಸ್ಸಿನಲ್ಲಿ ಇದ್ದುದನ್ನು ಮರೆಮಾಚದೆ ಹೇಳಿಬಿಟ್ಟ ತರುಣನನ್ನು ಕಂಡು ಗುರುದೇವನಿಗೆ ಹರ್ಷವಾಯಿತು.

ಶಶಿಭೂಷಣ ಶರಚ್ಚಂದ್ರರಿಬ್ಬರೂ ಪರಮಹಂಸರಲ್ಲಿಗೆ ಆಗಾಗ ಹೋಗ ತೊಡಗಿದರು. ಕಡೆಗೆ ಅಂತರಂಗದ ಶಿಷ್ಯರ ಗುಂಪಿಗೂ ಸೇರಿದರು. ಅವರಿಬ್ಬರೂ ಮುಂದೆ ರಾಮಕೃಷ್ಣಾನಂದ ಮತ್ತು ಶಾರದಾನಂದರೆಂದು ಪ್ರಸಿದ್ಧರಾದುದನ್ನು ನೋಡುತ್ತೇವೆ.

ಅಧ್ಯಾಪಕನ ಮಗನಾಗಿದ್ದ ಕಾಳೀಪ್ರಸಾದಚಂದ್ರನು ವಿದ್ಯಾಶಾಲೆಯಲ್ಲಿ ಓದುತ್ತಿದ್ದಾಗಲೇ ಭಗವದ್ಗೀತೆ, ಶಿವಸಂಹಿತೆ, ಪಾತಂಜಲದರ್ಶನ ಮೊದಲಾದ ಗ್ರಂಥಗಳನ್ನು ಓದಿ ವೇದಾಂತಿಯಾಗಿದ್ದನು. ವೇದಶಾಸ್ತ್ರದಲ್ಲಿ ಆತನಿಗೆ ಬಹಳ ಮಮತೆ. ಆದರೆ ಗುರುವಿಲ್ಲದೆ ಯಾರೂ ಯೋಗಿಯಾಗಲಾರರು ಎಂಬುದನ್ನು ಶಾಸ್ತ್ರಗಳಲ್ಲಿ ಓದಿ, ಅಲ್ಲಿ ಇಲ್ಲಿ ಗುರುವನ್ನು ಹುಡುಕಿ, ಕಡೆಗೆ ಪರಮಹಂಸರಲ್ಲಿಗೆ ಬಂದು ಅವರನ್ನು ಮಹಾಯೋಗೀಶ್ವರರೆಂದು ತಿಳಿದು ಗುರುವಾಗಿ ಸ್ವೀಕರಿಸಿದನು. ಸಾಧನೆಯಲ್ಲಿ ಮುಂದುವರಿದು ಅನೇಕ ದಿವ್ಯಾನುಭವಗಳನ್ನು ಪಡೆದನು. ಮುಂದೆ ಸ್ವಾಮಿ ಅಭೇದಾನಂದರೆಂದು ಪ್ರಸಿದ್ಧರಾದರು. ಸ್ವಾಮಿ ವಿವೇಕಾನಂದರ ತರುವಾಯ ಅಮೇರಿಕಾಕ್ಕೆ ಹೋಗಿ ಇಪ್ಪತ್ತು ವರ್ಷಗಳ ಕಾಲ ಅಲ್ಲಿ ವೇದಾಂತಧರ್ಮವನ್ನು ಪ್ರಚಾರಮಾಡಿ ಹಿಂದಿರುಗಿದರು. ಆಂಗ್ಲೇಯ ಭಾಷೆಯಲ್ಲಿಯೂ ಬಂಗಾಳಿಯಲ್ಲಿಯೂ ಅನೇಕ ಧರ್ಮಗ್ರಂಥಗಳನ್ನೂ ತತ್ತ್ವಗ್ರಂಥಗಳನ್ನೂ ರಚಿಸಿದ್ದಾರೆ.

ಹರಿನಾಥ ಚಟ್ಟೋಪಾಧ್ಯಾಯನು ಸಂಪ್ರದಾಯದ ಬ್ರಾಹ್ಮಣಕುಮಾರ ನಾಗಿದ್ದನು. ದೈನಂದಿನ ಕರ್ಮಕ್ರಿಯೆಗಳನ್ನು ಚಾಚೂ ತಪ್ಪದೆ ನಡಸುತ್ತಿದ್ದನು. ದಿನಕ್ಕೆ ಮೂರು ಸಲವಾದರೂ ಮಿಾಯದೆ ಇರುತ್ತಿರಲಿಲ್ಲ. ತನ್ನ ಆಹಾರವನ್ನು ತಾನೇ ಅಡಿಗೆಮಾಡಿ ದೇವರಿಗೆ ನಿವೇದಿಸಿದ ತರುವಾಯ ಪ್ರಸಾದ ಸ್ವೀಕಾರ ಮಾಡುತ್ತಿದ್ದನು. ಭಗವದ್ಗೀತೆ ಮೊದಲಾದ ವೇದಾಂತ ಗ್ರಂಥಗಳನ್ನು ತಪ್ಪದೆ ಪಾರಾಯಣಮಾಡುತ್ತ ಶಂಕರಾದ್ವೈತಿಯಾಗಿದ್ದನು. ಪರಮಹಂಸರನ್ನು ನೋಡಿ ದಂದಿನಿಂದ ಅವರ ಮಹತ್ತನ್ನು ಅರಿತು ಆಗಾಗ್ಗೆ ಅವರ ಬಳಿಗೆ ಹೋಗಿ ಬರುತ್ತಾ ಕಡೆಗೆ ಶಿಷ್ಯನಾದನು. ಒಂದು ದಿನ ಹರಿನಾಥನು ಸ್ತ್ರೀಯರನ್ನು ತಿರಸ್ಕರಿಸಿ ಮಾತಾಡಲು, ಪರಮಹಂಸರು "ಛೀ ಎಂತಹ ಮಾತು! ಸ್ತ್ರೀಯರಲ್ಲಿ ತಿರಸ್ಕಾರ! ಏತಕ್ಕೆ? ಜಗನ್ಮಾತೆಯ ಪ್ರತಿಕೃತಿಗಳಲ್ಲವೇ ಅವರು? ಅವರನ್ನು ನಮಸ್ಕರಿಸ ಬೇಕೇ ಹೊರತು ತಿರಸ್ಕರಿಸಬಾರದು. ದ್ವೇಷ ಹೆಚ್ಚಿದಂತೆಲ್ಲ ಅವರ ಮಾಯೆಗೆ ಬೀಳುತ್ತೀಯೆ! ಎಚ್ಚರಿಕೆ." ಎಂದರು. ಹರಿನಾಥನು ತುರೀಯಾನಂದರಾದರು

ಮೇಲೆ ಹೇಳಿದ ಹನ್ನೊಂದು ಜನ ಶಿಷ್ಯರಲ್ಲದೆ ಇನ್ನೂ ಐದು ಜನರು ಪರಮಹಂಸರ ಅಂತರಂಗದ ಶಿಷ್ಯಗೋಷ್ಠಿಗೆ ಸೇರಿದರು: ಗಂಗಾಧರ (ಸ್ವಾಮಿ ಅಖಂಡಾನಂದ); ಸುಬೋಧ ಘೋಷ (ಸ್ವಾಮಿ ಸುಬೋಧಾನಂದ); ಶಾರದಾ ಪ್ರಸನ್ನ ಮಿತ್ರ (ತ್ರಿಗುಣಾತೀತಾನಂದ); ನಿತ್ಯನಿರಂಜನಸೇನ (ಸ್ವಾಮಿ ನಿರಂಜ ನಾನಂದ); ಬಾಬುರಾಂ ಘೋಷ (ಸ್ವಾಮಿ ಪ್ರೇಮಾನಂದ); ತುಲಸೀ ಚರಣ ದತ್ತ (ಸ್ವಾಮಿ ನಿರ್ಮಲಾನಂದ).

ಪೂರ್ವೋಕ್ತಕಥನದಿಂದ ಪರಮಹಂಸರಲ್ಲಿಗೆ ಬಂದ ಶಿಷ್ಯರು ಎಂತಹ ವಿವಿಧ ಪ್ರಕೃತಿಯುಳ್ಳವರಾಗಿದ್ದರು ಎಂಬುದು ಗೊತ್ತಾಗುತ್ತದೆ. ಕೆಲವರು ಕಗ್ಗಲ್ಲಿನಂತೆ, ಕೆಲವರು ಬಳಪದ ಕಲ್ಲಿನಂತೆ, ಕೆಲವರು ಹಾಲ್ಗಲ್ಲಿನಂತೆ, ಕೆಲವರು ಹಿಟ್ಟುಗಲ್ಲಿನಂತೆ. ಹಲವು ತೆರನಾದ ಅರೆಗಳಿಂದ ವಿಗ್ರಹಗಳನ್ನು ಕೆತ್ತುವ ಶಿಲ್ಪಿ ಕಲ್ಲಿನ ಗುಣಗಳನ್ನು ತಿಳಿದುಕೊಳ್ಳದೆ ಎಲ್ಲಕ್ಕೂ ಒಂದೇ ನಿಯಮದಂತೆ ಶಕ್ತಿ ಪ್ರಯೋಗಮಾಡಿದರೆ ಅಪಾಯವಾಗದಿರುವುದಿಲ್ಲ. ಕಗ್ಗಲ್ಲಿಗೆ ಹೊಡೆಯುವ ಪೆಟ್ಟನ್ನು ಹಿಟ್ಟುಗಲ್ಲಿಗೆ ಹೊಡೆದರೆ ವಿಗ್ರಹಕ್ಕೆ ಬದಲಾಗಿ ರಂಗವಲ್ಲಿಯ ಚೂರ್ಣ ವಾಗಿ ಬಿಡುತ್ತದೆ. ಅದನ್ನು ಚೆನ್ನಾಗಿ ಅರಿತಿದ್ದ ದೇವಶಿಲ್ಪಿ ಶ್ರೀರಾಮಕೃಷ್ಣರು

ಬಹು ಎಚ್ಚರಿಕೆಯಿಂದ ತಮ್ಮ ಬಾಣವನ್ನು ಉಪಯೋಗಿಸಿದ್ದಾರೆ. ಶಿಷ್ಯರ ಎದೆಯ ಭಾವಗಳನ್ನು ನಷ್ಟಗೊಳಿಸುವ ಗೊಡವೆಗೆ ಹೋಗದೆ ಅವರ ಅಂತರಂಗದಲ್ಲಿ ಸರ್ವದಾ ಸುಪ್ತವಾಗಿದ್ದ ಪರಿಪೂರ್ಣತೆ ವಿಕಾಸಹೊಂದಿ ಪ್ರಕಾಶವಾಗಲು ಎಷ್ಟು ಕೆಲಸಮಾಡಬೇಕಾಗಿತ್ತೋ ಅಷ್ಟನ್ನೇ ಮಾಡಿದ್ದಾರೆ. ಸ್ಪರ್ಶಮಾತ್ರದಿಂದ ಅಥವಾ ಇಚ್ಛಾಮಾತ್ರದಿಂದ ಒಂದು ಭಾವವು ಸಂಪೂರ್ಣವಾಗಿ ಲಯವಾಗುವಂತೆ ಮಾಡಿ ಅದರ ಸ್ಥಾನದಲ್ಲಿ ಬೇರೊಂದು ಶ್ರೇಷ್ಠತರ ಮತ್ತು ಶ್ರೇಯಸ್ಕರವಾದ ಭಾವವು ಆವಿರ್ಭವಿಸುವಂತೆ ಮಾಡುವ ಅಪಾರ್ಥಿವ ದೈವಿಕಶಕ್ತಿ ಅವರಲ್ಲಿದ್ದುದೇನೋ ನಿಜ. ಒಂದೆರಡು ಪ್ರಸಂಗಗಳಲ್ಲಿ ಆ ಶಕ್ತಿಯನ್ನು ಪ್ರಯೋಗಿಸಿಯೂ ಇದ್ದಾರೆ. ಆದರೆ ಅದು ಅತಿ ವಿರಳ. ಇತರರ ಭಾವನಷ್ಟಮಾಡಬಾರದು ಎಂದು ತಮ್ಮ ಶಿಷ್ಯರಿಗೆ ಅವರು ಆಜ್ಞೆಮಾಡಿದ್ದಾರೆ. "ಮಧುಕರಗಳು ನಿನ್ನ ಹೃದಯಕಮಲದ ಮಕರಂದವನ್ನೇನೋ ಪಾನಮಾಡಲಿ; ಆದರೆ ಕಮಲವು ಅವುಗಳಿಗೆ ಕಾರಾಗೃಹವಾಗದಂತೆ ಎಚ್ಚರಿಕೆಯಿರಲಿ."

ಶ್ರೀರಾಮಕೃಷ್ಣರು ತಮ್ಮ ಶಿಷ್ಯರ ಧ್ಯಾನ ತಪಸ್ಸು ಸಾಧನೆ ಸಿದ್ಧಿಗಳಿಗೆ ಹೇಗೆ ನೆರವಾದರು ಎಂಬುದು ಅವರ್ಣನೀಯವಾಗಿದೆ. ಏಕೆಂದರೆ, ಆತ್ಮದ ಸಂಸರ್ಗವು ಅಂತರಂಗವಾದುದು; ಸಂಪೂರ್ಣ ಮಾನಸಿಕವಾದುದು. ಸಾಹಸ ಕಥೆಯನ್ನು ಕುರಿತು ವಿಸ್ತಾರವಾಗಿ ಬರೆದಂತೆ ಅದನ್ನು ಬರೆಯುವುದು ಅಸಾಧ್ಯ. ಉಪದೇಶ ಮತ್ತು ವಾದಗಳಿಂದ ತಿಳಿಸಲು ಸಾಧ್ಯವಲ್ಲದ ದಿವ್ಯಾನುಭವಗಳನ್ನು ಕೆಲವು ಸಾರಿ ಸ್ಪರ್ಶದಿಂದಲೂ ಮತ್ತೆ ಕೆಲವು ಸಾರಿ ಇಚ್ಛೆಯಿಂದಲೂ ಅನುಭವವೇದ್ಯವಾಗುವಂತೆ ಮಾಡಿ ಶಿಷ್ಯರ ಹೃದಯಗಳಲ್ಲಿ ಹುದುಗಿದ್ದ ದಿವ್ಯಶಕ್ತಿ ಮತ್ತು ಚೈತನ್ಯಗಳನ್ನು ಜಾಗ್ರತಗೊಳಿಸಿದ್ದಾರೆ ಎಂಬುದಕ್ಕೆ ಅನೇಕ ನಿದರ್ಶನಗಳಿವೆ. ಅವುಗಳಲ್ಲಿ ಒಂದೆರಡನ್ನು ಮಾತ್ರ ಇಲ್ಲಿ ಸೂಚಿಸಿ, ಮುಂದೆ ಅವರು ಮಾಡಿದ ಉಪದೇಶ, ಅವರ ಶಿಕ್ಷಣಕ್ರಮ, ಅವರ ತತ್ತ್ವ ಮತ್ತು ಅದರ ಪ್ರತಿಪಾದನೆಯ ರೀತಿ ಇವುಗಳನ್ನು ಕುರಿತು ಪ್ರಸ್ತಾಪಿಸುತ್ತೇವೆ.

ನರೇಂದ್ರನಿಗೆ ಗುರುದೇವನ ಸ್ಪರ್ಶಮಾತ್ರದಿಂದ ಎಂತಹ ಪ್ರಚಂಡವಾದ ಅನುಭವಗಳುಂಟಾದುವು ಎಂಬುದನ್ನು ಹಿಂದೆಯೇ ಹೇಳಿದ್ದೇವೆ. ನೂರಾರು ವಾದಗಳು ಮನಗಾಣಿಸಲರಿಯದೆ ಹೋದ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ

ತತ್ತ್ವವನ್ನು ಆತನು ಕ್ಷಣಮಾತ್ರದಲ್ಲಿ ಅನುಭವದಿಂದ ಅರಿತು ಅದ್ವೈತಿಯಾದನು! ಪರಮಹಂಸರ ದೃಷ್ಟಿಮಾತ್ರದಿಂದ ತಾರಕನ ಹೃದಯದಲ್ಲಿ ಅದ್ಭುತಶಕ್ತಿ ಸಂಚಾರವಾಗಿ,' ಈಶ್ವರ ಸಾನ್ನಿಧ್ಯದ ಮಾಧುರ್ಯಮಹಿಮೆಯಿಂದ ದೇಹವೆಲ್ಲ ಏಕಂಪಿಸಿದಂತೆ ಆತನಿಗೆ ಅನುಭವವಾಯಿತು. ಕಾಳೀಪ್ರಸಾದನು ಪರಮಹಂಸರಲ್ಲಿಗೆ ಮೊತ್ತಮೊದಲು ಹೋದಾಗ ಅವರನ್ನು ಮುಟ್ಟಿ ಅಂತರಂಗದಲ್ಲಿ ಉದ್ಭವಿಸಿದ ಮಹಾಶಕ್ತಿಯ ಆವೇಗಕ್ಕೆ ಬಾಹ್ಯಪ್ರಜ್ಞಾಶೂನ್ಯನಾಗಿಬಿಟ್ಟನು. ಲಾಟುವಿಗೆ ದಿವ್ಯಜ್ಞಾನವಾಗಲಿ ಎಂದು ವರಪ್ರದಾನಮಾಡಿದ ಮಾತ್ರದಿಂದ ಆತನಿಗೆ ಜ್ಯೋತಿಯ ದರ್ಶನವಾಯಿತು. ಸುಬೋಧನ ಎದೆಯನ್ನು ಮುಟ್ಟಿ 'ಚೈತನ್ಯವಾಗಲಿ' ಎಂದು ಹೇಳಿ, ಆತನ ನಾಲಗೆಯ ಮೇಲೆ ಏನೋ ಮಂತ್ರವನ್ನು ಬರೆದಾಗ, ಆತನಲ್ಲಿ ಮಹಾಜ್ಯೋತಿರ್ವಾಹಿನಿ ಪ್ರವಹಿಸಿದಂತಾಗಿ, ನೂರಾರು ದೇವದೇವತೆಗಳು ಕಣ್ಣಿಗೆ ಮಿಂಚಿ ಬ್ರಹ್ಮಲೀನವಾದಂತಾಗಿ, ಅಹಂಭಾವವೇ ಲಯಹೊಂದಲು, ಗುರುದೇವನ ಸ್ಪರ್ಶದಿಂದ ಮೈಮರೆತು ನಿಂತಿದ್ದನು... ಗುರುದೇವನ ಸ್ಪರ್ಶದಿಂದ ಮೈ ತಿಳಿದನು. ಗಂಗಾಧರನನ್ನು ಒಂದು ಸಾರಿ ಕಾಳಿಯ ಗುಡಿಗೆ ಕರೆದೊಯ್ದು "ಇದೋ ನೋಡು ಸಜೀವ ಶಿವ!" ಎಂದು ಹೇಳಿದಾಗ, ಆತನಿಗೆ ಸಾಕ್ಷಾತ್ ಪರಶಿವನ ದರ್ಶನವಾಯಿತು. ಪವಾಡಗಳಂತಿರುವ ಇಂತಹ ಘಟನೆಗಳು ಕೆಲವಿವೆ. ಆದರೆ ಸಾಮಾನ್ಯವಾಗಿ ಪರಮಹಂಸರು ತಮ್ಮ ಯೋಗಶಕ್ತಿಗಳನ್ನು ಉಪಯೋಗಿಸುತ್ತಿರಲಿಲ್ಲ. ಅವುಗಳನ್ನು ಪ್ರದರ್ಶಿಸುವುದು ಶ್ರೇಯಸ್ಕರವಲ್ಲವೆಂದು ಅವರ ಭಾವನೆಯಾಗಿತ್ತು. ಅಲ್ಲದೆ ಬರಿಯ ದೇವದೇವಿಯರ ದರ್ಶನಗಳಾಗುವುದು ಉತ್ತಮಜ್ಞಾನದ ಲಕ್ಷಣವಲ್ಲವೆಂದೂ ಹೇಳಿದ್ದಾರೆ. ದೇವದೇವಿಯರ ದರ್ಶನಲೋಲುಪತೆಯಿದ್ದ ಶಿಷ್ಯರನ್ನು ಎಷ್ಟೋ ಸಾರಿ ಭಾವಮಾರ್ಗದಿಂದ ಜ್ಞಾನಮಾರ್ಗಕ್ಕೆ ಎಳೆದಿದ್ದಾರೆ. ತತ್ತ್ವಗಳನ್ನು ಪ್ರಯೋಗತಃ ತೋರಿಸಲೇ ಬೇಕಾದ ಅಗತ್ಯವು ಒದಗಿದಾಗ ಮಾತ್ರವೇ ಅವರು ತಮ್ಮ ದಿವ್ಯಶಕ್ತಿಯನ್ನು ಉಪಯೋಗಿಸಿದ್ದಾರೆ ಎಂಬುದನ್ನು ಜ್ಞಾಪಕದಲ್ಲಿಡಬೇಕು.

ಮೇಲೆ ಹೇಳಿದ ಉದಾಹರಣೆಗಳಿಂದ ಯಾರಾದರೂ ಪರಮಹಂಸರ ಶಿಷ್ಯರೆಲ್ಲರೂ ಪ್ರಯತ್ನವಿಲ್ಲದೆ ಗುರುವರ್ಯನ ಅನುಗ್ರಹಮಾತ್ರದಿಂದಲೇ ಸಿದ್ಧರಾಗಿಬಿಟ್ಟರು ಎಂದು ಊಹಿಸಿದರೆ ತಪ್ಪಾಗುತ್ತದೆ. ಏಕಂದರೆ, ಸಾಧನೆಯಿಲ್ಲದೆ ಸಿದ್ಧಿಯಿಲ್ಲ ಎಂದು ಅವರು ಘಂಟಾಘೋಷವಾಗಿ ಹೇಳಿದ್ದಾರೆ. ಪ್ರಯತ್ನವಿಲ್ಲದೆ

ಯಾವುದೂ ಆಕಸ್ಮಿಕವಾಗಿ ಲಭಿಸುವುದಿಲ್ಲ. ಆಕಸ್ಮಿಕವೆಂದು ತೋರಿದುದೂ ಕೂಡ ಸ್ವಲ್ಪ ವಿಚಾರಿಸಿ ನೋಡಿದರೆ ಪ್ರಯತ್ನಪೂರ್ವಕವೆಂದು ತೋರಿಬರುತ್ತದೆ. ಗುರುದೇವನ ವಚನವಿದು: "ಭಗವದನುಗ್ರಹವೆಂಬ ಮಾರುತವು ಹಗಲೂ ಇರುಳೂ ಎಲ್ಲೆಲ್ಲಿಯೂ ಬೀಸುತ್ತದೆ. ನಿನ್ನ ಹೃದಯವೆಂಬ ದೋಣಿಯು ಭಕ್ತಿ ಪಟವನ್ನು ಪ್ರಯತ್ನದಿಂದ ಬಿಚ್ಚಿದಲ್ಲದೆ ಆ ಕೃಪೆಯ ಮಾರುತವು ನಿನ್ನನ್ನು ಮುಂದೆ ಕೊಂಡೊಯ್ಯುವುದಿಲ್ಲ. . . . ಕರ್ಮವಿಲ್ಲದೆ ದರ್ಶನವಿಲ್ಲ. ಈಶ್ವರ ಸಾಕ್ಷಾತ್ಕಾರಕ್ಕೆ ಧ್ಯಾನ ಜಪ ತಪಸ್ಸುಗಳೇ ಕರ್ಮ. . . . ಹಾಲಿನಲ್ಲಿ ಬೆಣ್ಣೆ ಇದೆ ಎಂದು ಗಂಟಲು ಒಣಗುವ ವರೆಗೂ ಕೂಗಿಕೊಂಡಮಾತ್ರಕ್ಕೆ ಬೆಣ್ಣೆ ದೊರೆಯುವುದೇನು? ಬೆಣ್ಣೆ ಬೇಕಾದರೆ ಹಾಲಿಗೆ ಹೆಪ್ಪುಹಾಕಿ ಮೊಸರುಮಾಡಿ ಕಡೆಯಬೇಕು. ಬ್ರಹ್ಮಸಾಕ್ಷಾತ್ಕಾರ ಬೇಕಾದರೆ ಸಾಧನೆ ಮಾಡಬೇಕು. "ಓ ಭಗವಂತ, ಓ ಭಗವಂತ" ಎಂದು ಸುಮ್ಮನೆ ಕೂಗಿ ಕಂಠಶೋಷಣೆ ಮಾಡಿಕೊಳ್ಳುವುದರಿಂದ ಪ್ರಯೋಜನವಿಲ್ಲ. . . . ಸಮುದ್ರದಲ್ಲೇನೋ ಮುತ್ತು ಗಳಿವೆ. ಮುಳುಗಿ ಗಂಡಾಂತರಗಳನ್ನು ದಾಟಿದಲ್ಲದೆ ಅವುಗಳು ಲಭಿಸುವುದಿಲ್ಲ. ದೇವರಿರುವುದು ಹಾಗೆಯೇ. ಆತನನ್ನು ಹುಡುಕಲು ಅನೇಕ ಕಷ್ಟಗಳಿಗೆ ಗುರಿ ಯಾಗಬೇಕು. . . . "ಗಾಂಜಾ, ಗಾಂಜಾ" ಎಂದು ಸುಮ್ಮನೆ ಕೂಗಿಕೊಂಡ ಮಾತ್ರಕ್ಕೆ ಅಮಲು ಏರುವುದೇನು? ಅದನ್ನು ತಂದು ಅರೆದು ಸಿದ್ಧಮಾಡಿ ಕುಡಿದರೆ ಅಮಲೇರುತ್ತದೆ. ಅಂತೆಯೇ ಸುಮ್ಮನೆ ದೇವರನ್ನು ಕೂಗುವುದರಿಂದ ಪ್ರಯೋಜನವಿರುವುದಿಲ್ಲ. ತಪ್ಪದೆ ಕ್ರಮವಾಗಿ ಉಪಾಸನೆ ಮಾಡಿದರೆ ಆತನು ಪ್ರತ್ಯಕ್ಷನಾಗುತ್ತಾನೆ."

ಹಾಗಾದರೆ ಸಾಧನೆಯ ಬಗೆಯೇನು?

ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಬ್ರಹ್ಮದರ್ಶನಮಾಡಲು ಅಭ್ಯಾಸಿಸುವುದು. ಕೆಲಸಕ್ಕೆ ಬಾರದ, ಕೊನೆಗಾಣದ, ಕಾಲಹರಣಕಾರಿಯಾದ ವಾದ ವಿವಾದಗಳಿಂದ ಅದು ಸಾಧ್ಯವಲ್ಲ. "ನನಗೆ ಬರಿಯ ವಾದಲೋಲುಪತೆಯನ್ನು ಕಂಡರಾಗದು. ಬ್ರಹ್ಮವು ಯುಕ್ತಿಗೆ ಅತೀತವಾದುದು. ಎಲ್ಲವೂ ಬ್ರಹ್ಮವೆಂಬುದೇ ನನ್ನ ನಿತ್ಯಾನು ಭವವಾಗಿದೆ. ಹೀಗಿರಲು ವಾದದಿಂದ ಪ್ರಯೋಜನವೇನು? ಮಾವಿನ ತೋಪಿಗೆ ಹೋಗಿ ಹಣ್ಣುಗಳನ್ನು ತಿಂದು ಹೊರಟುಹೋಗುತ್ತೀಯೆ; ಮರದ ಎಲೆಗಳನ್ನು

ಲೆಕ್ಕಮಾಡುತ್ತ ಕುಳಿತುಕೊಳ್ಳುವುದಿಲ್ಲ. ಇಂತಿರಲು ಪುನರ್ಜನ್ಮ, ಮೂರ್ತಿಪೂಜೆ ಇವುಗಳನ್ನು ಕುರಿತು ಚರ್ಚಾದಿ ಕಾಲಹರಣ ಮಾಡಬೇಕೆ? " ಆದ್ದರಿಂದ ಮುಖ್ಯ ವಾಗಿ ಬೇಕಾದದ್ದು ಅಪರೋಕ್ಷಾನುಭೂತಿ. ಪ್ರತ್ಯಕ್ಷಾನುಭವವೇ ಪರಮ ಪ್ರಮಾಣ. ನಂಬಿ ಅನುಭವಿಸುವುದಕ್ಕಿಂತ ಅನುಭವಿಸಿ ನಂಬುವುದೇ ಶಾಶ್ವತ ಮತ್ತು ಸತ್ಯ. ಕುರುಡು ನಂಬಿಕೆಯ ಮೇಲೆ ನಿಂತ ಅನುಭವವೂ ಕುರುಡಾದುದೇ. ಸಾಧನೆಯಿಂದ ಬ್ರಹ್ಮಸಾಕ್ಷಾತ್ಕಾರವಾದ ತರುವಾಯ ಎಲ್ಲವೂ ಬ್ರಹ್ಮವೆಂಬುದು ಸ್ವಸಂವೇದ್ಯವಾಗುತ್ತದೆ. ಆ ಅನುಭವವು ಕಲ್ಲಿನ ಮೇಲೆ ಕಟ್ಟಿದ ಕಟ್ಟಡದಂತೆ ಸ್ಥಿರವಾಗಿರುತ್ತದೆ.

ವಜ್ರಚಿತ್ತವಿಲ್ಲದೆ ಬ್ರಹ್ಮಸಾಧನೆ ಅಸಾಧ್ಯ. "ನಾಯಮಾತ್ಮಾ ಬಲ ಹೀನೇನ ಲಭ್ಯಃ" ಬಲಹೀನರಿಗೆ ಆತ್ಮಪ್ರಸಾದವು ಲಭಿಸುವುದಿಲ್ಲ. ಹಾಗಾಗ ಬೇಕಾದರೆ ವಜ್ರಶರೀರವೂ ವಜ್ರಚಿತ್ತವೂ ಎರಡೂ ಆವಶ್ಯಕ. ಎಂದರೆ ಬ್ರಹ್ಮ ಚರ್ಯವು ಅತ್ಯಾವಶ್ಯಕವಾದುದು. ವೀರ್ಯಧಾರಣೆಯೇ ಬ್ರಹ್ಮಚರ್ಯ. ಬ್ರಹ್ಮಚರ್ಯವಿಲ್ಲದೆ ಯಾವ ಶ್ರೇಯಸ್ಸೂ ಇಲ್ಲ ಎಂಬುದು ಶ್ರೀರಾಮಕೃಷ್ಣರ ದೃಢಸಿದ್ಧಾಂತವಾಗಿದೆ. ಬ್ರಹ್ಮಸಾಕ್ಷಾತ್ಕಾರಕ್ಕಾಗಲಿ, ಲೋಕಸೇವೆಗಾಗಲಿ ಅಥವಾ ಇನ್ನಾವ ಶಾಶ್ವತಕಾರ್ಯಕ್ಕಾಗಲಿ ಬ್ರಹ್ಮಚರ್ಯವೇ ಮೂಲಶಕ್ತಿ. ಅದರ ಸಾಧನೆಯಿಂದ ದುರ್ಬಲ ಮಾನವನು ಮಹಾ ಬಲಾನ್ವಿತನಾಗಿ ತೇಜಸ್ವಿ ಯಾಗಿ ದೇವನಾಗುತ್ತಾನೆ. ಸಿಂಹ ಬಲವೂ ಇಂದ್ರಿಯ ಸಂಯಮವೂ ಪ್ರಚಂಡ ಮೇಧಾಶಕ್ತಿಯೂ ಅಪ್ರತಿಹತ ಅಧಿಕಾರವಾಣಿಯೂ ಧೈರ್ಯ ಸ್ಥೈರ್ಯ ಸಹನೆ ಆನಂದ ಉತ್ಸಾಹ ಮತ್ತುಳಿದ ಪೌರುಷ ಗುಣಗಣಗಳೆಲ್ಲವೂ ವೀರ್ಯಧಾರಣೆ ಯಿಂದ ಪ್ರಾಪ್ತವಾಗುತ್ತವೆ. ಕಾಮಜಯದಿಂದ ಎಂತಹ ಅತ್ಯದ್ಭುತವಾದ ದೈವಿಕ ಓಜಸ್ಸು ಉದ್ಭವಿಸುತ್ತದೆ ಎಂಬುದು ಸರ್ವದೇಶದ, ಸರ್ವಕಾಲದ ಯೋಗಿ ಮಹರ್ಷಿ ಸಿದ್ಧರೆಲ್ಲರಿಗೂ ತಿಳಿದ ವಿಷಯವಾಗಿತ್ತು ಎಂದು ಇತಿಹಾಸದಿಂದ ಗೊತ್ತಾಗುತ್ತದೆ. ಆದ್ದರಿಂದಲೇ ಮಹಾತ್ಮರೆಲ್ಲರೂ ಬ್ರಹ್ಮಚರ್ಯವನ್ನು ಬೋಧಿ ಸಿದ್ದಾರೆ.[1] ಅದರಂತೆಯೇ ಪರಮಹಂಸರೂ ಕೂಡ ಬ್ರಹ್ಮಸಾಕ್ಷಾತ್ಕಾರದಲ್ಲಿ

[1] ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ |
—ಭಗವದ್ಗೀತೆ.

ಇಚ್ಛೆಯುಳ್ಳವರೆಲ್ಲರೂ ಬ್ರಹ್ಮಚರ್ಯವ್ರತವನ್ನು ಕೈಕೊಳ್ಳಲೇ ಬೇಕೆಂದು ತಮ್ಮ ಶಿಷ್ಯರಿಗೆ ಬೋಧಿಸಿದರು. "ಬ್ರಹ್ಮಚರ್ಯಾಭ್ಯಾಸದಿಂದಲೇ ಪರಮ ಶ್ರೇಯೋ ಲಾಭವಾಗುತ್ತದೆ. ಹನ್ನೆರಡು ವರ್ಷ ಮನೋವಾಕ್ಕಾಯ ಕರ್ಮಗಳಲ್ಲಿ ಬ್ರಹ್ಮ ಚಾರಿಯಾಗಿದ್ದವನಿಗೆ ಅದ್ಭುತ ಯೋಗಸಿದ್ಧಿಯಾಗುತ್ತದೆ. ಕುಂಡಲಿನೀಶಕ್ತಿ ಎಂಬ ಹೊಸದೊಂದು ಶಕ್ತಿ ಉದ್ದೀಪನವಾಗುತ್ತದೆ. ಅಂತಹನು ಸರ್ವಜ್ಞನಾಗುತ್ತಾನೆ. ಹಾಗಾಗಲು ಕಾಮಿನೀಕಾಂಚನತ್ಯಾಗವು ಅತ್ಯಂತ ಪ್ರಧಾನವಾದುದು."

ಎರಡನೆಯದಾಗಿ, ನಿಷ್ಕಾಮಕರ್ಮ, ವೈರಾಗ್ಯ, ಲೋಕಸಂಗ್ರಹ ಕಾರ್ಯ ಮಾಡುವವರು ನಿಸ್ಸಂಗಿಗಳಾಗಿರಬೇಕು. ಎಂತಹ ಮಹತ್ಕಾರ್ಯವಾಗಲಿ ಫಲಾ ಪೇಕ್ಷೆಯಿಲ್ಲದೆ ರಾಗವಿಲ್ಲದೆ ಕೆಲಸದಲ್ಲಿ ತೊಡಗಬೇಕು. "ಕರ್ಮದಿಂದ ತಪ್ಪಿಸಿ ಕೊಳ್ಳಲಾರೆ.[1] ಏಕೆಂದರೆ, ಪ್ರಕೃತಿಯೇ ನಿನ್ನನ್ನು ಕೆಲಸಕ್ಕೆ ನೂಕುತ್ತದೆ. ಹಾಗಿರಲು ಕರ್ತವ್ಯಕ್ಕಾಗಿ ಕರ್ಮಮಾಡು. ಕಾಮವಿಲ್ಲದೆ ಕರ್ಮಮಾಡಿದೆಯಾದರೆ ಅದು ನಿನ್ನನ್ನು ಭಗವಂತನಲ್ಲಿಗೆ ಕೊಂಡೊಯ್ಯುತ್ತದೆ. ಈಶ್ವರನೇ ಪರಮಪುರುಷಾರ್ಥ."[2] ನಿಸ್ಸಂಗವೆಂದರೆ ಮನಸ್ಸಿಲ್ಲದೆ ಕಾಟಾಚಾರಕ್ಕೆ ಕೆಲಸಮಾಡುವುದೆಂದು ಅರ್ಥವಲ್ಲ. ವೀತರಾಗನಾಗಿ ನಿಷ್ಕಾಮಕರ್ಮಮಾಡುವುದು ಎಂದರ್ಥ. ಆದ್ದರಿಂದ ಲೋಕ ಸಂಗ್ರಹಕ್ಕಾಗಿ ಕರ್ಮಮಾಡಬೇಕು.

ಲೋಕಸಂಗ್ರಹವೆಂದರೆ ಲೋಕೋಪಕಾರವೆಂದಲ್ಲ, ಲೋಕಸೇವೆ ಎಂದು. ಪರಮಹಂಸರಿಗೆ "ಉಪಕಾರ" ಎಂಬ ಶಬ್ದವು ಅಸಹನೀಯವಾಗಿತ್ತು. ಅದಕ್ಕೆ ಬದಲಾಗಿ "ಸೇವೆ" ಎಂಬ ಪದವನ್ನೇ ಉಪಯೋಗಿಸುತ್ತಿದ್ದರು. ಸರ್ವವ್ಯಾಪಿ ಯಾದ ಭಗವಂತನಿಗೆ, ಎಲ್ಲರಲ್ಲಿಯೂ ನೆಲಸಿರುವ ಈಶ್ವರನಿಗೆ ಯಾರೂ ಉಪಕಾರ ಮಾಡಲಾರರು. ಸರ್ವಶಕ್ತನಿಗೆ ಉಪಕಾರವು ಬೇಕಿಲ್ಲ. ಆದ್ದರಿಂದ ಸೇವೆ ಎಂದು ಕೊಂಡು ಕೆಲಸಮಾಡಬೇಕು. "ಉಪಕಾರ" ಎನ್ನುವುದರಲ್ಲಿ ಅಹಂಭಾವವಿದೆ.

---

[1] ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ |
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ || —ಭಗವದ್ಗೀತೆ

[2] ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ |
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ || —ಭಗವದ್ಗೀತೆ.

"ಸೇವೆ" ಎನ್ನುವುದು ನಮ್ರತೆಯ ಚಿಹ್ನೆ. ಲೋಕೋಪಕಾರಮಾಡುತ್ತೇವೆ ಎಂದು ಯಶೋಲೋಭಿಗಳಾಗಿ ವಿಜೃಂಭಿಸಿ ಉಗ್ಗಡಿಸುತ್ತಿದ್ದ ಕೆಲವು ಉದ್ಧತ ಸಮಾಜಸುಧಾರಕರನ್ನು ಕಂಡು ಪರಮಹಂಸರು ಕಸಿಕರಪಡುತ್ತಿದ್ದರು. ಆದ್ದರಿಂದ ತಮ್ಮ ಶಿಷ್ಯರಿಗೆ ಸೇವಾತತ್ತ್ವವನ್ನೂ ಎಲ್ಲ ಮಾನವರ ದೇವತ್ವವನ್ನು ಸಾರುವ ದರಿದ್ರನಾರಾಯಣಸೇವೆಯನ್ನೂ ಉಪದೇಶಮಾಡಿದರು. ಏನುಮಾಡಿದರೂ ಈಶ್ವರಸೇವೆ ಎಂದು ಎಲ್ಲವನ್ನೂ ಆತನಿಗೆ ಸಮರ್ಪಿಸಬೇಕು.[1]

ತಮ್ಮ ಶಿಷ್ಯರಲ್ಲಿ ಯಾವಾಗಲಾದರೂ ಯಾವುದಾದರೊಂದು ಭಾವದ ಆಧಿಕ್ಯವಾಗಲಿ, ಉತ್ಪ್ರೇಕ್ಷೆಯಾಗಲಿ, "ಅತಿ"ಯಾಗಲಿ ಕಂಡು ಬಂದರೆ ಪರಮಹಂಸರು ಅದನ್ನು ಖಂಡಿಸಿ ತಿದ್ದದೆ ಬಿಡುತ್ತಿರಲಿಲ್ಲ. ಸಮನ್ವಯದಂತೆಯೇ ಸಮತ್ವವೂ ಅವರ ಜೀವನಗೀತದ ಮಹಾ ಪಲ್ಲವಿಯಾಗಿತ್ತು. "ಸಮತ್ವಂ ಯೋಗ ಉಚ್ಯತೇ. . . . ಯೋಗಃ ಕರ್ಮಸು ಕೌಶಲಂ. . . . ತಪಸ್ವಿಭ್ಯೋಽಧಿಕೋ ಯೋಗೀ, ಜ್ಞಾನಿಭ್ಯೋಽಪಿ ಮತೋಽಧಿಕಃ, ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ" ಎಂದು ಯೋಗೇಶ್ವರನಾದ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಮನುಷ್ಯನು ಮನಸ್ಸು, ಹೃದಯ, ಶರೀರಗಳ ಸಮಾವೇಶವಾಗಿದ್ದಾನೆ. ಎಂದರೆ ಆಲೋಚನೆ, ವೇದನೆ, ಕ್ರಿಯೆ—ಈ ಮೂರೂ ಆತನಲ್ಲಿ ಕೂಡಿವೆ. ಆಲೋಚನೆಯ ಮಾರ್ಗವು ಜ್ಞಾನಯೋಗ; ವೇದನೆಯ ಮಾರ್ಗವು ಭಕ್ತಿಯೋಗ; ಕ್ರಿಯೆಯ ಮಾರ್ಗವು ಕರ್ಮಯೋಗ. ಪರಮಹಂಸರು ಸರ್ವಧರ್ಮಗಳ ಸಮನ್ವಯವನ್ನು ಬೋಧಿಸಿದಂತೆ ಸರ್ವಯೋಗಗಳ ಸಮನ್ವಯವನ್ನೂ ಬೋಧಿಸಿದ್ದಾರೆ. ಜ್ಞಾನಮಾರ್ಗವೊಂದರಿಂದಲೇ ಮನುಷ್ಯನು ಶುಷ್ಕನಾಗಬಹುದು; ಭಕ್ತಿಮಾರ್ಗವೊಂದನ್ನೇ ಹಿಡಿದರೆ ದುರ್ಬಲಚಿತ್ತನಾಗಿ ಕಂಡದ್ದಕ್ಕೆಲ್ಲ ಕಣ್ಣೀರು ಕರೆಯುತ್ತ ಶುದ್ಧಮೂರ್ಖನಾದರೂ ಆಗಬಹುದು; ಆಲೋಚನೆ ವೇದನೆಗಳಿಲ್ಲದ ಕರ್ಮಮಾರ್ಗವಂತೂ ಮನುಷ್ಯನನ್ನು ಯಂತ್ರವಾಗಿ ಮಾಡಿಬಿಡುತ್ತದೆ. ಆದ್ದರಿಂದ ಬುದ್ಧಿಶಕ್ತಿ, ಪ್ರೇಮಶಕ್ತಿ, ಕ್ರಿಯಾ

---

[1] ಯತ್ ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ ತಪಸ್ಯಸಿ ಕೌಂತೇಯ ತತ್ ಕುರುಷ್ವ ಮದರ್ಪಣಮ್ ||
—ಭಗವದ್ಗೀತೆ.

ಶಕ್ತಿಗಳು ಪರಸ್ಪರೋಪಜೀವಿಗಳಾಗಿ ಒಂದನ್ನೊಂದು ಕೈಬಿಡದೆ ಮುಂದು ವರಿದರೇ ಶ್ರೇಯಸ್ಸು.

ಜ್ಞಾನಭ್ರಾಂತನಾಗಿದ್ದ ಕಾಳೀಪ್ರಸಾದನು ಒಂದು ದಿನ ಗಾಳಹಾಕಿ ಮೀನು ಹಿಡಿಯುತ್ತಿದ್ದುದನ್ನು ಕಂಡು ಪರಮಹಂಸರು "ಏಕಿಷ್ಟು ಕ್ರೂರಕರ್ಮಿ ಯಾಗಿದ್ದೀಯೆ?" ಎಂದು ಪ್ರಶ್ನೆಮಾಡಿದರು. ಅದಕ್ಕೆ ಅವನು "ನಾನೇನೂ ಪಾಪ ಮಾಡುತ್ತಿಲ್ಲ. ಎಲ್ಲರಲ್ಲಿರುವುದೂ ಒಂದೇ ಆತ್ಮ; ಆತ್ಮವು ಅಚ್ಯುತ ವಾದದ್ದು. ಆದ್ದರಿಂದ ನಾನೇನೂ ಮೀನುಗಳನ್ನು ನಿಜವಾಗಿಯೂ ಕೊಲ್ಲುತ್ತಿಲ್ಲ." ಎಂದು ಶಾಸ್ತ್ರಪಾಂಡಿತ್ಯ ಪ್ರದರ್ಶನಮಾಡಿದನು. ಪರಮಹಂಸರು "ವತ್ಸಾ, ನಿನ್ನನ್ನು ನೀನೇ ವಂಚಿಸಿಕೊಳ್ಳುತ್ತಿದ್ದೀಯೆ. ಎಲ್ಲವೂ ಆತ್ಮವೆಂದು ಅರಿತ ಸಿದ್ಧನು ಅನ್ಯರನ್ನು ಎಂದಿಗೂ ಹಿಂಸಿಸಲಾರನು. ಹಾಗೆ ಮಾಡಲು ಪ್ರಯತ್ನಿಸಿದರೂ ಅವನಿಂದಾಗದು. ತನ್ನ ಹೃದಯವನ್ನು ತಾನೇ ಇರಿದುಕೊಳ್ಳುವುದಿಲ್ಲ. ಹಿಂಸೆಯ ಆಲೋಚನೆಯೂ ಅವನಿಂದ ಅಸಾಧ್ಯ." ಎಂದು ಬುದ್ಧಿ ಹೇಳಿ ಪಾಂಡಿತ್ಯದ ದುರುಪ ಯೋಗವನ್ನು ತೋರಿಸಿಕೊಟ್ಟರು. ಆದರೆ ಇನ್ನೊಂದು ಸಲ ಅತಿ ದುರ್ಬಲಹೃದಯ ನಾಗಿದ್ದ ಯೋಗೀಂದ್ರನಾಥನು ತಿಗಣೆಯನ್ನು ಕೊಲ್ಲದೆ ಬಿಟ್ಟುಬಿಡಲು ಹೃದಯ ದೌರ್ಬಲ್ಯವು ಕರುಣೆಯ ಚಿಹ್ನೆಯಲ್ಲ ಎಂದು ಎಚ್ಚರಿಕೆ ಕೊಟ್ಟರು.

ಶಾಸ್ತ್ರಜ್ಞಾನದ ತಪ್ಪುತಿಳಿವಳಿಕೆಯಿಂದ ಆಗುವ ಪ್ರಮಾದವನ್ನು ಸೂಚಿ ಸಲು ಒಂದು ಕಥೆ ಹೇಳಿದ್ದಾರೆ:

ಒಂದು ವನದಲ್ಲಿ ಸಾಧುವೊಬ್ಬನು ಆಶ್ರಮ ಮಾಡಿಕೊಂಡಿದ್ದನು. ಆತನಿಗೆ ಅನೇಕ ಶಿಷ್ಯರಿದ್ದರು. ಗುರು ಒಂದು ದಿನ ಶಿಷ್ಯರಿಗೆ ತತ್ತ್ವಬೋಧೆ ಮಾಡುತ್ತ "ಸರ್ವವೂ ಬ್ರಹ್ಮ. ಆದ್ದರಿಂದ ಪ್ರತಿಯೊಂದು ವಸ್ತುವನ್ನೂ ಬ್ರಹ್ಮವೆಂದೇ ತಿಳಿದು ನಮಸ್ಕಾರಮಾಡಬೇಕು." ಎಂದು ಹೇಳಿದನು. ಉಪದೇಶವಾದ ತರು ವಾಯ ಶಿಷ್ಯರಲ್ಲಿ ಕೆಲವರು ಸಮಿತ್ತುಗಳನ್ನು ಆಯ್ದು ತರಲೆಂದು ಹೊರಗೆ ಹೋದರು. ಇದ್ದಕ್ಕಿದ್ದ ಹಾಗೆ "ದಾರಿಬಿಡಿ! ದಾರಿಬಿಡಿ!" ಎಂಬ ಸದ್ದು ಕೇಳಿಸಿತು. ತಲೆಯೆತ್ತಿ ನೋಡುತ್ತಾರೆ, ಮದಿಸಿದ ಆನೆಯೊಂದು ತಮ್ಮ ಕಡೆಗೆ ಧಾವಿಸಿ ಬರುತ್ತಿತ್ತು! ಅದರ ಮೇಲೆ ಕುಳಿತ ಮಾವಟಿಗನು ದಾರಿಯಲ್ಲಿದ್ದ ಜನ ರಿಗೆ "ದಾರಿಬಿಡಿ! ಅಪಾಯ!" ಎಂದು ಕೂಗಿ ಹೇಳುತ್ತಿದ್ದನು. ಒಬ್ಬ ಶಿಷ್ಯನು

ಹೊರತು ಉಳಿದವರೆಲ್ಲರೂ ದಾರಿಬಿಟ್ಟು ಓಡಿದರು. ನಿಂತವನು ಹೀಗೆಂದು ತರ್ಕ ಮಾಡಿದನು : ಆನೆಯೂ ಬ್ರಹ್ಮ ; ನಾನೂ ಬ್ರಹ್ಮ. ಬ್ರಹ್ಮ ಬ್ರಹ್ಮಕ್ಕೆ ಹೆದರಲೇಕೆ ? ಗುರು ಹೇಳಿದಂತೆ ಸರ್ವವೂ ಬ್ರಹ್ಮವೆಂದು ನಮಸ್ಕಾರಮಾಡಬೇಕು ಎಂದು ಆಲೋಚಿಸಿ ಕೈಮುಗಿದು ನಿಂತನು. ಆನೆ ನುಗ್ಗಿ ಬಂದಿತು. ಮಾವಟಿಗನು "ದಾರಿ ಬಿಡು, ಸಾಯುತ್ತೀಯೆ" ಎಂದು ಕೂಗಿಕೊಂಡನು. ಆದರೂ ಅವನು ಕದಲಲಿಲ್ಲ. ಆನೆ ಅವನನ್ನು ಸೊಂಡಲಿನಿಂದ ಹಿಡಿದು, ದೂರ ಎಸೆದು, ಮುಂದೆ ನುಗ್ಗಿ ನಡೆಯಿತು. ಪಾಪ, ಶಿಷ್ಯನ ಮೈಯೆಲ್ಲಾ ನುಗ್ಗುನುರಿಯಾಗಿ ಜ್ಞಾನ ತಪ್ಪಿ ರಕ್ತಮಯವಾಗಿ ಬಿದ್ದನು. ಗುರುಗಳಿಗೆ ಈ ಸುದ್ದಿ ಮುಟ್ಟಲು ಅವರು ಶಿಷ್ಯಸಮೇತರಾಗಿ ಅಲ್ಲಿಗೆ ಬಂದು ಜ್ಞಾನತಪ್ಪಿಹೋಗಿದ್ದ ಶಿಷ್ಯನನ್ನು ಎತ್ತಿ ಕೊಂಡುಹೋಗಿ ಶುಶ್ರೂಷೆಮಾಡಿದರು. ಸ್ವಲ್ಪಹೊತ್ತಿನ ಮೇಲೆ ಆತನಿಗೆ ಎಚ್ಚರವಾಯಿತು. ಆಗ ಗುರುಗಳು "ವತ್ಸಾ, ಅದೇಕೆ ದಾರಿಬಿಟ್ಟು ಹೋಗದೆ ಅಪಾಯಕ್ಕೆ ಗುರಿಯಾದೆ ? ಮಾವಟಿಗನು ಕೂಗಿದ್ದು ಕೇಳಿಸಲಿಲ್ಲವೇ ?" ಎಂದು ಕೇಳಲು, ಶಿಷ್ಯನೆಂದನು : "ಗುರುಗಳೇ, ಸರ್ವವೂ ಬ್ರಹ್ಮವೆಂದು ಉಪದೇಶ ಮಾಡಿದ್ದಿರಿ. ಆನೆಯನ್ನೂ ಬ್ರಹ್ಮವೆಂದು ಭಾವಿಸಿ ಅಲುಗಾಡದೆ ನಿಂತುಬಿಟ್ಟೆ." ಅದನ್ನಾಲಿಸಿ ಗುರುಗಳು ವ್ಯಥೆಯಿಂದ "ವತ್ಸಾ, ಓಡಿಬಂದುದೇನೋ ಗಜ-ಬ್ರಹ್ಮವೇ ದಿಟ. ಆದರೆ ಅದರ ಮೇಲಿದ್ದ ಮಾವಟಿಗಬ್ರಹ್ಮವು ದಾರಿಬಿಡುವಂತೆ ನಿನಗೆ ಕೂಗಿ ಹೇಳಲಿಲ್ಲವೇ ? ಸರ್ವವೂ ಬ್ರಹ್ಮವೆಂಬುದು ಸತ್ಯ. ಆದರೆ ಆನೆ ಬ್ರಹ್ಮವಾದರೆ ಮಾವಟಿಗನೂ ಬ್ರಹ್ಮವಲ್ಲವೇ ? ಮಾವಟಿಗಬ್ರಹ್ಮನ ಮಾತನ್ನೇಕೆ ಕೇಳಲಿಲ್ಲ ?" ಎಂದರು.

ಈ ಸಾಮತಿಯಲ್ಲಿ ಶಾಸ್ತ್ರಪಾಂಡಿತ್ಯವನ್ನು ವಿವೇಕಶೂನ್ಯರಾಗಿ ಉಪ ಯೋಗಿಸಿದರೆ ಎಂತಹ ಪ್ರಮಾದವಾಗುತ್ತದೆ ಎಂಬ ನೀತಿ ಎಷ್ಟು ಚೆನ್ನಾಗಿ ಒಡೆದುಮೂಡಿರುತ್ತದೆ ! ಹಾಗೆಯೇ ಇನ್ನೊಂದು ಸಾರಿ "ಹುಲಿಯಲ್ಲಿಯೂ ಕೂಡ ಭಗವಂತನಿರುವುದೇನೋ ನಿಜವಾದರೂ ನಾವು ಅದರ ಮುಂದೆ ಹೋಗಿ ಹೇಗೆ ನಿಲ್ಲಲಾಗದೋ ಆ ತೆರನಾಗಿಯೇ ಅತ್ಯಂತ ದುಷ್ಟಾತ್ಮರಲ್ಲಿಯೂ ಕೂಡ ದೇವರಿರುವುದು ಸತ್ಯವಾದರೂ ಅಂತಹರೊಡನೆ ಸಂಗ ಬೆಳೆಯಿಸುವುದು ಸರಿಯಲ್ಲ." ಎಂದು ಹೇಳಿದ್ದಾರೆ.

ಪರಮಹಂಸರು ಬರಿಯ ಶಾಸ್ತ್ರಪಾಂಡಿತ್ಯದಿಂದ ಸಂಭವಿಸುವ ಅವಿವೇಕವನ್ನು ಖಂಡಿಸಿದ್ದಾರೆಯೇ ಹೊರತು ನಿಜವಾದ ಜ್ಞಾನವನ್ನು ಖಂಡಿಸಿಲ್ಲ. ಶುದ್ಧಬುದ್ಧಿಯ ವಿಚಾರಮಾರ್ಗವು ಶ್ರೇಷ್ಠತಮವೆಂದು ಅವರ ಅಭಿಪ್ರಾಯ. ಮತಿ ಸರ್ವೋತ್ಕೃಷ್ಟವಾದ ಆಯುಧ. ನಿಜವಾದ ಭಕ್ತಿ ಜ್ಞಾನಮಿಶ್ರವಾಗಿರಬೇಕು. ಮತಿಹೀನವಾದ ಭಕ್ತಿ ದುಷ್ಪರಿಣಾಮಕಾರಿ. ವಿವೇಕ ವಿಚಾರ ವಿರಹಿತವಾದ ಬುದ್ಧಿವಿಹೀನತೆ, ಚಿತ್ತೋನ್ಮಾದ, ಹೃದಯೋದ್ರೇಕ ಅಥವಾ ಸ್ವಮತಭ್ರಾಂತಿಗೆ ಧರ್ಮಾವೇಶವೆಂದೂ ಶ್ರುತಿಭಕ್ತಿಯೆಂದೂ ಅಂತಃಸ್ಫೂರ್ತಿಯೆಂದೂ ಅಥವಾ ಈಶ್ವರವಾಣಿಯೆಂದೂ ಹೆಸರಿಟ್ಟುಕೊಂಡು ಮಂದಮತಿಗಳನೇಕರು ಮತದ ಹೆಸರಿನಲ್ಲಿಯೂ ದೇವರ ಹೆಸರಿನಲ್ಲಿಯೂ ಧರ್ಮದ ಹೆಸರಿನಲ್ಲಿಯೂ ನಾಗರಿಕತೆಗೆ ಹಾನಿಕರವಾದ ಅನೇಕ ಮಹಾಪರಾಧಗಳನ್ನು ಹಿಂದೆ ಮಾಡಿರುತ್ತಾರೆ; ಇಂದೂ ಮಾಡುತ್ತಿದ್ದಾರೆ; ಸನ್ನಿವೇಶವನ್ನು ಪರೀಕ್ಷಿಸಿದರೆ ಮುಂದೆಯೂ ಮಾಡುತ್ತಾರೆಂದು ತೋರುತ್ತದೆ. ಮನುಷ್ಯನು ಸಾಧಾರಣವಾಗಿ ರಾಗಜೀವಿ. ಹೃದಯವು ಪ್ರೇರಿಸಿದಂತೆ ಕೆಲಸಮಾಡುವವರೇ ಬಹಳ ಮಂದಿ. ಮತಿ ವಿಚಾರಮಾಡಿ ತೋರಿಸಿದಂತೆ ಕೆಲಸಮಾಡುವವರು ಅತಿ ವಿರಳ. ಅವಿವೇಕಕ್ಕೂ ಭಕ್ತಿಗೂ ಕೆಲವು ವೇಳೆ ಭೇದವೇ ಇರುವುದಿಲ್ಲ. ಯೆಹೂದ್ಯರ ಶ್ರುತಿಮತಭಕ್ತಿಯಿಂದಲ್ಲವೇ ಯೇಸು ಕ್ರಿಸ್ತನು ಶಿಲುಬೆಗೇರಿದುದು? ಗ್ರೀಕ್ ಜನರ ಮತಭ್ರಾಂತಿಯಿಂದಲ್ಲವೇ ಮತಿಯನ್ನೇ ಅನುಸರಿಸಿದ ಮಹಾಜ್ಞಾನಿ ಸಾಕ್ರೆಟೀಸನು ವಿಷಪಾನಮಾಡಿ ಮಡಿಯಬೇಕಾದುದು? ಕ್ರೈಸ್ತರ ಬೈಬಲ್ ಭಕ್ತಿಯಿಂದಲ್ಲವೇ ನೂತನ ಸತ್ಯಗಳನ್ನು ಕಂಡುಹಿಡಿದ ವಿಜ್ಞಾನಶಾಸ್ತ್ರಜ್ಞರು ಜೀವಸಹಿತ ಅಗ್ನಿಸಂಸ್ಕಾರಹೊಂದಬೇಕಾದುದು? ಭರತಖಂಡದಲ್ಲಿಯೂ ಕೂಡ ವಿವೇಕಹೀನರೂ ಸ್ವಾರ್ಥಪರರೂ ಸಂಪ್ರದಾಯಶರಣರೂ ಆದ "ವೈದಿಕ"ರ ಸಂಕುಚಿತಭಾವ ಮೂಲವಾದ ಧರ್ಮಶಾಸ್ತ್ರದಾಸ್ಯದಿಂದಲ್ಲವೇ ಸಹಸ್ರಾರು ಅಮೃತ ಪುತ್ರ ಸಮಾನ ಮಾನವರು ಪಶುಗಳಿಗಿಂತಲೂ ನೀಚವೆಂದು ಪರಿಗಣಿತರಾಗಿ ಅಂತ್ಯಜರಾಗಿರುವುದು? ಸರ್ವಮಾನವ ಭ್ರಾತೃತ್ವವನ್ನು ಸಾರುವ ಮುಸಲ್ಮಾನರೂ ಜಗದೀಶ್ವರನ ಹೆಸರಿನಿಂದಲ್ಲವೇ ಕಾಫರನ ಕೊಲೆ ಸ್ವರ್ಗದಾಯಕವೆಂದು ತಿಳಿದಿರುವುದು? ಮನುಷ್ಯನು ಬುದ್ಧಿಗೆ ಸ್ವಲ್ಪ ಪ್ರಾಧಾನ್ಯ

ಕೊಟ್ಟಿದ್ದರೆ ಅಂಧಶ್ರದ್ಧೆಯಿಂದ ಜರುಗುವ ಇಂತಹ ಅನಾಹುತಗಳು ಬಹು ಮಟ್ಟಿಗೆ ಕಡಮೆಯಾಗುತ್ತಿದ್ದುವು. ಈಶರಾಜ್ಯಕ್ಕೆ ಈಶಭಕ್ತಿಯೇ ಕಂಟಕ ವಾಗಿರುವುದು ಶೋಚನೀಯ ವಿಷಯವಾಗಿದೆ! ಇದನ್ನು ಚೆನ್ನಾಗಿ ಮನಗಂಡ ಶ್ರೀರಾಮಕೃಷ್ಣರು ವಿಚಾರವಿಲ್ಲದ ಭಕ್ತಿ ವಿನಾಶಕಾರಿಯಾದುದೆಂದು ಸಾರಿ ದ್ದಾರೆ.

ವಿಚಾರವಿಲ್ಲದ ಭಕ್ತಿ ಸಮಷ್ಟಿದೃಷ್ಟಿಯಿಂದ ಮಾತ್ರವಲ್ಲದೆ ವ್ಯಷ್ಟಿದೃಷ್ಟಿ ಯಿಂದಲೂ ಹಾನಿಕರವಾದುದು. ವೇದವಾಗಲಿ ಶಾಸ್ತ್ರವಾಗಲಿ, ಗುರುವಾಗಲಿ ಅವತಾರವಾಗಲಿ, ಯಾರೇ ಆಗಲಿ ಹೇಳಿದ ವಾಕ್ಯಗಳನ್ನು ವಿಮರ್ಶೆಮಾಡುವ ಹಕ್ಕು ಮಾನವನದಾಗಿದೆ. ಹಾಗಲ್ಲದಿದ್ದರೆ ಆತನಿಗೆ ಮಿದುಳು ಬೇಕಿರಲಿಲ್ಲ; ಬೆನ್ನು ಮೂಳೆಯೊಂದೇ ಸಾಕಿತ್ತು. ಆಚಾರ್ಯರಲ್ಲಿಯೂ ಕೂಡ ಮೇಧಾವಿಗಳಾದ ಕೆಲ ವರು ಶಬ್ದಪ್ರಾಮಾಣ್ಯವನ್ನು ತುದಿಗೆ ಹಾಕಿದ್ದಾರೆ. ಭಗವಾನ್ ಶ್ರೀಕೃಷ್ಣನೂ ಕೂಡ ಉತ್ತಮಪುರುಷ ಏಕವಚನದ ವಾಣಿಯಿಂದ ಅಧಿಕಾರಯುಕ್ತವಾಗಿ ಪಾರ್ಥನಿಗೆ ಭಗವದ್ಗೀತೆಯನ್ನು ಬೋಧಿಸಿ ತುದಿಯಲ್ಲಿ "ಇತಿ ತೇ ಜ್ಞಾನ ಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ | ವಿಮೃಶ್ಯೈತದಶೇಷೇಣ ಯಥೇ ಚ್ಛಸಿ ತಥಾ ಕುರು ||—ಇಂತು ರಹಸ್ಯಕ್ಕಿಂತಲೂ ರಹಸ್ಯವಾದ ಜ್ಞಾನವನ್ನು ನಾನು ನಿನಗೆ ತಿಳಿಸಿದ್ದೇನೆ; ಅದನ್ನು ಕೂಲಂಕಷವಾಗಿ ವಿಮರ್ಶೆಮಾಡಿ ಸೂಕ್ತ ತೋರಿದಂತೆ ವರ್ತಿಸು!" ಎಂದು ತನ್ನ ಮಹಾವಾಣಿಯನ್ನು ಕೂಡ ವಿಚಾರದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸುವಂತೆ ಹೇಳಿದ್ದಾನೆ. ಅಂತೆಯೇ ಪರಮಹಂಸರೂ ತಮ್ಮ ಅನುಭವಗಳನ್ನು ಅಂಧಶ್ರದ್ಧೆಯಿಂದ ಅನುಸರಿಸುವ ಶಿಷ್ಯರನ್ನು ಬಿಟ್ಟು ತೀಕ್ಷ್ಣಬುದ್ಧಿಯಿಂದ ಪರೀಕ್ಷಿಸುವ ಶಿಷ್ಯರನ್ನೇ ಬಯಸಿದರೆಂದು ಹಿಂದೆಯೇ ಹೇಳಿ ದ್ದೇವೆ. ಆದ್ದರಿಂದ ಕಂಡ ಕಂಡ ಪುರೋಹಿತರ ಕುಜ್ಞಾನಜನ್ಯವಾದ ಗೊಡ್ಡು ಹರಟೆಗಳನ್ನು ವೇದವಾಕ್ಯವೆಂದು ನಂಬಿದರೆ ಅನರ್ಥಕರವಾಗುತ್ತದೆ. ಎಷ್ಟೋ ಜನರು ಮೂರ್ಛೆರೋಗ, ನರಗಳ ಜಾಡ್ಯ, ಎದೆಗೇಡಿತನ ಮೊದಲಾದ ರೋಗ ರುಜೆಗಳನ್ನು ಈಶ್ವರಭಕ್ತಿಯಿಂದ ಪ್ರಾಪ್ತವಾದ ಮಹಾಭಾವಗಳೆಂದು ಭ್ರಮಿಸಿ ಆರಾಧಿಸುತ್ತಿದ್ದಾರೆ. ವೈದ್ಯರ ಔಷಧಿಗಳಿಂದ ಸುಲಭವಾಗಿ ಗುಣವಾಗುವ ಜಾಡ್ಯಗಳನ್ನು ದೇವರಿಗೆ ಕಾಣಿಕೆ ಕಟ್ಟಿ ಅಥವಾ ಪೂಜಾರಿಗಳಿಗೆ ದುಡ್ಡು ಕೊಟ್ಟು

ಉಲ್ಬಣಾವಸ್ಥೆಗೆ ಬರುವಂತೆ ಮಾಡಿಕೊಳ್ಳುತ್ತಾರೆ. ಮತ್ತೆ ಕೆಲವರು ಭಕ್ತಿಯ ಹೆಸರಿನಲ್ಲಿ ಶುದ್ಧಮೂರ್ಖರಾಗುತ್ತಾರೆ. ವ್ಯವಹಾರದ ಜೀವನದಲ್ಲಿ ಪೆದ್ದು ಪೆದ್ದಾಗಿ ವರ್ತಿಸುವುದು ಅಲೌಕಿಕ ಭಕ್ತಿಯ ಮತ್ತು ಧರ್ಮಜೀವನದ ಚಿಹ್ನೆಗಳೆಂದು ತಿಳಿದು ಮೋಸಹೋಗುತ್ತಾರೆ. ಕೆಲವರಿಗಂತೂ ಅಜಾಗರೂಕತೆಯೇ ಉತ್ತಮ ಜೀವನದ ಲಕ್ಷಣವಾಗಿ ಹೋಗಿದೆ! ಇಂತಹ ಶೋಚನೀಯ ಸ್ಥಿತಿಯನ್ನು ಪರಮಹಂಸರು ಉಗ್ರವಾಗಿ ಖಂಡಿಸಿದ್ದಾರೆ.

ಒಂದು ದಿನ ಶಿಷ್ಯನಾದ ಯೋಗೀಂದ್ರನಾಥನು ಗುರುದೇವನಿಗಾಗಿ ಒಂದು ತಟ್ಟೆಯನ್ನು ಕೊಂಡುಕೊಂಡು ಬರಲು ಪೇಟೆಗೆ ಹೋದನು. ಆತನದು ಸ್ವಭಾವತಃ ಮೃದುಹೃದಯವಾಗಿತ್ತು. ಜನರೆಲ್ಲರೂ ತನ್ನಂತೆಯೇ ಮಹಾಭಕ್ತರೆಂದು ತಿಳಿದಿದ್ದನು. ಅಂಗಡಿಗೆ ಹೋಗಿ ಮಾರುವನ ಧರ್ಮಬುದ್ಧಿಗೆ ಅಹವಾಲು ಮಾಡಿ ಒಂದು ಒಳ್ಳೆಯ ತಟ್ಟೆಯನ್ನು ಕೊಡುವಂತೆ ಪ್ರಾರ್ಥಿಸಿ, ಅವನು ಕೊಟ್ಟುದನ್ನು ತೆಗೆದುಕೊಂಡು ಬಂದನು. ಕಡೆಗೆ ನೋಡುವಲ್ಲಿ ಆ ತಟ್ಟೆ ಬಿರುಕು ಬಿಟ್ಟಿತ್ತು! ಪರಮಹಂಸರು "ಭಕ್ತನಾಗು ಎಂದರೆ ಮೂರ್ಖನಾಗಬೇಕೇ? ಹಣಸಂಪಾದನೆಗೆಂದು ವ್ಯಾಪಾರ ಮಾಡುವವನು ಧರ್ಮಾಧರ್ಮಗಳನ್ನು ನೋಡುತ್ತಾನೆಯೇ? ನೀನು ಅವನನ್ನು ನಂಬಿದ್ದು ಮುಟ್ಟಾಳ ಕೆಲಸ! ತಟ್ಟೆಯನ್ನು ಚೆನ್ನಾಗಿ ಪರೀಕ್ಷಿಸಿ ಕೊಂಡುಕೊಳ್ಳಬೇಕಾಗಿತ್ತು. ಮುಂದೆಯಾದರೂ ಹೀಗೆ ಮೋಸಹೋದೀಯೆ! ಎಚ್ಚರಿಕೆ! ಏನಾದರೂ ಕೊಂಡುಕೊಳ್ಳಬೇಕಾದರೆ ಮೊದಲು ನಾಲ್ಕೈದು ಕಡೆ ಅದರ ಬೆಲೆಯನ್ನು ವಿಚಾರಿಸಿ, ಪದಾರ್ಥವನ್ನು ಚೆನ್ನಾಗಿ ಪರೀಕ್ಷಿಸಿ, ಚೌಕಾಸಿಮಾಡಿ ಕೊಂಡುಕೊಳ್ಳಬೇಕು. ಧರ್ಮಶ್ರವಣ ಮಾಡಿಸಿ ಕೇಳಿದಷ್ಟು ಬೆಲೆಕೊಟ್ಟು ಒಡಕಲು ಬಿರುಕಲನ್ನು ಕೊಂಡು ಪೆಚ್ಚಾಗಬಾರದು. ಸಿಕ್ಕುವುದಾದರೆ ಕೊಸರನ್ನು ಕೂಡ ಬಿಡಬಾರದು!" ಎಂದು ಬುದ್ಧಿಹೇಳಿ ಭರ್ತ್ಸನೆಮಾಡಿದರು. ಬಹುಶಃ ಅರ್ಧಕ್ಷಣದ ಹಿಂದೆ ಸಮಾಧಿಮಗ್ನನಾಗಿದ್ದ ಗುರುದೇವನ ಬಾಯಲ್ಲಿ ಇಂತಹ ಲೋಕವ್ಯವಹಾರದ ವಚನಗಳು ಬಂದುದು ಸೋಜಿಗವಾಗಿದೆ! ಆದರೂ ಅದು ಅವರ ಸರ್ವತೋಮುಖವಾದ ವಿಶಾಲ ದೃಷ್ಟಿಗೆ ಸಾಕ್ಷಿಯಾಗಿದೆ.

ಇನ್ನೊಂದು ಸಾರಿ ಯೋಗೀಂದ್ರನಾಥನು ಗುರುನಿಂದೆಯನ್ನು ಕೇಳಿಯೂ

ಸುಮ್ಮನಿದ್ದುದನ್ನು ತಿಳಿದು ಶ್ರೀ ಗುರು "ಅವನು ನನ್ನನ್ನು ನಿಷ್ಕಾರಣವಾಗಿ
ನಿಂದಿಸಿದರೂ ನೀನು ಸುಮ್ಮನಿದ್ದುದೇಕೆ? ಗುರುನಿಂದೆ ಮಾಡಿದವನು ವಧೆಗೆ
ಅರ್ಹನೆಂದು ಶಾಸ್ತ್ರಗಳು ಹೇಳುತ್ತವೆ! ನೀನು ಮಾತ್ರ ಮಾತಿನಿಂದಲೂ ಪ್ರತಿ
ಭಟಿಸದೆ ಸುಮ್ಮನಿದ್ದೆ! ನಿನ್ನ ಪೌರುಷಕ್ಕೆ ಬೆಂಕಿಹಾಕಲಿ!" ಎಂದರಂತೆ. ಇದು
ಅತಿ ಮೃದುವಾಗಿದ್ದ ಶಿಷ್ಯನ ಎದೆಗೆ ಉಕ್ಕಿನ ಹದ ಹಾಕಲು ಹೇಳಿದ ಮಾತೆಂದು
ನಾವು ತಿಳಿಯಬೇಕು. ಏಕೆಂದರೆ, ಇನ್ನೊಂದು ಸಾರಿ ತಮ್ಮ ಶಿಷ್ಯನಾದ ನಿರಂಜನ
ಸೇನನಿಗೆ ಬೇರೆ ರೀತಿಯಾಗಿ ಉಪದೇಶಮಾಡಿದರು. ನಿರಂಜನನು ಭೀಮಕಾಯನೂ
ರಾಜಸಿಕ ಗುಣಾನ್ವಿತನೂ ಆಗಿದ್ದನು. ಒಂದು ಸಾರಿ ಅವನು ದೋಣಿಯಲ್ಲಿ
ಕುಳಿತು ದಕ್ಷಿಣೇಶ್ವರಕ್ಕೆ ಬರುತ್ತಿದ್ದಾಗ ದೋಣಿಯಲ್ಲಿದ್ದ ಇತರ ಜನರು ಪರಮ
ಹಂಸರ ಮೇಲೆ ಇಲ್ಲದ ಸಲ್ಲದ ದೋಷಾರೋಪಣೆಮಾಡಿ ನಿಂದಿಸಿದರು. ಅದನ್ನು
ಕೇಳಿ ನಿರಂಜನನು ಉಗ್ರಮೂರ್ತಿಯಾಗಿ ಗರ್ಜಿಸುತ್ತ ದೋಣಿಯ ತುದಿಗೆ
ಹೋಗಿ, ಅದರ ಎರಡು ಪಕ್ಕಗಳ ಮೇಲೆ ತನ್ನೆರಡು ಕಾಲುಗಳನ್ನಿಟ್ಟು, ದೋಣಿ
ಮುಳುಗುವ ರೀತಿಯಲ್ಲಿ ಬಲವಾಗಿ ಜಗ್ಗಿಸುತ್ತ "ನಿಮಗೆಲ್ಲ ಇಲ್ಲಿಯೇ ಗಂಗೆಯಲ್ಲಿ
ಜಲಸಮಾಧಿ ಮಾಡಿಬಿಡುತ್ತೇನೆ. ನೀವು ಮಾಡಿದ ನಿಂದೆಯ ಪಾಪಕ್ಕೆ ಅದೇ
ಪ್ರಾಯಶ್ಚಿತ್ತ!" ಎಂದು ಕೂಗಿ, ಕೆಲಸಕ್ಕೆ ಪ್ರಾರಂಭಿಸಿದನು. ಸಣ್ಣ ದೋಣಿ
ಇನ್ನೇನು ಮುಳುಗಬೇಕು! ಅಷ್ಟರಲ್ಲಿ ಜನರೆಲ್ಲ ಆ ತಾಂಡವಮೂರ್ತಿಯ ಮಹಾ
ಶರೀರವನ್ನೂ ಪ್ರಲಯ ಕೋಪವನ್ನೂ ನೋಡಿ, ಹೆದರಿ, ತಮ್ಮ ತಪ್ಪನ್ನು ಒಪ್ಪಿ
ಕೊಂಡು ಕ್ಷಮಾಪಣೆ ಬೇಡಿದರು. ಆ ಮೇಲೆ ತಾಂಡವವು ನಿಂತು, ದೋಣಿ ಸುರ
ಕ್ಷಿತವಾಗಿ ದಡ ಸೇರಿತು. ಆ ಕಥೆಯನ್ನೆಲ್ಲ ಕೇಳಿ ಶ್ರೀರಾಮಕೃಷ್ಣರು ತಮ್ಮ ಶಿಷ್ಯ
ನನ್ನು ಬಯ್ದು "ಕೋಪ ವಿಷಸದೃಶವಾದ ಮಹಾಪಾಪ! ನೀನೇಕೆ ಅದಕ್ಕೆ
ಒಳಗಾಗಬೇಕು? ಸಾತ್ತ್ವಿಕನ ಕೋಪ ನೀರಿನ ಮೇಲೆ ಎಳೆದ ಗೆರೆಯಂತೆ ಮಿಂಚಿ
ಮಾಯವಾಗುತ್ತದೆ. ಮೂರ್ಖಮಂದಿ ಏನೇನೋ ಹೇಳಿಕೊಳ್ಳುತ್ತಾರೆ, ಅದನ್ನು
ಗಣನೆಗೆ ತಂದುಕೊಳ್ಳದೆ ಬಿಟ್ಟುಬಿಡಬೇಕು. ಹಾಗೆ ಮಾಡದೆ ಜಗಳಕ್ಕೆ ಹೋದರೆ
ಜೀವಮಾನವನ್ನೆಲ್ಲ ಜಗಳದಲ್ಲಿಯೇ ಕಳೆಯಬೇಕಾಗುತ್ತದೆ. ಸ್ವಲ್ಪ ಊಹಿಸಿ
ನೋಡು, ನಿನ್ನ ಕೋಪದ ಆವೇಗದಲ್ಲಿ ಎಂತಹ ಅನಾಹುತವಾಗುತ್ತಿತ್ತು!"
ಎಂದು ಸಾತ್ವಿಕ ಹೇಳಿದರು.

ಮೇಲಿನ ದೃಷ್ಟಾಂತಗಳಿಂದ ಪರಮಹಂಸರು ಹೇಗೆ ಪೂರ್ವ ಕಾರ್ಯಗಳ ಮಧ್ಯಮಾರ್ಗವನ್ನು ತಮ್ಮ ಶಿಷ್ಯರಿಗೆ ಬೋಧಿಸಿದ್ದಾರೆ ಎಂಬುದು ಗೊತ್ತಾಗುತ್ತದೆ. ಹಾಗೆಯೇ ಹಿಂಸೆ ಅಹಿಂಸೆಗಳ ತತ್ತ್ವವನ್ನೂ ಒಂದು ಮನೋಹರವಾದ ಸಾಮ್ಯತೆಯಿಂದ ತಿಳಿಸಿದ್ದಾರೆ :

ಒಂದು ಹಾದಿಯ ಪಕ್ಕದ ಬಯಲಿನಲ್ಲಿದ್ದ ಹುತ್ತಿನಲ್ಲಿ ಸರ್ಪವೊಂದು ವಾಸವಾಗಿತ್ತು. ಅದೇ ಬಯಲಿನಲ್ಲಿ ದನಕಾಯುವ ಹುಡುಗರು ನಿತ್ಯವೂ ದನ ಮೇಯಿಸುತ್ತಿದ್ದರು. ಒಂದು ದಿನ ಸಾಧುವೊಬ್ಬನು ಆ ಮಾರ್ಗವಾಗಿ ಹೋಗುತ್ತಿದ್ದುದನ್ನು ಕಂಡು ಗೋಪಬಾಲಕರು ಕೂಗಿ ಕರೆದು ಅವನ ಬಳಿಗೆ ಓಡಿಬಂದು "ಸ್ವಾಮಿ, ಆ ದಾರಿಯಲ್ಲಿ ಹೋಗಬೇಡಿ. ಅಲ್ಲೊಂದು ಸರ್ಪವಿದೆ. ಅನೇಕರನ್ನು ಕಚ್ಚಿ ಕೊಂದಿದೆ. ತಮಗೆ ಅಪಾಯವಾದೀತು." ಎಂದರು. ಸಾಧು "ಮಕ್ಕಳಿರಾ, ಚಿಂತೆಯಿಲ್ಲ. ನನಗೆ ಮಂತ್ರಬಲವಿದೆ. ಸರ್ಪವು ನನ್ನನ್ನೇನೂ ಮಾಡಲಾರದು." ಎಂದು ಮುಂದೆ ಹೋದನು. ಸಾಧುವನ್ನು ನೋಡಿ ಸರ್ಪವು ತನ್ನ ಭಯಂಕರವಾದ ಹೆಡೆಯನ್ನು ಎತ್ತಿಕೊಂಡು ಕಚ್ಚಲೆಂದು ಓಡಿಬಂದಿತು. ಆದರೆ ಅದು ಮಂತ್ರಮುಗ್ಧವಾಗಿ ಶಕ್ತಿಗುಂದಿ ಸಾಧುವಿನ ಪಾದಗಳ ಮೇಲೆ ಬಿತ್ತು. ಸಾಧು ಅದನ್ನು ಕುರಿತು "ಮಿತ್ರನೇ, ಇತರರಿಗೆ ಅನ್ಯಾಯವಾಗಿ ಹಿಂಸೆಮಾಡುವುದೇಕೆ? ನಾನು ನಿನಗೆ ಮಂತ್ರೋಪದೇಶ ಮಾಡುತ್ತೇನೆ. ಅದನ್ನು ಜಪಿಸಿದರೆ ನಿನಗೆ ಈಶ್ವರಭಕ್ತಿ ಪ್ರಾಪ್ತವಾಗುತ್ತದೆ. ಕಡೆಗೆ ಈಶ್ವರನು ಪ್ರತ್ಯಕ್ಷನಾಗುತ್ತಾನೆ. ಹಿಂಸಾಬುದ್ಧಿಯೂ ಸಂಪೂರ್ಣವಾಗಿ ತೊಲಗುತ್ತದೆ." ಎಂದು ಹೇಳಿ, ಹಾವಿನ ಕಿವಿಯಲ್ಲಿ ಮಂತ್ರೋಪದೇಶಮಾಡಿದನು. ಸರ್ಪವು ನಮಸ್ಕಾರ ಮಾಡಿ "ಗುರುವೇ, ನನ್ನ ಆತ್ಮೋದ್ಧಾರವಾಗಬೇಕಾದರೆ ನಾನೇನು ಮಾಡಬೇಕು?" ಎಂದು ಕೇಳಿತು. ಸಾಧು "ಮಂತ್ರವನ್ನು ಜಪಿಸು. ಯಾವ ಜೀವಿಗೂ ಹಿಂಸೆ ಮಾಡಬೇಡ. ನಾನು ಹಿಂದಿರುಗಿ ಬಂದು ಎಲ್ಲವನ್ನೂ ವಿಚಾರಿಸಿ ತಿಳಿಯುತ್ತೇನೆ." ಎಂದು ಹೇಳಿ ಹೊರಟುಹೋದನು. ಅಂದಿನಿಂದ ಎಲ್ಲರಿಗೂ ಸರ್ಪದ ಕಾಟ ತಪ್ಪಿತು. ಹುಡುಗರೆಲ್ಲರೂ ಸರ್ಪವು ಮುದಿಯಾಯಿತು, ಇನ್ನೇನು ಅದರ ವಿಷವೆಲ್ಲ ಹೋಯಿತು ಎಂದೆಣಿಸಿ, ಅದನ್ನು ಪೀಡಿಸಲು ಪ್ರಾರಂಭಮಾಡಿದರು. ಮೊದಮೊದಲು ದೂರದಿಂದ ಕಲ್ಲು ಎಸೆದು ನೋಡಿದರು. ಹಾವು ಎಂದಿ

ನಂತೆ ಹೆಡೆಯೆತ್ತಿ ಅಟ್ಟಿಸಿಕೊಂಡು ಬರದೆ ಸಾಧುವಾಗಿತ್ತು. ಹೀಗಿರಲು ಬಂದು ದಿನ ಧೂರ್ತ ಬಾಲಕನೊಬ್ಬನು ಸರ್ಪದ ಬಾಲವನ್ನು ಹಿಡಿದುಕೊಂಡು ತಲೆಯ ಮೇಲೆ ಗಿರ್ರನೆ ತಿರುಗಿಸಿ ಬಂದು ಬಂಡೆಗೆ ಅಪ್ಪಳಿಸಿಬಿಟ್ಟನು. ಹಾವು ರಕ್ತವನ್ನು ಕಾರುತ್ತ ಮೈಮರೆಯಲು, ಸತ್ತುಹೋಯಿತೆಂದು ತಿಳಿದು, ಹುಡುಗರು ಬಿಟ್ಟು ಹೋದರು. ರಾತ್ರಿಯಾಯಿತು; ತಂಗಾಳಿ ಬೀಸಿತು; ಹಾವು ಮೈತಿಳಿಯಿತು. ನುಗ್ಗುನುರಿಯಾದ ದೇಹವನ್ನು ಮೆಲ್ಲಮೆಲ್ಲಗೆ ಎಳೆದುಕೊಂಡು ಹುತ್ತನ್ನು ಸೇರಿತು. ಕೆಲವು ದಿನ ನೋವಿಗೆ ನರಳುತ್ತ ಆಹಾರ ಸಂಪಾದನೆಮಾಡುವುದಕ್ಕೂ ತ್ರಾಣವಿಲ್ಲದೆ ಅಸ್ಥಿಪಂಜರವಾಯಿತು. ಆ ಮೇಲೆ ಹುಡುಗರಿಗೆ ಬೆದರಿ ಹಗಲು ಹೊರಗೆ ಹೋಗುತ್ತಿರಲಿಲ್ಲ. ರಾತ್ರಿ ಸಂಚಾರ ಹೊರಟು ಅಹಿಂಸಾವ್ರತವನ್ನು ಕೈಕೊಂಡದ್ದರಿಂದ ಹುಲ್ಲು ತರಗು ಕಸಕಡ್ಡಿಗಳನ್ನು ತಿನ್ನುತ್ತಿತ್ತು. ಇಂತಿರಲು ಕೆಲವು ದಿನಗಳ ಮೇಲೆ ಸಾಧು ಆ ಮಾರ್ಗವಾಗಿ ಹಿಂದಿರುಗಿ ಬಂದನು. ತನ್ನ ಸರ್ಪಶಿಷ್ಯನನ್ನು ನೋಡಲೆಂದು ಅಲ್ಲೆಲ್ಲಾ ಹುಡುಕಿದನು. ಎಲ್ಲಿಯೂ ಕಾಣಲಿಲ್ಲ. ದನಗಾಹಿ ಹುಡುಗರನ್ನು ಕೇಳಿದನು. ಅವರು ಅದು ಸತ್ತುಹೋಯಿತೆಂದು ಹೇಳಿದರು. ಸಾಧುವಿಗೆ ಆಶ್ಚರ್ಯವಾಯಿತು. ದೇವರು ಪ್ರತ್ಯಕ್ಷನಾಗದೆ, ಜೀವನ ಸಮಸ್ಯೆ ಬಗೆಹರಿಯದೆ ಹಾವು ಸಾಯಲಾರದೆಂದು ಆತನಿಗೆ ಗೊತ್ತಿತ್ತು. ಆದ್ದರಿಂದ ಪುನಃ ಅಲ್ಲೆಲ್ಲಾ ಹುಡುಕಿ ಕಡೆಗೆ ಕೂಗಿ ಕರೆದನು. ಸರ್ಪವು ಹುತ್ತಿನಿಂದ ಹೊರಗೆ ಬಂದು ಗುರುವಿಗೆ ನಮಸ್ಕಾರ ಮಾಡಿತು.

ಸಾಧು: "ಕ್ಷೇಮವೇ?" ಎಂದು ಕೇಳಿದನು.

ಸರ್ಪವು: "ಗುರುವೇ, ದೇವರ ದಯೆಯಿಂದ ಕ್ಷೇಮವಾಗಿದ್ದೇನೆ." ಎಂದಿತು.

ಸಾಧು: ಹಾಗಾದರೆ, ಇದೇನು? ಎಲುಬು ಚರ್ಮ ಎರಡೇ ಇವೆಯಲ್ಲಾ ನಿನ್ನ ಮೈಯಲ್ಲಿ? ಏನಾಯಿತು?

ಸರ್ಪ: ಗುರುವೇ, ತಮ್ಮ ಆಜ್ಞೆಯಂತೆ ನಾನು ಅಹಿಂಸಾವ್ರತವನ್ನು ಕೈಕೊಂಡು ಕಸಕಡ್ಡಿ ತರಗೆಲೆಗಳನ್ನು ತಿಂದು ಬದುಕುತ್ತಿದ್ದೇನೆ. ಆದ್ದರಿಂದ ದೇಹವು ಕೃಶವಾಗಿರಬಹುದು.

ಸಾಧು: ಇಲ್ಲ; ಬರಿಯ ಆಹಾರ ವ್ಯತ್ಯಾಸದಿಂದ ಹೀಗಾದಂತಿಲ್ಲ. ಇನ್ನೇನೋ ನಡೆದಿರಬೇಕು, ಹೇಳು!

ಸರ್ಪ: ಹೌದು, ಹೌದು ಮರೆತಿದ್ದೆ. ಈಗ ನೆನಪಿಗೆ ಬಂತು. ಒಂದು ದಿನ ದನಕಾಯುವ ಹುಡುಗರು ನನ್ನೊಡನೆ ಸ್ವಲ್ಪ ನಿಷ್ಕರುಣೆಯಿಂದ ವರ್ತಿಸಿಬಿಟ್ಟರು. ನನ್ನನ್ನು ಬಾಲ ಹಿಡಿದು ಗಿರ್ರನೆ ಸುತ್ತಿಸಿ ಕಲ್ಲಿಗೆ ಅಪ್ಪಳಿಸಿಬಿಟ್ಟರು. ಪಾಪ, ಮಕ್ಕಳು, ಅವರಿಗೇನು ಗೊತ್ತು? ನಾನು ಕಚ್ಚುವುದಿಲ್ಲ; ಅಹಿಂಸಾವ್ರತವನ್ನು ಕೈಕೊಂಡಿದ್ದೇನೆ ಎಂದು ಅವರಿಗೆ ತಿಳಿಯುವುದಾದರೂ ಹೇಗೆ?

ಸಾಧು. ಅಯ್ಯೋ ಪೆಚ್ಚೇ! ಹುಚ್ಚೇ! ಅವರು ನಿನ್ನನ್ನು ಪೀಡಿಸದಂತೆ ನೋಡಿಕೊಳ್ಳುವ ಉಪಾಯ ಗೊತ್ತಾಗಲಿಲ್ಲವೇ ನಿನಗೆ? ಎಂತಹ ಮೂರ್ಖತನ ಮಾಡಿಬಿಟ್ಟೆ? ಯಾರನ್ನೂ ಹಿಂಸೆಮಾಡಬೇಡ ಎಂದರೆ ಕಚ್ಚಿ ಕೊಲ್ಲಬೇಡ ಎಂದೆನಷ್ಟೆ! ಬುಸ್ಸೆಂದು ಹೆದರಿಸಿ ಓಡಿಸಬೇಡ ಎಂದೆನೇ? ನೀನು ಸುಮ್ಮನೆ ಬುಸ್ ಎಂದಿದ್ದರೆ ಸಾಕಾಗಿತ್ತು, ಹುಡುಗರು ನಿನ್ನ ಗೋಜಿಗೇ ಬರುತ್ತಿರಲಿಲ್ಲ.

ಈ ಸಾಮತಿಯನ್ನು ಹೇಳಿ ಪರಮಹಂಸರು ತಮ್ಮ ಶಿಷ್ಯರಿಗೆ "ಈ ಪ್ರಪಂಚ ದಲ್ಲಿ ಬದುಕುವವನು ಯಾರಿಗೂ ಹಿಂಸೆಮಾಡಬಾರದು. ಆದರೆ ದುಷ್ಟರನ್ನು ದೂರವಿಡುವುದಕ್ಕಾಗಿ ಹಿಂಸೆಯನ್ನು ಪ್ರತಿಭಟಿಸುವಂತೆ ನಟಿಸಬೇಕು. ಆದರೆ ಹಿಂಸೆಗೆ ಪ್ರತಿಯಾಗಿ ಹಿಂಸೆಮಾಡದಂತೆ ಎಚ್ಚರಿಕೆಯಿಂದಿರಬೇಕು." ಎಂದು ಬೋಧಿಸಿದ್ದಾರೆ.

ಇಂತಹ ನೂರಾರು ಸಾಮತಿಗಳಿಂದಲೂ ತತ್ತ್ವೋಪದೇಶಗಳಿಂದಲೂ ತಮ್ಮ ಸ್ವಂತ ಜೀವನದ ಉದಾಹರಣೆಗಳಿಂದಲೂ ಪರಮಹಂಸರು ಗರುಡಿ ಯಾಚಾರ್ಯನಂತೆ ತಮ್ಮ ಶಿಷ್ಯರನ್ನು ತರಬೇತುಮಾಡಿದರು. ಅದರ ಪರಿ ಣಾಮವನ್ನು ಮುಂದೆ ಸ್ವಾಮಿ ವಿವೇಕಾನಂದರ ಜೀವನ ಮತ್ತು ಸಂದೇಶಗಳ ಲ್ಲಿಯೂ ಶ್ರೀರಾಮಕೃಷ್ಣ ಮಹಾಸಂಘದ ಕಾರ್ಯಕಲಾಪಗಳಲ್ಲಿಯೂ ಕಾಣ ಲಿದ್ದೇವೆ.

# ೭. ಮಹಾ ಸಮಾಧಿ

ಮೂಡುವ ಸೂರ್ಯನಲ್ಲೊಂದು ಸರಳಸೌಂದರ್ಯವಿದೆ. ಮಧ್ಯಾಹ್ನ ಸೂರ್ಯನಲ್ಲೊಂದು ಮಹಾತೇಜಸ್ಸಿದೆ. ಸೂರ್ಯಾಸ್ತದಲ್ಲೊಂದು ಗೌರವಮಯ ಗಾಂಭೀರ್ಯವಿದೆ. ಮಹಾಪುರುಷರ ಜೀವನದಲ್ಲಿಯೂ ಅದೇ ಗುಣಗಣಗಳು ತೋರಿಬರುತ್ತವೆ. ಅವರ ಶೈಶವದಲ್ಲಿ ಮಾಧುರ್ಯವೂ ಯೌವನದಲ್ಲಿ ತಪಸ್ಸೂ ಅವಸಾನಸಮಯದಲ್ಲಿ ಕಾರುಣ್ಯವೂ ಕಂಡುಬರುತ್ತವೆ ಇದುವರೆಗೆ ಶ್ರೀರಾಮಕೃಷ್ಣ ಪರಮಹಂಸರ ಜೀವನ ಗಂಗೆಯನ್ನು ಜನ್ಮಸ್ಥಾನದಿಂದಲೂ ಅನುಸರಿಸಿ ಬಂದಿದ್ದೇವೆ. ಆ ಮಹಾನದಿಯ ಶೈಶವಕೌಮಾರ ಯೌವನಗಳನ್ನು ಮನವಾರೆ ಅವಲೋಕಿಸಿದ್ದೇವೆ. ಇನ್ನು ಸಮುದ್ರ ಬಳಿ ಸಾರುತ್ತಿದೆ. ಅದರ ಘೋಷ ದೂರದಿಂದ ಕೇಳಿಬರುತ್ತಿದೆ. ಬನ್ನಿ ; ನದಿ ಸಮುದ್ರದಲ್ಲಿ ಸಮಾಧಿ ಹೊಂದುವ ಮಹಿಮಾಮಯ ದೃಶ್ಯವನ್ನು ಸಂದರ್ಶಿಸಿ !

ತುಂಬುಹೊನಲಿನ ಗಂಗೆ ತೆರೆನಗೆಯ ಮೊರೆಯೊಡನೆ ಸಾವಧಾನವಾಗಿ ಬಿಡುವಿಲ್ಲದೆ ಹರಿಯುತ್ತಿತ್ತು. ಸೂರ್ಯೋದಯ ಸೂರ್ಯಾಸ್ತಗಳು ದಿನದಿನವೂ ದಕ್ಷಿಣೇಶ್ವರದ ಉದ್ಯಾನವೃಕ್ಷಗಳಿಗೆ ಶೋಭೆಯಿತ್ತು, ಮರೆಯಾಗುತ್ತಿದ್ದುವು. ದಿನದಿನವೂ ಪ್ರಾತಃಕಾಲ ಸಾಯಂಕಾಲಗಳಲ್ಲಿ ಗುಡಿಯ ಗಂಟೆಗಳ ಟಿಂಟಿಣಿಯೂ ಮಂಗಳಾರತಿಯ ಜ್ಯೋತಿಯೂ ಕರ್ಣನಯನಗಳಿಗೆ ಮನೋಜ್ಞವಾಗಿ ಮೆರೆದು ಹೃದಯಕ್ಕೆ ಶಾಂತಿಯನ್ನು ದಾನಮಾಡುತ್ತಿದ್ದುವು. ದಿನದಿನವೂ ಶ್ರೀರಾಮಕೃಷ್ಣರು ತಮ್ಮ ಕೊಟಡಿಯಲ್ಲಿ ನೆರೆದ ಭಕ್ತರಿಗೂ ಆಗಂತುಕರಿಗೂ ಧರ್ಮೋಪದೇಶಮಾಡುತ್ತಿದ್ದರು. ಆ ಮಾನವ ಮಹಾನದಿಯ ತೀರ್ಥಕ್ಷೇತ್ರದಲ್ಲಿ ಸ್ನಾನಮಾಡಿ ಪರಿಶುದ್ಧರಾಗಬೇಕೆಂದು ದೇಶದ ನಾನಾಭಾಗಗಳಿಂದ ನಾನಾ ಜನರು ತಂಡೋಪತಂಡವಾಗಿ ಬರುತ್ತಿದ್ದರು. ಗುರುದೇವನು ಶ್ರಮವರಿಯದೆ, ವಿಶ್ರಾಂತಿಯಿಲ್ಲದೆ ಧರ್ಮಪಿಪಾಸುಗಳ ಹೃದಯ ತೃಷ್ಣೆಯನ್ನು ತನ್ನ ವಚನಾಮೃತದಿಂದ ನೀಗಲು ಅನವರತವೂ ಸಾಹಸಮಾಡುತ್ತಿದ್ದನು. ಸಾಮತಿ, ಕಥೆ, ಹಾಸ್ಯ, ವಿನೋದ, ತತ್ತ್ವಬೋಧೆ ಮೊದಲಾದುವುಗಳಿಂದ ಕೆಲವುಸಾರಿ ಶಿಶುವಿನಂತೆಯೂ

ಕೆಲವುಸಾರಿ ಮಹಾ ಋಷಿಯಂತೆಯೂ ವರ್ತಿಸಿ ಸದಸ್ಯರಿಗೆ ಹೃದಯಭಾರ ವಾಗದಂತೆ, ಅವರ ಮನಸ್ಸಿನ ಮಾಧುರ್ಯವು ಮಾಸದಂತೆ ತತ್ತ್ವೋಪದೇಶವು ಸಾಗುತ್ತಿತ್ತು. ಆಶಾಪೂರ್ಣವಾಗಿದ್ದ ಆ ವಾಣಿಯ ಮಹಿಮೆಯಿಂದ ಜನರ ಕ್ಲೈಬ್ಯವು ತೊಲಗಿಹೋಗಿ ಅವರೆದೆಗಳಲ್ಲಿ ಧೈರ್ಯವು ಮೂಡುತ್ತಿತ್ತು.

"ಕ್ರೈಸ್ತರಲ್ಲಿ ಕೆಲವರೂ ಮತ್ತು ಬ್ರಾಹ್ಮಸಮಾಜಿಗಳೂ ಮತಧರ್ಮದ ಸಾರಾಂಶವೆಲ್ಲ ಪಾಪಭಾವದಲ್ಲಿ ಪರಿಸಮಾಪ್ತಿಯಾಗುತ್ತದೆ ಎಂದು ತಿಳಿದಿದ್ದಾರೆ. 'ಕರ್ತನೇ, ನಾನು ಪಾಪಿ! ನನ್ನ ಪಾಪವನ್ನು ಕ್ಷಮಿಸು!' ಎಂದು ಬೇಡಿದರೆ ಭಕ್ತನ ಕೆಲಸವಾಯಿತೆಂದು ತಿಳಿದಿದ್ದಾರೆ. ಆದರೆ ಧರ್ಮಪ್ರಪಂಚದಲ್ಲಿ ಪಾಪೋಹಂ ಭಾವವು ಬಹಳ ಕೀಳಾದ ಅವಸ್ಥೆ. ಪಾಪೋಹಂ ಎಂದು ಯಾವಾಗಲೂ ಹೇಳುತ್ತಿದ್ದರೆ ಮನುಷ್ಯನು ಪಾಪಿಯೇ ಆಗಿಬಿಡುತ್ತಾನೆ. ಅದಕ್ಕೆ ಬದಲಾಗಿ 'ನಾನು ಅನಂತ; ನಾನು ಅಚ್ಯುತ; ನನಗೆ ಪಾಪವಿಲ್ಲ; ನಾನು ಈಶ್ವರನ ಶಿಶು!' ಎಂದು ಹೇಳುವುದನ್ನು ಅಭ್ಯಾಸಮಾಡಿದರೆ ಮನುಷ್ಯನು ಹಾಗೆಯೇ ಆಗುತ್ತಾನೆ. ನಾನು ಗುಲಾಮನೆಂದು ಹೇಳಿಕೊಳ್ಳುವ ಮನುಷ್ಯನು ಕಡೆಗೆ ಗುಲಾಮನೇ ಆಗುತ್ತಾನೆ; ನಾನು ಮುಕ್ತನೆಂದು ಹೇಳಿಕೊಳ್ಳುವವನಿಗೆ ಮುಕ್ತಿಯೇ ಲಭಿಸುತ್ತದೆ. ಮನಸ್ಸಿನಂತೆ ಮಾಯೆ; ಮನಸ್ಸಿನಂತೆ ಮುಕ್ತಿ."

"ಬರಿಯ ವೈದಿಕ ಕರ್ಮಕ್ರಿಯೆಗಳಲ್ಲಿ ಲೋಲರಾಗಿರುವುದೂ ಒಂದು ಕಾಯಿಲೆ. ಆ ಕಾಯಿಲೆ ಹಿಡಿದವರಿಗೆ ದೇವರ ಧ್ಯಾನಮಾಡಲೂ ಸಮಯ ಸಿಕ್ಕುವುದಿಲ್ಲ."

"ಮಾನವನ ಪವಿತ್ರತೆಯಿಂದ ಕ್ಷೇತ್ರವು ಪವಿತ್ರವಾಗುತ್ತದೆ. ಹಾಗಿಲ್ಲದಿದ್ದರೆ ಕ್ಷೇತ್ರಮಾತ್ರದಿಂದ ಮನುಷ್ಯನು ಹೇಗೆ ಪವಿತ್ರನಾಗುತ್ತಾನೆ?

"ಈಶ್ವರನು ಸರ್ವವ್ಯಾಪಿ. ನಮ್ಮ ಹೃದಯದಲ್ಲಿ ಅಂತರ್ಯಾಮಿಯಾಗಿದ್ದಾನೆ. ಚೇತನಾಚೇತನ ಜಗತ್ತೆಲ್ಲವೂ ಆತನ ಕನಸು."

"ಮುಳುಗು, ಮುಳುಗು, ಮನವೇ; ಸೌಂದರ್ಯಸಾಗರದಲ್ಲಿ ಮುಳುಗು. ಸಮುದ್ರಕ್ಕಿಂತಲೂ ಅಗಾಧವಾದ ಆತ್ಮಸಮುದ್ರದಲ್ಲಿ ಮುಳುಗು. ಪ್ರೇಮರತ್ನವು ಲಭಿಸುತ್ತದೆ. . . . ಬೃಂದಾವನವು ನಿನ್ನ ಹೃದಯದಲ್ಲಿದೆ. ವಿಶ್ವಪ್ರೇಮಿಕ

ಪುರುಷನು ಅಲ್ಲಿ ವೇಣುಗಾನಮಾಡುತ್ತಿದ್ದಾನೆ. ಹೋಗಿ ಕಾಣು. ಹುಡುಕಿದರೆ ದೊರಕುವನು. ಅಲ್ಲಿ ಜ್ಞಾನದೀಪವು ಯಾವಾಗಲೂ ಉರಿಯುತ್ತಿದೆ."

"ಮಾನವ ಭ್ರಾತೃತ್ವವನ್ನು ಕುರಿತು ಸುಮ್ಮನೆ ಮಾತಾಡಿದರಾಗದು. ಅದನ್ನು ಸಾಕ್ಷಾತ್ಕಾರಮಾಡಿಕೋ. ಆ ವಾದ ಈ ವಾದಗಳನ್ನು ಕುರಿತು ಬರಿದೆ ವಾದಿಸಿ ಕಾಲ ಕಳೆಯಬೇಡ. ಸತ್ಯವಿರುವುದೊಂದೇ. ಹೊಳೆಗಳೆಲ್ಲ ಕಡಲಿಗೆ ಹರಿಯುತ್ತಿವೆ. ನೀನೂ ಹರಿ; ಇತರರನ್ನೂ ಹರಿಯಗೊಡು! ಹರಿಯುವ ನೀರೆಲ್ಲ ಒಂದಾಗಿರಲು ಎಲ್ಲವೂ ಕಡಲಿಗೆ ಹೋಗಿ ಬೀಳಲಿ!"

ಅವರ ಜೀವನದಿಯೂ ಕಡಲಿಗೆ ಸಮೀಪವಾಗುತ್ತಿತ್ತು. ಸಮೀಪಿಸಿದಂತೆಲ್ಲಾ ಅದರ ಮಹಿಮೆಯೂ ಗಾಂಭೀರ್ಯವೂ ಹೆಚ್ಚುತ್ತಿದ್ದುವು. ಮಹಾತ್ಮರ ಮಹಿಮೆ ತೋರುವುದು ಅವರ ಮರಣ ಸಮಯದಲ್ಲಿ ಎಂಬುದೊಂದು ಸುಭಾಷಿತವಾಗಿದೆ. ಅಂತೆಯೇ ಗುರುದೇವನ ಪ್ರಾಣವು ಪ್ರಾಣೇಶನಲ್ಲಿ ಮಗ್ನವಾಗುವ ಸಮಯದಲ್ಲಿ ಅತೀವ ಜಾಜ್ವಲ್ಯಮಾನವಾಗಿರುವುದನ್ನು ಕಾಣುತ್ತೇವೆ.

ಸಲಸಲವೂ ಸಮಾಧ್ಯಗ್ನಿಯ ಉರಿಯಲ್ಲಿ ಸಿಕ್ಕಿ, ಅವಿಶ್ರಾಂತವಾದ ಉಪದೇಶ, ಸಂಭಾಷಣೆ ಮತ್ತು ಭಾವಾವೇಶಗಳ ಹೊಡತಕ್ಕೆ ಜರ್ಝರಿತವಾಗಿ ಪರಮಹಂಸರ ಶರೀರವು ಮೆಲ್ಲಮೆಲ್ಲಗೆ ಶಿಥಿಲವಾಗತೊಡಗಿತು. ಒಂದೊಂದು ಸಾರಿ ಕ್ಲಾಂತಮನಸ್ಕರಾಗಿ "ಹೇ ಜಗನ್ಮಾತೆ, ಈ ಪಾಟಿ ಮಂದಿಯನ್ನೇಕೆ ಇಲ್ಲಿಗೆ ಕರೆತರುತ್ತೀಯೆ? ಅವರೋ ಒಂದು ಪಾಲು ಹಾಲಿಗೆ ಐದು ಪಾಲು ನೀರು ಸೇರಿಸಿದಂತೆ ಇದ್ದಾರೆ! ನೇತ್ರಾಗ್ನಿಯಿಂದ ಆ ನೀರನ್ನು ಬತ್ತಿಸಿ ಬತ್ತಿಸಿ ನನ್ನ ದೃಷ್ಟಿಯೇ ಮಂದವಾಗುವಂತಿದೆ. ನನ್ನ ಆರೋಗ್ಯವಂತೂ ಮಣ್ಣುಗೂಡಿದೆ. ಇನ್ನು ನನ್ನಿಂದಾಗದು. ನಿನಗೆ ಬೇಕಾದರೆ ನೀನೇ ಆ ಕೆಲಸವನ್ನು ಮಾಡಿಕೋ. ಅಯ್ಯೋ, ಈ ಒಡಕು ಮದ್ದಳೆಯನ್ನೇಕೆ ಹಗಲೆನ್ನದೆ ಇರುಳೆನ್ನದೆ ಸುಮ್ಮನೆ ಬಡಿಯುತ್ತಿದ್ದೀಯೆ? ಹೀಗೆ ಬಡಿದರೆ ಇನ್ನೆಷ್ಟು ದಿನವೆಂದು ಬಾಳೀತು!" ಎಂದು ಮೊರೆಯಿಟ್ಟು ಉತ್ತರಕ್ಷಣದಲ್ಲಿಯೇ ಲೋಕದಲ್ಲಿರುವ ದುಃಖತಾಪಗಳನ್ನು ನೆನೆದು ಮರುಗಿ "ಒಂದೇ ಒಂದು ಜೀವಕ್ಕೆ ನೆರವಾಗುವೆನಾದರೆ ಕೋಟಿಕೋಟಿ ಶುನಕ ಜನ್ಮಗಳನ್ನಾದರೂ ಎತ್ತಿ ಬರುತ್ತೇನೆ. ಇಂತಹ ಇಪ್ಪತ್ತು ಸಹಸ್ರ ಶರೀರಗಳು ಸಮೆದರೂ ಚಿಂತೆಯಿಲ್ಲ; ಒಂದು ಕ್ರಿಮಿಗೆ

ಸಹಾಯವಾದರೆ ಸಾಕು. ಒಬ್ಬನಿಗಾದರೂ ನೆರವಾದರೆ ಮಹದಾನಂದವಾಗುತ್ತದೆ.'' ಎಂದು ಹೇಳಿಕೊಳ್ಳುವರು.

ಹಗಲಿರುಳು ಮಾತಾಡಿದುದರ ಫಲವಾಗಿಯೋ ಅಥವಾ ಅನೇಕರ ಪಾಪಗಳನ್ನು ತಾವೇ ಸ್ವೀಕರಿಸಿದುದರ ಫಲವಾಗಿಯೋ ಕ್ರಿ. ಶ. ೧೮೮೫ ನೆಯ ಸಂವತ್ಸರದಲ್ಲಿ ಪರಮಹಂಸರಿಗೆ ಕಂಠರೋಗ ಪ್ರಾಪ್ತವಾಯಿತು. ವೈದ್ಯರು ಮಾತಾಡಬಾರದೆಂದೂ ಉದ್ವೇಗಕರವಾದ ಭಾವಗಳಿಗೆ ಎಡೆಗೊಡಬಾರದೆಂದೂ ಹೇಳಿದರು. ಆದರೆ ಅವರು ಬಹುದೂರದಿಂದ ತಮ್ಮೆಡೆಗೆ ಬರುತ್ತಿದ್ದ ಜನಗಳಿಗೆ ಉಪದೇಶ ಮಾಡುವುದನ್ನು ನಿಲ್ಲಿಸಲಿಲ್ಲ ; ಸಮಾಧಿಯ ಅವಸ್ಥೆಗಳಂತೂ ಹೇಳದೆ ಕೇಳದೆ ಬರುತ್ತಿದ್ದುವು. ಹೀಗಾಗಿ ರೋಗವು ವಿಷಮವಾಯಿತು. ಶಿಷ್ಯರೆಲ್ಲರೂ ಸೇರಿ ಕಲ್ಕತ್ತೆಯಲ್ಲಿ ಒಂದು ಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಗುರುದೇವನನ್ನು ಅಲ್ಲಿಗೆ ಸಾಗಿಸಿದರು. ನಗರದ ಸುಪ್ರಸಿದ್ಧ ವೈದ್ಯನಾಗಿದ್ದ ಡಾಕ್ಟರ್ ಮಹೇಂದ್ರಲಾಲ ಸರ್ಕಾರನು ಪರಮಹಂಸರಿಗೆ ಉಚಿತವಾಗಿ ಚಿಕಿತ್ಸೆ ಮಾಡಲು ಸಂತೋಷದಿಂದ ಒಪ್ಪಿಕೊಂಡನು. ಪಾಶ್ಚಾತ್ಯ ವಿದ್ಯಾಪಾರಂಗತನಾಗಿದ್ದ ಆತನು ವಿಚಾರ ಪಕ್ಷಪಾತಿಯಾಗಿದ್ದುದರಿಂದ ಮತ, ಧರ್ಮ, ಭಕ್ತಿ, ದೇವರು ಮೊದಲಾದುವುಗಳನ್ನು ಅಷ್ಟೇನೂ ಗೌರವದಿಂದ ಕಾಣುತ್ತಿರಲಿಲ್ಲ. ಪರಮಹಂಸರಿಗೆ ಮುಖತಃ ತನ್ನ ಅಭಿಪ್ರಾಯಗಳನ್ನು ಹೇಳಲೂ ಹಿಂಜರಿಯಲಿಲ್ಲ. ಆದರೆ ಕ್ರಮೇಣ ಆತನಿಗೆ ಪರಮಹಂಸರಲ್ಲಿ ಅಸಾಧಾರಣ ಗೌರವವುಂಟಾಯಿತು. ಒಂದು ಸಾರಿ ಅವರು ಮಹೇಂದ್ರಲಾಲನನ್ನು ಆತನು ಮಾಡಿದ ಉಪಕಾರಕ್ಕಾಗಿ ವಂದಿಸಲು ಆತನೆಂದನು . ''ನಿಮಗಾಗಿ ಮಾತ್ರವೇ ನಾನಿಲ್ಲಿಗೆ ಬರುತ್ತಿದ್ದೇನೆ ಎಂದು ತಿಳಿಯಬೇಡಿ. ಅದರಲ್ಲೊಂದು ಸ್ವಾರ್ಥವಿದೆ. ನಿಮ್ಮ ಸಂಗದಲ್ಲಿ ನನಗೆ ಅತ್ಯಾನಂದವಾಗುತ್ತದೆ. ಇದುವರೆಗೆ ನಿಮ್ಮ ನಿಕಟಸಂಗದಲ್ಲಿರಲು ನನಗೆ ಅವಕಾಶವೇ ದೊರಕಿರಲಿಲ್ಲ. ವಿಷಯಾಂತರಗಳಲ್ಲಿ ತಲ್ಲೀನನಾಗಿದ್ದೆ. ಬಾಯಿಬಿಟ್ಟು ಹೇಳಿಬಿಡುತ್ತೇನೆ ಮನಸ್ಸಿನಲ್ಲಿರುವುದನ್ನು. ನಿಮ್ಮನ್ನು ಕಂಡರೆ ನನಗೆ ಬಹಳ ಪ್ರೀತಿ. ಪ್ರಾಣ ಹೋದರೂ ನೀವು ಸತ್ಯವನ್ನು ಬಿಟ್ಟು ಒಂದು ಗೆರೆ ಆಚೆ ಹೋಗುವುದಿಲ್ಲ. . . . ಮುಖಸ್ತುತಿ ಮಾಡುತ್ತೇನೆಂದು ತಿಳಿಯಬೇಡಿ. ನನ್ನ ತಂದೆಯಾದರೂ ಸರಿಯೇ ತಪ್ಪುಮಾಡಿದರೆ ಆತನ ಎದುರಿಗೇ ಹೇಳಿಬಿಡುವುದು ನನ್ನ ಸ್ವಭಾವ. ಅಂತಹ

ಬರಹಿತನದಿಂದ ನನಗೆ ಅಪಕೀರ್ತಿ ಕೂಡ ಬಂದಿದೆ. . . . ಆದರೆ ನಿಮ್ಮ ಶಿಷ್ಯರು ನಿಮ್ಮನ್ನು ಈಶ್ವರನ ಅವತಾರವೆಂದು ಭಾವಿಸಿ ಸಾರುತ್ತಿರುವುದು ನನಗೇಕೋ ಸರಿಯೆಂದು ತೋರುವುದಿಲ್ಲ. ಅನಂತನೂ ನಿರಾಕಾರನೂ ಆದ ದೇವರು ಮನುಷ್ಯ ಶರೀರಧಾರಣೆಮಾಡಿ ಅವತಾರಮಾಡುವನೆಂಬ ನಂಬುಗೆಯೇ ಮತಧರ್ಮಗಳ ಅಧೋಗತಿಗೆ ಮೂಲಕಾರಣವಾಗಿದೆ ಎಂದು ನನ್ನ ಭಾವನೆ.''

"ಹೌದು, ನೀನೆನ್ನುವುದೂ ನಿಜವೇ. ನನ್ನನ್ನು ಅವತಾರವೆಂದು ಸಾರುತ್ತಿರುವುದು ನನಗೂ ಸರಿಬೀಳುವುದಿಲ್ಲ.'' ಎಂದು ಪರಮಹಂಸರು ನಗುಮೊಗದಿಂದ ಹೇಳಿದರು.

ಈ ಸಂಭಾಷಣೆ ನಡೆದ ಒಂದೆರಡು ದಿನಗಳಲ್ಲಿಯೇ ಮಹೇಂದ್ರಲಾಲನಿಗೆ ಶ್ರೀರಾಮಕೃಷ್ಣರ ಅದ್ಭುತ ವ್ಯಕ್ತಿತ್ವದ ಪರಿಚಯವಾಗುವಂತೆ ಒಂದು ಸಂಗತಿ ನಡೆಯಿತು. ವೈದ್ಯನ ಕಣ್ಣೆದುರಿನಲ್ಲಿಯೇ ಪರಮಹಂಸರು ಸಮಾಧಿಸ್ಥರಾದರು. ದೇಹವು ಶವದಂತಿದ್ದರೂ ಮುಖದಲ್ಲಿ ಕಳೆಯಿತ್ತು. ಮಹೇಂದ್ರನು ತನ್ನ ಸ್ಟೆತೋಸ್ಕೋಪಿನಿಂದ ಪರೀಕ್ಷೆ ನಡೆಸಿದನು. ನಾಡಿಗಳ ಸಂಚಾರವೇ ಇರಲಿಲ್ಲ. ಹೃದಯವು ಸ್ತಬ್ಧವಾಗಿತ್ತು. ಕಣ್ಣುಹರಳಿಗೆ ಕೈಬೆರಳನ್ನು ಮುಟ್ಟಿಸಿ ನೋಡಿದನು. ಅದೂ ಹೆಣದ ಕಣ್ಣುಹರಳಿನಂತೆ ನಿಶ್ಚಲವಾಗಿತ್ತು. ವೈದ್ಯನು ಬೆಪ್ಪುಬೆರಗಾದನು. ತಾನರಿತ ವಿಜ್ಞಾನಶಾಸ್ತ್ರವು ಆ ಸಮಾಧಿ ಸ್ಥಿತಿಗೆ ಉಪಪತ್ತಿ ಹೇಳಲು ಅಸಮರ್ಥವಾಗಿದೆ ಎಂದು ಒಪ್ಪಿಕೊಂಡನು.

ಇದೇ ಸಮಯದಲ್ಲಿ ಪ್ರಭುದಯಾಲಮಿಶ್ರ ಎಂಬೊಬ್ಬ ಕ್ರೈಸ್ತಸಾಧು ಪರಮಹಂಸರನ್ನು ಸಂದರ್ಶಿಸಲು ಉತ್ತರಭಾರತ ಪ್ರಾಂತದಿಂದ ಬಂದನು. ಆತನು ಶ್ರೀರಾಮಕೃಷ್ಣರಲ್ಲಿ ತನ್ನ ಇಷ್ಟದೈವವನ್ನು ಕಂಡು ಕೃತಾರ್ಥನಾದನು.

ಪ್ರಭುದಯಾಲ: ಭಗವಂತನೇ ಎಲ್ಲ ಜೀವಿಗಳ ರೂಪನ್ನೂ ಧಾರಣೆ ಮಾಡಿದ್ದಾನೆ.

ಪರಮಹಂಸರು: ಒಬ್ಬನೇ ಈಶ್ವರನಿಗೆ ಸಹಸ್ರನಾಮಗಳಿವೆ.

ಪ್ರಭುದಯಾಲನು ಅಲ್ಲಿ ನೆರೆದಿದ್ದ ಭಕ್ತವೃಂದವನ್ನು ನಿರ್ದೇಶಿಸಿ "ಕ್ರಿಸ್ತನು ಮೇರಿಯ ಪುತ್ರ ಮಾತ್ರನಲ್ಲ; ಸಾಕ್ಷಾತ್ ಈಶ್ವರನು.'' ಎಂದು ಪರಮಹಂಸರನ್ನು ತೋರಿಸುತ್ತ "ಈ ಸಮಯದಲ್ಲಿ ಇವರು ಹೀಗೆ ಕಾಣುತ್ತಿದ್ದಾರೆ. ಬೇರೆಯ

ಸಮಯದಲ್ಲಿ ಇವರು ಈಶ್ವರನಲ್ಲದೆ ಬೇರೆಯಲ್ಲ. ನಿಮಗಿನ್ನೂ ಇವರ ಸಂಪೂರ್ಣ ಪರಿಚಯವಾಗಿಲ್ಲ. ಅನೇಕ ದಿನಗಳ ಹಿಂದೆ ನನಗಿವರು ದರ್ಶನದಲ್ಲಿ ಪ್ರತ್ಯಕ್ಷ ವಾಗಿದ್ದರು. ಇಂದು ವಸ್ತುತಃ ನೋಡುತ್ತಿದ್ದೇನೆ.'' ಎಂದನು.

ಪರಮಹಂಸರು: ನಿನಗೇನಾದರೂ ದರ್ಶನಗಳಾಗುತ್ತವೆಯೋ?

ಪ್ರಭುದಯಾಲ: ಹೌದು. ನಾನೊಂದುಸಲ ದರ್ಶನದಲ್ಲಿ ಯೇಸು ಕ್ರಿಸ್ತನನ್ನು ಕಂಡಿದ್ದೇನೆ.

ಪರಮಹಂಸರು ಸ್ವಲ್ಪಕಾಲ ಹೊರಗೆ ಹೋಗಿ ಹಿಂದಿರುಗಿ ಒಂದು ``ಹೌದು; ನಾನಲ್ಲಿ ನಿನ್ನನ್ನು ಕಂಡಿದ್ದೆ. . . . ನಿನ್ನಿಚ್ಛೆ ನೆರವೇರುತ್ತದೆ.'' ಎಂದರು.

ಪ್ರಭುದಯಾಲನು ಕೈಮುಗಿದುಕೊಂಡು ``ಅಂದಿನಿಂದ ನಾನು ನಿಮಗೆ ಸಂಪೂರ್ಣವಾಗಿ ಶರಣುಹೋಗಿದ್ದೇನೆ. ನನ್ನ ತನುಮನ ಆತ್ಮಗಳನ್ನೆಲ್ಲ ನಿಮಗೆ ಅರ್ಪಿಸಿದ್ದೇನೆ.'' ಎಂದು ನಮಸ್ಕಾರಮಾಡಿದನು.

ಇಂತು ದಿನಗಳು ಕಳೆದುವು. ಗುರುದೇವನ ರುಜೆ ಗುಣವಾಗಲಿಲ್ಲ. ಕಡೆಗೆ ಡಾಕ್ಟರ್ ಸರ್ಕಾರನ ಸಲಹೆಯಂತೆ ಹವಾ ಬದಲಾವಣೆಗಾಗಿಯೂ ಸನ್ನಿವೇಶ ಪ್ರಶಾಂತತೆಗಾಗಿಯೂ ಶಿಷ್ಯರೆಲ್ಲರೂ ಸೇರಿ ನಗರಕ್ಕೆ ಸಮೀಪವಾಗಿದ್ದ ಕಾಶೀಪುರದ ತೋಟದ ಮನೆಯೊಂದಕ್ಕೆ ಪರಮಹಂಸರನ್ನು ಸಾಗಿಸಿದರು. ಆ ಸ್ಥಳವು ವೃಕ್ಷಗಳಿಂದಲೂ ವನಲತಾನಿಕುಂಜಗಳಿಂದಲೂ ಪರಿವೃತವಾಗಿ ರಮಣೀಯವಾಗಿತ್ತು. ಶಾರದಾದೇವಿ ಗುರುದೇವನ ಶುಶ್ರೂಷೆಗಾಗಿ ಅಲ್ಲಿಗೆ ಬಂದು ನಿಂತಳು. ನರೇಂದ್ರ, ರಾಖಾಲ, ಬಾಬುರಾಮ, ನಿರಂಜನ, ಯೋಗೀಂದ್ರ, ಲಾಟು, ತಾರಕ, ಹಿರಿಯಗೋಪಾಲ, ಕಾಲಿ, ಶಶಿ, ಶರತ್, ಕಿರಿಯಗೋಪಾಲ ಮೊದಲಾದ ಅಂತರಂಗದ ಶಿಷ್ಯರು ಪರಮಹಂಸರ ಪರಿಚರ್ಯೆಗಾಗಿ ತೋಟದ ಮನೆಯಲ್ಲಿಯೇ ವಾಸಿಸತೊಡಗಿದರು. ಗಿರೀಶಚಂದ್ರಘೋಷ, ಮಹೇಂದ್ರನಾಥ ಗುಪ್ತ, ರಾಮಚಂದ್ರದತ್ತ ಮೊದಲಾದ ಸಂಸಾರಿ ಶಿಷ್ಯರು ಪದೇ ಪದೇ ಅಲ್ಲಿಗೆ ಬಂದು ಸೇವೆಮಾಡುತ್ತಿದ್ದರು. ಡಾಕ್ಟರ್ ಮಹೇಂದ್ರಲಾಲ ಸರ್ಕಾರನು ದಿನಕ್ಕೊಂದು ಬಾರಿ ತಪ್ಪದೆ ಬಂದು ನೋಡಿಕೊಂಡುಹೋಗುತ್ತಿದ್ದನು. ನವ

ಯುಗಾವತಾರನ ದರ್ಶನಕ್ಕಾಗಿ ದೇಶವಿದೇಶಗಳಿಂದ ಬರುವ ಜನರ ಪ್ರವಾಹವು ತುಂಡುಗಡಿಯದಿತ್ತು.

ಈ ಮಧ್ಯೆ ನರೇಂದ್ರನು ತನ್ನ ಗುರುಭ್ರಾತೃಗಳನ್ನೆಲ್ಲ ಬಳಿಗೆ ಕರೆದು, ಅವರ ಭಕ್ತಿನಾಶಕವಾದ ರಾಗೋತ್ಕರ್ಷಗಳನ್ನೆಲ್ಲ ಖಂಡಿಸಿ, ಅವರಲ್ಲಿ ವಿಚಾರಬುದ್ಧಿಯನ್ನು ಉದ್ದೀಪನಗೊಳಿಸಿ, ಮುಂದಿನ ಶ್ರೀರಾಮಕೃಷ್ಣ ಮಹಾಸಂಘಕ್ಕೆ ಅಸ್ತಿವಾರ ಹಾಕುತ್ತಿದ್ದನು. ಒಂದು ದಿನ ಅವರೆಲ್ಲರನ್ನೂ ನೆರಪಿ "ಗುರುದೇವನ ರೋಗವು ವಿಷಮಾವಸ್ಥೆಗೇರಿದೆ. ಯಾರು ಬಲ್ಲರು? ದೇಹತ್ಯಾಗಮಾಡಲು ಇದೊಂದು ನೆವವಿರಬಹುದು. ಅವಕಾಶವಿರುವಾಗಲೇ ಸೇವೆ, ಪ್ರಾರ್ಥನೆ, ಧ್ಯಾನಗಳಿಂದ ಆತ್ಮಸಾಕ್ಷಾತ್ಕಾರ ಪಡೆಯಲು ನಾವೆಲ್ಲರೂ ಪ್ರಯತ್ನಿಸಬೇಕು. ನಾವೀಗ ಉದಾಸೀನಮಾಡಿದರೆ ತರುವಾಯ ಪಶ್ಚಾತ್ತಾಪ ಪಡಬೇಕಾದೀತು. ನಾವೀಗ ತೋರುತ್ತಿರುವ ಬರಿಯ ಭಾವೋದ್ರೇಕವು ಶಾಶ್ವತ ಫಲಕಾರಿಯಾಗಲಾರದು. ನಾಳೆ ನಾಳೆ ಎನ್ನುತ್ತ ಕುಳಿತರೆ ಕೆಲಸವಾಗುವುದಿಲ್ಲ. ವಜ್ರಮನಸ್ಸಿನಿಂದ ಬಂಧನಗಳನ್ನೆಲ್ಲ ತುಂಡರಿಸಿ ಸಾಧನೆಮಾಡಬೇಕು." ಎಂದು ಬೋಧಿಸಿದನು. ಆ ದಿನ ರಾತ್ರಿಯೇ ಸಂನ್ಯಾಸಿಗಳು ಮಾಡುವಂತೆ 'ಧುನಿ'ಯನ್ನು ಹೊತ್ತಿಸಿ ಶಿಷ್ಯರೆಲ್ಲರೂ ಬಹಳಕಾಲ ಧ್ಯಾನಮಾಡಿದರು.

ಒಂದು ದಿನ ಶ್ರೀರಾಮಕೃಷ್ಣರನ್ನು ನೋಡಲೆಂದು ಬಂದ ಪಂಡಿತ ಶಶಧರ ತರ್ಕಚೂಡಾಮಣಿ ಅವರನ್ನು ಕುರಿತು "ಮಹಾಶಯ, ತಮ್ಮಂತಹ ಯೋಗಿಗಳು ಇಚ್ಛಾಮಾತ್ರದಿಂದ ರೋಗನಿವಾರಣೆಮಾಡಿಕೊಳ್ಳಲು ಸಮರ್ಥರೆಂದು ಶಾಸ್ತ್ರಗಳು ಹೇಳುತ್ತವೆ. ನೀವೇಕೆ ಹಾಗೆ ಮಾಡಬಾರದು?" ಎಂದನು.

"ಪಂಡಿತನಾಗಿ ಇಂತಹ ಮಾತು ಆಡುತ್ತೀಯಲ್ಲಾ! ಈ ಮನಸ್ಸು ಸಂಪೂರ್ಣವಾಗಿ ಈಶ್ವರಾರ್ಪಿತವಾಗಿದೆ. ಅದನ್ನು ಹಿಂದಕ್ಕೆ ಕರೆದು ಈ ನಶ್ವರ ಶರೀರಕ್ಕೆ ದಾಸಮಾಡಿಬಿಡಲೇ?" ಎಂದರು ಪರಮಹಂಸರು. ಶಶಧರನು ಸುಮ್ಮನಾದನು. ಆದರೆ ನರೇಂದ್ರ ಮೊದಲಾದ ಶಿಷ್ಯರು ಬಿಡಲಿಲ್ಲ.

"ನಮಗಾಗಿಯಾದರೂ ರೋಗವನ್ನು ಗುಣಮಾಡಿಕೊಳ್ಳಬೇಕು." ಎಂದರು.

ಪರಮಹಂಸರು: ನಾನೇನು ಬೇಕೆಂದು ರೋಗವನ್ನು ಬರಮಾಡಿಕೊಂಡಿ

ದ್ದೀನೆಯೋ ? ವಾಸಿಯಾಗಲಿ ಎಂದು ನನಗೂ ಆಸೆ. ಆದರೆ ಅದು ಹೇಗೆ ಸಾಧ್ಯ ? ಎಲ್ಲಾ ಜಗನ್ಮಾತೆಯ ಕೈಯಲ್ಲಿದೆ.

ನರೇಂದ್ರ : ಹಾಗಾದರೆ ಆಕೆಯನ್ನು ಪ್ರಾರ್ಥಿಸಿ. ನಿಮ್ಮ ಪ್ರಾರ್ಥನೆಯನ್ನು ಕೇಳಿಯೇ ಕೇಳುತ್ತಾಳೆ.

ಪರಮಹಂಸರು : ನೀನೇನೋ ಸುಲಭವಾಗಿ ಹೇಳಿಬಿಡುತ್ತೀಯೆ. ಆದರೆ ನನ್ನ ಬಾಯಿಂದ ಅಂಥಾ ಪ್ರಾರ್ಥನೆ ಹೊರಡಲಾರದು.

ನರೇಂದ್ರ . ಊಹು ; ಅದಾಗದು. ನನಗಾಗಿ ನೀವು ಪ್ರಾರ್ಥಿಸಲೇ ಬೇಕು.

ಪರಮಹಂಸರು : ಆಗಲಿ ; ಪ್ರಯತ್ನಿಸುತ್ತೇನೆ.

ಸ್ವಲ್ಪಹೊತ್ತಾದ ಮೇಲೆ ನರೇಂದ್ರನು ತನ್ನ ಪ್ರಾರ್ಥನೆ ಏನಾಯಿತೆಂದು ವಿಚಾರಿಸಿದನು. ಪರಮಹಂಸರು " 'ಊಟಮಾಡುವುದಕ್ಕೆ ಆಗುವುದಿಲ್ಲ ; ಏನಾದರೂ ಹೊಟ್ಟೆಗೆ ಹೋಗುವಂತೆ ಮಾಡು.' ಎಂದು ತಾಯಿಯನ್ನು ಕೇಳಿದೆ. ಆಕೆ ನಿಮ್ಮನ್ನೆಲ್ಲ ತೋರಿಸಿ 'ಏಕೆ ? ಈ ಎಲ್ಲ ಬಾಯಿಗಳಿಂದಲೂ ನೀನು ಊಟ ಮಾಡುತ್ತಿದ್ದೀಯಲ್ಲಾ !' ಎಂದಳು. ನನಗೆ ಅವಮಾನವಾದಂತಾಗಿ ಬೇರೆ ಉಸಿರೆತ್ತಲಿಲ್ಲ." ಎಂದರು.

ಇನ್ನೊಂದು ದಿನ ಸಂಧ್ಯಾಕಾಲ ಗುರುದೇವನು ತನ್ನವರೊಡನೆ ಮಾತಾಡುತ್ತ "ನನ್ನ ಕೆಲಸವೆಲ್ಲ ಇನ್ನೇನು ಮುಗಿದಂತೆ. ನಾನಿನ್ನು ಉಪದೇಶಮಾಡಲಾರೆ. ಜಗತ್ತೆಲ್ಲವೂ ಬ್ರಹ್ಮಮಯವಾಗಿ ಕಾಣುತ್ತಿದೆ. ಎಲ್ಲವೂ ಈಶ್ವರನೇ. ನಾನು ಯಾರಿಗೆಂದು ಬೋಧಿಸಲಿ ?" ಎಂದನು.

ಕ್ರಿ. ಶ. ೧೮೮೬ ನೆಯ ಜನವರಿ ಮೊದಲನೆಯ ತೇದಿ. ರೋಗವು ಸ್ವಲ್ಪ ಶಮನವಾದಂತೆ ತೋರಿದುದರಿಂದ ಪರಮಹಂಸರು ಹೊರಗೆ ಬಂದು ಉದ್ಯಾನದಲ್ಲಿ ತಿರುಗಾಡಲು ಬಯಸಿದರು. ಸಮಯ ಮಧ್ಯಾಹ್ನವಾಗಿತ್ತು. ರಜದ ದಿನವಾದ್ದರಿಂದ ಶಿಷ್ಯರೂ ಇತರರೂ ಸೇರಿ ಬಹಳ ಮಂದಿ ನೆರೆದಿತ್ತು. ಕೆಲವರು ಮನೆಯ ಒಳಗಿದ್ದರು. ಕೆಲವರು ಮರಗಳ ಕೆಳಗೆ ಕುಳಿತು ಮಾತಾಡುತ್ತಿದ್ದರು. ಪರಮಹಂಸರು ಉಪ್ಪರಿಗೆಯಿಂದ ಮೆಲ್ಲನೆ ಕೆಳಗಿಳಿದು ತೋಟಕ್ಕೆ ಬಂದರು. ಗಿರೀಶಚಂದ್ರನೂ ರಾಮಚಂದ್ರನೂ ಮತ್ತು ಇಲ್ಲಿ ಕುಳಿತಿದ್ದವರೂ ಎದ್ದುಬಂದು ನಮಸ್ಕಾರ ಮಾಡಿದರು. ಪರಮಹಂಸರು ಗಿರೀಶನನ್ನು ಕುರಿತು "ಗಿರೀಶ್,

ನೀನೇಕೆ ನನ್ನನ್ನು ಅವತಾರವೆಂದು ಸಾರುವುದು? ನನ್ನಲ್ಲಿ ಏನು ಕಂಡೆ?" ಎಂದು ಪ್ರಶ್ನೆಮಾಡಿದರು. ಗಿರೀಶನು ಹಿಂದುಮುಂದು ನೋಡದೆ "ವ್ಯಾಸ ವಾಲ್ಮೀಕಿಗಳೂ ಕೂಡ ಯಾರ ಮಹಿಮೆಯನ್ನು ಸಾರಲೆಳಸಿ, ಸಾರಿ ಮುಗಿಸ ಲಾರದೆ ಸೋತುಹೋದರೋ ಆತನನ್ನು ನನ್ನಂತಹ ಅಲ್ಪಾತ್ಮನು ಏನೆಂದು ತಾನೆ ಸ್ತುತಿಸಬಲ್ಲನು?" ಎಂದನು. "ನಾನು ಇನ್ನೇನು ಹೇಳಲಿ? ನಿಮಗೆಲ್ಲರಿಗೂ ಚೈತನ್ಯೋದಯವಾಗಲಿ ಎಂದು ಆಶೀರ್ವದಿಸುತ್ತೇನೆ." ಎಂದು ಹೇಳಿ ಗುರು ದೇವನು ಸಮಾಧಿಮಗ್ನನಾದನು. ಅಲ್ಲಿದ್ದವರೆಲ್ಲರೂ ಒಬ್ಬೊಬ್ಬರಾಗಿ ಕಾಲು ಮುಟ್ಟಿ ನಮಸ್ಕರಿಸಿದರು. ಒಬ್ಬೊಬ್ಬರಿಗೂ ಒಂದೊಂದು ಅನುಭವವಾಗಿ ಎಲ್ಲರೂ ಹುಚ್ಚರಂತೆ ಕುಣಿದು ಕೂಗತೊಡಗಿದರು. ಕೆಲವರಿಗೆ ಜ್ಯೋತಿರ್ದರ್ಶ ವಾಯಿತು. ಕೆಲವರಿಗೆ ಇಷ್ಟದೈವ ಪ್ರತ್ಯಕ್ಷವಾಯಿತು. ಕೆಲವರಿಗೆ ಆನಂದದ ಮಿಂಚು ಮುಟ್ಟಿದಂತಾಯಿತು. ಕೆಲವರು ನಕ್ಕರು; ಕೆಲವರು ಅತ್ತರು; ಕೆಲ ವರು ಧ್ಯಾನಸ್ಥರಾಗಿ ಕುಳಿತುಬಿಟ್ಟರು; ಉಳಿದವರು ಜಯಘೋಷಮಾಡಿ ಕುಣಿಯತೊಡಗಿದರು. ಆ ದಿನ ಅವರೆಲ್ಲರಿಗೂ 'ಕಲ್ಪತರು' ದಿನವಾಯಿತು. ನರೇಂದ್ರ ಮೊದಲಾದ ಕೆಲವರು ರಾತ್ರಿಯಲ್ಲಿ ನಿದ್ದೆಮಾಡದೆ ಶುಶ್ರೂಷೆಮಾಡಿದ್ದ ರಿಂದ ಆಗತಾನೇ ಮಲಗಿದ್ದರು. ಶರತ್, ಲಾಟು ಇಬ್ಬರೂ ಅದೇ ಸಮಯ ವೆಂದು ಗುರುದೇವನ ಕೊಟಡಿಯನ್ನು ಗುಡಿಸಿ, ಹಾಸಿಗೆಯನ್ನು ಕೊಡವಿ ಸಿದ್ಧ ಮಾಡುತ್ತಿದ್ದರು. ಅವರೆಲ್ಲರೂ ಕೋಲಾಹಲವನ್ನು ಕೇಳಿ ಹೊರಗೆ ಬಂದು ಆನಂದೋತ್ಸವದ ಅದ್ಭುತ ದೃಶ್ಯವನ್ನು ಕಂಡು ಬೆರಗಾದರು.

ನರೇಂದ್ರನ ಹೃದಯತೃಷ್ಣೆ ಮಾತ್ರ ಶಾಂತವಾಗಲಿಲ್ಲ. ದಿನ ಕಳೆದ ಹಾಗೆಲ್ಲ ಆತನಿಗೆ ನಿರ್ವಿಕಲ್ಪ ಸಮಾಧಿಯಲ್ಲಿ ಬ್ರಹ್ಮಸಾಕ್ಷಾತ್ಕಾರ ಮಾಡಬೇ ಕೆಂಬ ಅಭಿಲಾಷೆ ತೀವ್ರವಾಯಿತು. ಅದಕ್ಕಾಗಿ ದೀರ್ಘಕಾಲ ಧ್ಯಾನ ಮಗ್ನನಾಗಿರುತ್ತಿದ್ದನು. ಒಂದು ಸಾರಿ ಪರಮಹಂಸರಲ್ಲಿಗೆ ಬಂದು "ಪ್ರತಿ ಯೊಬ್ಬರೂ ತಮ್ಮಿಂದ ಅನುಗೃಹೀತರಾದರು. ನನಗೂ ಏನಾದರೂ ಅನುಗ್ರಹ ಮಾಡಬೇಕು." ಎಂದನು. ಅದಕ್ಕೆ ಪರಮಹಂಸರು "ನಿನ್ನ ಮನೆಯವರಿಗೆ ಏನಾದರೂ ಅನುಕೂಲ ಕಲ್ಪಿಸಿಕೊಟ್ಟು ಬಾ. ಆಮೇಲೆ ಎಲ್ಲವೂ ಲಭಿಸು ತ್ತದೆ—ನಿನ್ನಿಚ್ಛೆ ಏನಿದೆ? ಹೇಳಿಬಿಡು." ಎಂದರು. "ನಿರಂತರ ಸಮಾಧಿಮಗ್ನ

ನಾಗಿರಬೇಕೆಂಬುದು ಸನ್ಯಾಸ.'' ಎಂದ ಶಿಷ್ಯನ ಮಾತಿಗೆ ಗುರುಗಳು ತಟಕ್ಕನೆ "ನೀನು ಶುದ್ಧಮೂರ್ಖ. ಸಮಾಧಿಗಿಂತಲೂ ಉತ್ತಮತರವಾದ ಸ್ಥಿತಿಯೊಂದಿದೆ. ಇರುವುದೆಲ್ಲವೂ ನೀನೇ ಎಂದು ನೀನು ಕೀರ್ತನೆಮಾಡುವುದಿಲ್ಲವೇ? ನಿನ್ನ ಮನೆಯವರಿಗೆ ಅನುಕೂಲ ಕಲ್ಪಿಸಿಕೊಟ್ಟು ಬಾ. ಸಮಾಧಿಗಿಂತಲೂ ಒಂದು ಕೈ ಮೇಲಾದ ಸ್ಥಿತಿ ನಿನ್ನದಾಗುವುದು.'' ಎಂದರು.

ನರೇಂದ್ರನು ಮನೆಗೆ ಹೋದನು. ಎದೆಯ ಬೇನೆ ಅತಿಯಾಯಿತು. ಪುನಃ ಹಿಂದಿರುಗಿ ಕಾಶೀಪುರಕ್ಕೆ ಓಡಿಬಂದನು. ಆ ರಾತ್ರಿಯೇ ಗುರುದೇವನ ಸೂಚನೆಯಂತೆ ದಕ್ಷಿಣೇಶ್ವರಕ್ಕೆ ಹೋಗಿ ಸಾಧನೆಯಲ್ಲಿ ನಿರತನಾದನು.

ಇನ್ನೊಂದು ದಿನ ಶ್ರೀರಾಮಕೃಷ್ಣರು ತಮ್ಮ ಮುಖ್ಯಶಿಷ್ಯನನ್ನು ಒಳಗೆ ಕರೆದು "ನರೇನ್, ಈ ಬಾಲಕರನ್ನೆಲ್ಲ ನಿನ್ನ ವಶದಲ್ಲಿ ಬಿಡುತ್ತೇನೆ. ಅವರು ಆತ್ಮಸಾಧನೆಯಲ್ಲಿ ನಿರತರಾಗುವಂತೆ ಮಾಡು. ಪುನಃ ಸಂಸಾರಕ್ಕೆ ಮರಳದಂತೆ ನೋಡಿಕೋ.'' ಎಂದು ಹೇಳಿದರು. ಶಿಷ್ಯರಲ್ಲಿ ಅನೇಕರು ನರೇಂದ್ರನಿಗಿಂತಲೂ ವಯಸ್ಸಿನಲ್ಲಿ ಹಿರಿಯವರಾಗಿದ್ದರೂ ಆತನ ನಾಯಕತ್ವವನ್ನು ಮುದದಿಂದ ಒಪ್ಪಿಕೊಂಡರು.

ಇದಾದ ಕೆಲವು ದಿನಗಳಲ್ಲಿ ಶಿಷ್ಯರಿಗೆ ಕಾಷಾಯ ವಸ್ತ್ರಗಳನ್ನು ಕೊಟ್ಟು ಸಂನ್ಯಾಸವನ್ನು ದಾನಮಾಡಿ ಮನೆಮನೆಗೂ ಹೋಗಿ ಭಿಕ್ಷೆಯೆತ್ತುವಂತೆ ಕಳುಹಿಸಿದರು. ಅವರೆಲ್ಲರೂ ಉತ್ಸಾಹದಿಂದ ಎತ್ತಿ ತಂದ ಭಿಕ್ಷೆಯನ್ನು ತಾವೂ ಸ್ವಲ್ಪ ಸ್ವೀಕರಿಸಿ ಆಶೀರ್ವದಿಸಿದರು.

ಸಂಜೆಯಲ್ಲಿ ಶಿಷ್ಯರೆಲ್ಲರೂ ಧ್ಯಾನಮಾಡಲೆಂದು ತೋಟದ ಮರಗಳ ಕೆಳಗೆ ಅಲ್ಲಲ್ಲಿ ಕುಳಿತರು. ನರೇಂದ್ರನೂ ಕುಳಿತನು. ಇದ್ದಕ್ಕಿದ್ದ ಹಾಗೆ ಆತನ ಶಿರಸ್ಸಿನಲ್ಲಿ ಜ್ಯೋತಿಯು ಆವಿರ್ಭಾವವಾದಂತೆ ಭಾಸವಾಯಿತು. ಪರಾತ್ಪರಾಗಿ ನಿರ್ವಿಕಲ್ಪ ಸಮಾಧಿಯಲ್ಲಿ ಮಗ್ನನಾಗಿಬಿಟ್ಟನು! ಬಹಳ ಹೊತ್ತಾದರೂ ಅಲುಗಾಡಲಿಲ್ಲ. ಶರೀರವು ಶಿಲಾಪ್ರತಿಮೆಯಂತೆ ನಿಷ್ಪಂದವಾಗಿತ್ತು. ಶಿಷ್ಯರಲ್ಲಿ ಕೆಲವರು ಬೆದರಿ ಗುರುಗಳ ಒಳಿಗೆ ಹೋಗಿ ಸುದ್ದಿಯನ್ನು ತಿಳಿಸಿದರು. ಭಾವದಲ್ಲಿದ್ದ ಪರಮಹಂಸರು "ಇನ್ನೂ ಸ್ವಲ್ಪಕಾಲ ಇರಲಿ, ಆ ಸ್ಥಿತಿಯಲ್ಲಿ! ಅದಕ್ಕಾಗಿ ಅವನು ನನ್ನನ್ನು ಬಹಳ ಪೀಡಿಸಿದ್ದಾನೆ!'' ಎಂದರು. ಸ್ವಲ್ಪ ಸಮಯ ಕಳೆದ ತರುವಾಯ

ನರೇಂದ್ರನು ಪ್ರತಿಳಿದನು. "ಅಯ್ಯೋ! ನನ್ನ ಶರೀರವೆಲ್ಲಿ?" ಎಂದು ಕೂಗಿ ಕೊಂಡನು. ಹತ್ತಿರವಿದ್ದ ಗುರುಭ್ರಾತೃಗಳು "ಇಲ್ಲಿದೆ, ನರೇನ್, ಇಲ್ಲಿದೆ!" ಎಂದು ಅವನ ದೇಹವನ್ನು ಮುಟ್ಟಿ ಗಟ್ಟಿಯಾಗಿ ಹೇಳಿದರು. ಆ ಆನಂದ ಸಮುದ್ರಸ್ನಾನವಾದ ಮೇಲೆ ನರೇಂದ್ರನು ಪರಮಹಂಸರಲ್ಲಿಗೆ ಬಂದು ಪ್ರಸನ್ನ ಚಿತ್ತನಾಗಿ ಸಾಷ್ಟಾಂಗಪ್ರಣಾಮಮಾಡಿದನು. ಗುರುವರ್ಯನು ನಗುಮೊಗ ದಿಂದ "ನರೇನ್, ನಿನಗೀಗ ಜಗನ್ಮಾತೆ ಎಲ್ಲವನ್ನೂ ತೋರಿಸಿಬಿಟ್ಟಿದ್ದಾಳೆ. ಆದರೆ ಸದ್ಯಕ್ಕೆ ನಿನ್ನ ಅನುಭವಕ್ಕೆ ಬೀಗಮುದ್ರೆಹಾಕಿದೆ; ಬೀಗದಕೈ ನನ್ನಲ್ಲಿರು ತ್ತದೆ. ಮಾತೆಯ ಕಾರ್ಯಗಳನ್ನೆಲ್ಲಾ ನೀನು ಮಾಡಿ ಮುಗಿಸಿದ ಮೇಲೆ ಬೀಗ ತೆಗೆಯುತ್ತೇನೆ." ಎಂದು ಹರಸಿದರು. ಜೊತೆಗೆ ಕೆಲವು ದಿನಗಳ ವರೆಗೆ ಸಾತ್ವಿಕ ಆಹಾರಗಳನ್ನೇ ನಿಯಮಪ್ರಕಾರ ಸ್ವೀಕರಿಸಬೇಕೆಂದು ಬುದ್ಧಿ ಹೇಳಿದರು.

ಮರುದಿನ ಬೆಳಗ್ಗೆ ಕಂಠರೋಗದ ಯಾತನೆ ಸ್ವಲ್ಪ ಶಮನವಾದಂತೆ ಕಂಡು ಬಂದಿತು. ಗುರುದೇವನು ಬಳಿಯಿದ್ದ ಶಿಷ್ಯರನ್ನು ಕುರಿತು ಇಂತೆಂದನು:

"ನಿಮಗಾಗಿ ನೋವನ್ನೆಲ್ಲಾ ಕಷ್ಟದಿಂದ ಸಹಿಸುತ್ತಿದ್ದೇನೆ. ಇಲ್ಲದಿದ್ದರೆ ನೀವೆಲ್ಲ ಅಳುತ್ತೀರಿ. ನೋವಿನಿಂದ ನರಳುವುದಕ್ಕಿಂತಲೂ ಶರೀರವು ಬಿದ್ದು ಹೋದರೆ ಲೇಸೆಂದು ನೀವೆಲ್ಲರೂ ಹಾರೈಸಿದರೆ ಆಗ ಇದು ಬಿದ್ದುಹೋಗ ಬಹುದು. . . . ರೋಗವು ಶರೀರಕ್ಕೆ ಮಾತ್ರ. ಹಾಗಾಗುವುದೂ ಸ್ವಾಭಾವಿಕ. ಅದು ಜಡದ ಮುದ್ದೆ ಎಂಬುದು ನನಗೆ ಚೆನ್ನಾಗಿ ವೇದ್ಯವಾಗುತ್ತಿದೆ. . . . ಈಶ್ವರನು ನಾನಾರೂಪಗಳನ್ನು ಧರಿಸುತ್ತಾನೆ. ಅವುಗಳಲ್ಲಿ ಈ ಶರೀರವೂ ಒಂದು. . . . ನನಗೇನು ಕಾಣುತ್ತಿದೆ ನಿಮಗೆ ಗೊತ್ತೇ? ಎಲ್ಲವೂ ಅವನೇ ಆಗಿದ್ದಾನೆ. ಮನುಷ್ಯ, ಪ್ರಾಣಿ, ತೋಟ, ಮನೆ, ಬೀದಿ ಎಲ್ಲವೂ ಅವನೇ. ಯಜಮಾನ, ಯಜ್ಞ, ಯಜ್ಞಪಶು, ಯೂಪಸ್ತಂಭ ಎಲ್ಲವೂ ಅವನೇ."

ಹೇಳುತ್ತ ಹೇಳುತ್ತ ಸಮಾಧಿಸ್ಥರಾಗಿ, ಸ್ವಲ್ಪಕಾಲದ ಮೇಲೆ ಪ್ರತಿಳಿದು "ಈಗೇನೂ ಯಾತನೆಯೇ ಇಲ್ಲ. ಸಂಪೂರ್ಣ ಸುಖವಾಗಿದ್ದೇನೆ." ಎಂದರು.

ಮತ್ತೆ ದೂರದಲ್ಲಿ ಕೂತಿದ್ದ ಲಾಟುವನ್ನು ನೋಡಿ "ಲಾಟು ತಲೆಯ ಮೇಲೆ ಕೈಹೊತ್ತುಕೊಂಡು ಕುಳಿತಿದ್ದಾನೆ. ನನಗೆ ಭಗವಂತನೇ ಹಾಗೆ ಕೂತಂತೆ ಕಾಣುತ್ತದೆ." ಎಂದರು.

ಮತ್ತೆ ಹೇಳಿದರು :

"ಈ ಶರೀರ ಇನ್ನೂ ಕೆಲವು ಕಾಲ ಬಾಳಿದ್ದರೆ ಇನ್ನೆಷ್ಟೋ ಜನಗಳಿಗೆ ಚೈತನ್ಯೋದಯವಾಗುತ್ತಿತ್ತು. ಆದರೆ ತಾಯಿಯ ಇಷ್ಟ ಹಾಗಿಲ್ಲ. ನನ್ನ ಸರಳ ಶೀಲತೆಯ ದೆಸೆಯಿಂದ ಅನರ್ಹರಿಗೂ ಎಲ್ಲಿಯಾದರೂ ಐಶ್ವರ್ಯ ಲಭಿಸಿಬಿಟ್ಟೀ ತೆಂದೋ ಏನೋ ಆಕೆ ನನ್ನನ್ನು ಕರೆದೊಯ್ಯುತ್ತಿದ್ದಾಳೆ."

ರಾಖಾಲ : ದಯವಿಟ್ಟು ನಮಗಾಗಿ ದೇಹವು ಬಾಳುವಂತೆ ಕೇಳಿಕೊಳ್ಳಿ.

ಪರಮಹಂಸರು : ಆಕೆಯ ಇಚ್ಛೆಯ ಮೇಲಿದೆ.

ನರೇಂದ್ರ : ನಿಮ್ಮಿಚ್ಛೆಯೂ ಆಕಯ ಇಚ್ಛೆಯೊಡನೆ ಕೂಡಿದೆ.

ಪರಮಹಂಸರು : ನಾನು ಹೇಳಿದರೂ ಆಗುವಂತಿಲ್ಲ. ನನ್ನಿಚ್ಛೆಯೆಲ್ಲ ಆಕೆಯ ಇಚ್ಛೆಯಲ್ಲಿ ಲೀನವಾಗಿ ಹೋಗಿದೆ.

ಶಿಷ್ಯರೆಲ್ಲರೂ ಚಿಂತೆಯ ಭಾರದಲ್ಲಿ ಮೌನವಾಗಿ ಕುಳಿತರು. ಹೊರಗಡೆ ಗಾಳಿ ಮರಗಳ ನಡುವೆ ಮರ್ಮರನಾದದಿಂದ ಚಲಿಸುತ್ತಿತ್ತು. ಪರಮಹಂಸರು ತಮ್ಮ ಎದೆಯನ್ನು ಮುಟ್ಟಿ ತೋರಿಸುತ್ತ "ಇಲ್ಲಿ ಇಬ್ಬರಿದ್ದಾರೆ. ಒಬ್ಬಾಕೆ ದೇವಿ; ಇನ್ನೊಬ್ಬನು ಆಕೆಯ ಭಕ್ತ. ಕೈಮುರಿದುಕೊಂಡು ಕಾಯಿಲೆ ಬಿದ್ದಿರುವವನು ಎರಡನೆಯವನು. ಅಯ್ಯೋ, ಇದನ್ನೆಲ್ಲಾ ಯಾರಿಗೆ ಹೇಳಲಿ? ತಿಳಿದುಕೊಳ್ಳುವವರು ಯಾರಿದ್ದಾರೆ? . . . ಭಗವಂತನು ಭಕ್ತರೊಡನೆ ಮನುಷ್ಯನಾಗಿ ಅವತರಿಸು ತ್ತಾನೆ. ಆ ಮೇಲೆ ಭಕ್ತರೆಲ್ಲ ಭಗವಂತನಲ್ಲಿ ಐಕ್ಯವಾಗುತ್ತಾರೆ." ಎಂದರು.

ರಾಖಾಲ : ನೀವು ನಮ್ಮನ್ನು ಬಿಟ್ಟು ಹೋಗಬಾರದು.

ಪರಮಹಂಸರು ನಗುನಗುತ್ತ : "ಗಾಯಕರ ಗುಂಪೊಂದು ಮನೆಯ ಮುಂದೆ ಬರುತ್ತದೆ. ಹಾಡಿ, ಕುಣಿದು ಒಂದುತೆಯೇ ಹಠಾತ್ತಾಗಿ ಕಣ್ಮರೆ ಯಾಗುತ್ತಾರೆ. ಒಬ್ಬರಿಗೂ ಅವರ ಗುರುತಾಗುವುದಿಲ್ಲ!" ಎಂದರು. ಶಿಷ್ಯರು ನಕ್ಕರು. . . .

ಏಪ್ರಿಲ್ ೨೨ನೆಯ ತೇದಿ. ಸಿಂಧ್ ಪ್ರಾಂತಕ್ಕೆ ಸೇರಿದವನಾದ ಹಿರಾ ನಂದನು ಕಾಶೀಪುರಕ್ಕೆ ಬಂದನು. ಆತನು ಹಿಂದೆ ಕಲ್ಕತ್ತೆಯಲ್ಲಿ ವಿದ್ಯಾರ್ಥಿಯಾಗಿ ದ್ದಾಗ ಕೇಶವಚಂದ್ರಸೇನನ ಮುಖಾಂತರ ಶ್ರೀರಾಮಕೃಷ್ಣರ ಪರಿಚಯಮಾಡಿ ಕೊಂಡಿದ್ದನು. ಅವರಲ್ಲಿ ಆತನಿಗೆ ಬಹಳ ಭಕ್ತಿ. ಆ ದಿನ ಅವರು ಮಾತಾಡಲು

ಅಸಮರ್ಥರಾಗಿದ್ದುದರಿಂದ ಹಿರಾನಂದನೊಡನೆ ಮಾತಾಡಲು ನರೇಂದ್ರನಿಗೆ ಬೆಸಸಿದರು.

ಹಿರಾನಂದ. ಈಶ್ವರಭಕ್ತನೂ ದುಃಖಿಕ್ಕೀಡಾಗುವುದೇಕೆ ?

ನರೇಂದ್ರ: ಸೃಷ್ಟಿರಚನೆ ಪೈಶಾಚಿಕವಾಗಿದೆ. ನಾನಾಗಿದ್ದರೆ ಇದಕ್ಕಿಂತಲೂ ಉತ್ತಮ ಪ್ರಪಂಚವನ್ನು ನಿರ್ಮಿಸುತ್ತಿದ್ದೆ.

ಹಿರಾನಂದ: ದುಃಖವಿಲ್ಲದೆ ಸುಖವಿರಲು ಸಾಧ್ಯವೇ ?

ನರೇಂದ್ರ: ನಾನೇನು ವಿಶ್ವರಚನೆಗೆ ನಮೂನೆಯನ್ನು ಸೂಚಿಸುತ್ತಿಲ್ಲ. ಈಗಿರುವುದನ್ನು ಕುರಿತು ನನ್ನ ಅಭಿಪ್ರಾಯಕೊಟ್ಟೆನಷ್ಟೇ. ಆದರೂ ಪಾರಾಗಲು ಒಂದು ಮಾರ್ಗವಿದೆ. ಅದ್ವೈತ. ನಾನೇ ಎಲ್ಲವನ್ನೂ ಮಾಡುತ್ತಿದ್ದೇನೆ.

ಹಿರಾನಂದ: ಬಾಯಲ್ಲಾಡುವುದೇನೋ ಸುಲಭವೇ.

ನರೇಂದ್ರನು ಶಂಕರಾಚಾರ್ಯರ 'ನಿರ್ವಾಣಷಟ್ಕಂ' ಎಂಬ ಕವನವನ್ನು ಧೀರವಾಣಿಯಿಂದ ಹಾಡಿದನು.

ಹಿರಾನಂದ: ಕೊಟಡಿಯನ್ನು ಅದರ ಒಂದು ಮೂಲೆಯಿಂದ ನೋಡಿದರೇನು ? ಮಧ್ಯದಿಂದ ನೋಡಿದರೇನು ? ದಾಸೋಹಂ ಎಂಬ ದ್ವೈತಭಾವವೂ ಸೋಹಂ ಎಂಬ ಅದ್ವೈತಭಾವದಂತೆಯೇ ಬ್ರಹ್ಮಸಾಕ್ಷಾತ್ಕಾರಕಾರಿಯಾದುದು.

ಎಲ್ಲರೂ ಮೌನವಾಗಿದ್ದರು. ಹಿರಾನಂದನು ನರೇಂದ್ರನನ್ನು ಏನನ್ನಾದರೂ ಹಾಡುವಂತೆ ಕೇಳಿಕೊಂಡನು. ನರೇಂದ್ರನು ಶಂಕರಾಚಾರ್ಯರ 'ಕೌಪೀನ ಪಂಚಕಂ' ಎಂಬ ಕವನವನ್ನು ಹಾಡಿದನು. ಮತ್ತೆ ಪರಮಹಂಸರ ಹೇಳಿಕೆಯಂತೆ 'ಇರುವುದೆಲ್ಲ ನೀನೆ!' ಎಂಬರ್ಥದ ಒಂದು ಕೀರ್ತನೆಯನ್ನೂ ಹಾಡಿದನು.

ಹೀರಾನಂದ: ಹೌದು. 'ಇರುವುದೆಲ್ಲ ನೀನೆ!' ನೀನೇ ! ನಾನಲ್ಲ !

ನರೇಂದ್ರ: ಏಕವೊಂದಿದ್ದರೆ ಅನೇಕವನ್ನು ಕೊಡಬಲ್ಲೆ. ನೀನೇ ನಾನು ; ನಾನೇ ನೀನು. ಏಕಮೇವಾದ್ವಿತೀಯವಲ್ಲದೆ ಬೇರೊಂದಿಲ್ಲ.

ಪುನಃ ನರೇಂದ್ರನು: 'ಅಷ್ಟಾವಕ್ರ ಸಂಹಿತೆ'ಯಿಂದ ಶ್ಲೋಕಗಳನ್ನು ಹಾಡಿದನು. ಎಲ್ಲರೂ ನಿಶ್ಶಬ್ದರಾಗಿ ಆಲಿಸಿದರು.

ಪರಮಹಂಸರು: (ಹಿರಾನಂದನಿಗೆ ನರೇಂದ್ರನನ್ನು ತೋರಿಸಿ) ಅವನು ಒರೆ

ಗಳಚಿದ ಕತ್ತಿ! (ಮಹೇಂದ್ರನಿಗೆ ಹಿರಾನಂದನನ್ನು ತೋರಿಸಿ) ಎಷ್ಟು ಸಾತ್ವಿಕತೆ! ಹಾವಾಡಿಗನ ಮುಂದೆ ಸರ್ಪವು ಮಂತ್ರಮುಗ್ಧವಾಗಿರುವಂತೆ! . . .

ಮತ್ತೆ ಮೂರು ಮಾಸಗಳು ಕಳೆದುವು. ಗುರುದೇವನ ಕಾಯಿಲೆ ಯಥಾ ಸ್ಥಿತಿಯಲ್ಲಿತ್ತು.

ಒಂದು ದಿನ ನಾಗಮಹಾಶಯನು ಬಂದನು. ಪರಮಹಂಸರು "ಹತ್ತಿರ ಬಾ. ಕುಳಿತುಕೋ. ನಿನ್ನ ದೇಹಸ್ಪರ್ಶದಿಂದ ನನ್ನ ನೋವು ಕಡಮೆಯಾಗುತ್ತದೆ." ಎಂದು ಹೇಳಿ, ಆತನನ್ನು ಅಪ್ಪಿಕೊಂಡು "ನೋಡಿಲ್ಲ, ದುರ್ಗಾಚರಣ. ವೈದ್ಯರೆಲ್ಲರೂ ಸೋತುಹೋದರು. ನೀನೇನಾದರೂ ಗುಣಮಾಡಬಲ್ಲೆಯಾ?" ಎಂದರು.

ನಾಗಮಹಾಶಯನು ಸ್ವಲ್ಪ ಹೊತ್ತು ಆಲೋಚಿಸಿ ಕಡೆಗೆ, ಗುರುಗಳ ರೋಗವನ್ನು ತಾನು ಸ್ವೀಕರಿಸುವುದಾಗಿ ನಿಶ್ಚಯಿಸಿ "ಆಗಲಿ, ಮಹಾಶಯ, ತಮ್ಮ ಕೃಪೆಯಿಂದ ನಾನು ನಿಮ್ಮನ್ನು ಗುಣಮಾಡಬಲ್ಲೆ." ಎಂದು ಸಿದ್ಧನಾದನು. ಕ್ಷಣಮಾತ್ರದಲ್ಲಿ ಪರಮಹಂಸರಿಗೆ ಸಕಲವೂ ವೇದ್ಯವಾಗಿ ಆತನನ್ನು ದೂರತಳ್ಳಿ "ಬೇಡ, ಬೇಡ! ನಿನ್ನಿಂದ ಸಾಧ್ಯವೆಂಬುದು ನನಗೆ ಗೊತ್ತು!" ಎಂದರು.

ಮಹಾ ಸಮಾಧಿಗೆ ಮೂರು ದಿನಗಳು ಮೊದಲು ಒಂದು ದಿನ ನರೇಂದ್ರನನ್ನು ತಮ್ಮ ರುಗ್ಣಶಯ್ಯೆಯ ಪಕ್ಕಕ್ಕೆ ಕರೆದರು. ಕೊಟಡಿಯಲ್ಲಿ ಯಾರೂ ಇರಲಿಲ್ಲ—ಗುರು ಶಿಷ್ಯರಿಬ್ಬರು ಹೊರತು. ಗುರುದೇವನು ನರೇಂದ್ರನನ್ನು ತಮ್ಮೆದುರು ಕೂತುಕೊಳ್ಳುವಂತೆ ಮಾಡಿ, ಆತನನ್ನು ಎವೆಯಿಕ್ಕದೆ ನೋಡುತ್ತ ಸಮಾಧಿಸ್ಥರಾದರು. ನರೇಂದ್ರನಿಗೆ ದೇಹದಲ್ಲಿ ವಿದ್ಯುತ್ ಪ್ರವಾಹವಾದಂತಾಯಿತು. ಕ್ರಮೇಣ ಆತನೂ ಬಾಹ್ಯ ಪ್ರಜ್ಞಾಶೂನ್ಯನಾಗಿ ಕುಳಿತನು. ಹಾಗೆ ಎಷ್ಟು ಹೊತ್ತು ಕುಳಿತಿದ್ದನೋ ಆತನಿಗೆ ತಿಳಿಯಲಿಲ್ಲ. ಕಣ್ಣು ತೆರೆದು ನೋಡಲು ಪರಮಹಂಸರು ಬಿಕ್ಕಿ ಬಿಕ್ಕಿ ಅಳುತ್ತಿದ್ದರು. ನರೇಂದ್ರನು ಕಾರಣವೇನೆಂದು ಪ್ರಶ್ನೆಮಾಡಿದನು. ಗುರುಗಳೆಂದರು:

"ಇಂದು ನಿನಗೆ ನನ್ನ ಸರ್ವಸ್ವವನ್ನೂ ದಾನಮಾಡಿದ್ದೇನೆ. ನಾನಿನ್ನು ಮೇಲೆ ರಿಕ್ತನಾದೊಬ್ಬ ದರಿದ್ರ ಫಕೀರನಂತೆ! ಈ ಶಕ್ತಿಯಿಂದ ನೀನು ಲೋಕಕ್ಕೆ

ಮಹದುಪಕಾರವಮಾಡುವೆ. ಎಲ್ಲವನ್ನೂ ಮಾಡಿ ಮುಗಿಸಿದ ಮೇಲೆಯೇ ನಿನಗೆ ಬಿಂದಿರುಗಲು ಸಾಧ್ಯವಾಗುತ್ತದೆ.''

ನಾಳೆ ಮಹಾ ಸಮಾಧಿ. ಗುರುದೇವನ ರೋಗವು ಉಲ್ಬಣಾವಸ್ಥೆಗೇರಿದೆ. ಶಿಷ್ಯರೆಲ್ಲರೂ ಸುತ್ತಲೂ ಕಟ್ಟಿಕಟ್ಟಿ ನಿಂತಿದ್ದಾರೆ. ಒಬ್ಬೊಬ್ಬರ ಮನಸ್ಸು ಒಂದೊಂದು ವಿಧವಾಗಿದೆ. ನರೇಂದ್ರನು "ಈಗಿವರು ಇಂತಹ ಭಯಂಕರ ಯಾತನೆಯಲ್ಲಿಯೂ ತಾವು ಅವತಾರಪುರುಷರೆಂದು ಹೇಳುವುದಾದರೆ ಸಂಪೂರ್ಣವಾಗಿ ನಂಬಬಹುದಿತ್ತು" ಎಂದು ಯೋಚಿಸುತ್ತಿದ್ದಾನೆ. ಮಾತಾಡಲಾರದೆ ನರಳುತ್ತಿದ್ದ ಪರಮಹಂಸರು 'ಇದ್ದಕ್ಕಿದ್ದ ಹಾಗೆ ಶಕ್ತಿಪೂರ್ಣ ಅಧಿಕಾರ ವಾಣಿ'ಯಿಂದ ಹೇಳಿದರು!

"ಯಾರು ರಾಮನೋ ಯಾರು ಕೃಷ್ಣನೋ ಆತನಿಂದು ಈ ಶರೀರದಲ್ಲಿ ರಾಮಕೃಷ್ಣನಾಗಿದ್ದಾನೆ—ನಿನ್ನ ವೇದಾಂತ ದೃಷ್ಟಿಯಿಂದಲ್ಲ."

ನರೇಂದ್ರನು ಬೆಚ್ಚಿಬಿದ್ದನು. ಅನೇಕ ನಿದರ್ಶನಗಳು ಅನುಭವಕ್ಕೆ ಬಂದಿದ್ದರೂ ಮತ್ತೂ ಸಂದೇಹಪಟ್ಟುದಕ್ಕಾಗಿ ನಾಚಿಕೆಯಿಂದ ತಲೆಬಾಗಿದನು.

ಕ್ರಿ. ಶ. ೧೮೮೬ ನೆಯ ಆಗಸ್ಟು ತಿಂಗಳು ಹದಿನೈದನೆಯ ತೇದಿಯ ಭಾನುವಾರ. ಶ್ರಾವಣಮಾಸದ ಹುಣ್ಣಿಮೆ. ಸೂರ್ಯನು ಎಂದಿನಂತೆ ಪೂರ್ವದಿಗಂತದಿಂದ ಮೂಡಿ ಬಂದನು. ಆದರೆ ಆತನ ಮುಖಬಿಂಬವು ಮ್ಲಾನವಾಗಿದೆ! ಸಮೀರಣನು ತರುಪಲ್ಲವ ಹಿಲ್ಲೋಲಗಳ ಮಧ್ಯೆ ಎಂದಿನಂತೆ ನುಸುಳಿ ಬಂದನು. ಆದರೆ ಆತನ ಮರ್ಮರದಲ್ಲಿ ಇದೇನು ನರಳುದನಿ? ಮನೆಯ ಹೊರಗೆ ತೋಟದಲ್ಲಿ ಮರಗಳ ಮೇಲೆ ನೂರಾರು ಹಕ್ಕಿಗಳು ಹಾಡುತ್ತಿವೆ. ಆದರೆ ಆ ಗಾನದಲ್ಲಿ ರೋದನ ತುಂಬಿ ತುಳುಕುವಂತಿದೆ! ಮೇಲೆ ಅನಂತ ದೂರದ ಆಕಾಶದಲ್ಲಿ ಮೇಘಗಳು ತೇಲುತ್ತಿವೆ. ಆದರೆ ಅವುಗಳೆಲ್ಲವೂ ಮಹಾ ಅಪಶಕುನದ ಛಾಯೆಗಳಂತೆ ಘೋರಾಕಾರವಾಗಿ ಭೀಕರವಾಗಿ ಪಿತೂರಿಗಾರರಂತಿವೆ! ಕಾಶೀಪುರದ ಉದ್ಯಾನಮಂದಿರವು ಧ್ಯಾನಮೂರ್ತಿಯಂತಿದೆ. ಜನಗಳು ಭಯಾನ್ವಿತರಾಗಿ ಪಿಸುಮಾತಾಡುತ್ತಾ ಹಿಂದಕ್ಕೂ ಮುಂದಕ್ಕೂ ಉದ್ವೇಗದಿಂದ ತಿರುಗಾಡುತ್ತಿದ್ದಾರೆ. ಗುರುದೇವನ ರೋಗಸ್ಥಿತಿ ವಿಷಮವಾಗಿದೆ!

ಜಗದಂಬೆಯ ಭಕ್ತನಾಗಿ ನಿರ್ವಿಕಲ್ಪ ಸಮಾಧಿಯಲ್ಲಿ ಬ್ರಹ್ಮಸಾಕ್ಷಾತ್ಕಾರ

ಮಾಡಿದ ಮಹಾಪುರುಷನು ಹಾಸಿಗೆಯ ಮೇಲೆ ಮಲಗಿ ನರಳುತ್ತಿದ್ದಾನೆ. ಯಾತನೆ ಮಿತಿಮೀರಿಹೋಗಿದೆ. ನಾಡಿಗಳ ಚಲನೆಯೂ ಅಸ್ಥಿರವಾಗಿದೆ. ಶಿಷ್ಯರೆಲ್ಲರೂ ಶೋಕಾಕ್ರಾಂತರಾಗಿ, ನಿಸ್ಸಹಾಯರಾಗಿ ಸುತ್ತಲೂ ಕಂಬನಿದುಂಬಿ ನಿಂತಿದ್ದಾರೆ. ದೃಶ್ಯವು ಕ್ರಿಸ್ತನ ಶಿಲುಬೆಯಂತೆಯೂ ಭೀಷ್ಮನ ಶರಶಯ್ಯೆಯಂತೆಯೂ ಭಯಾನಕವಾಗಿದೆ. ರಕ್ಷಕನು ತನ್ನನ್ನೇ ರಕ್ಷಿಸಿಕೊಳ್ಳಲಾರನೇ? ಡಾಕ್ಟರ್ ನವೀನಪಾಲನು ಬಂದು ಶರೀರ ಪರೀಕ್ಷೆ ಮಾಡಿದನು. ಆತನಿಂದ ಏನು ಹೇಳಲೂ ಸಾಧ್ಯವಾಗಲಿಲ್ಲ. ನಾಡಿಯ ಪರೀಕ್ಷೆಯಲ್ಲಿ ನಿಷ್ಣಾತನಾಗಿದ್ದ ಶಿಷ್ಯನೊಬ್ಬನು ಪರೀಕ್ಷಿಸಿದನು. ಆತನ ಮುಖಚಿಹ್ನೆ ನಿರಾಶಾಸೂಚಕವಾಯಿತು. ಸನ್ನಿವೇಶವು ಪ್ರಮಾದಕರವಾಗಿದೆ ಎಂದು ಹೇಳಿಬಿಟ್ಟನು. ಪ್ರಾತಃಕಾಲ ಕಳೆಯಿತು, ಮಧ್ಯಾಹ್ನವಾಯಿತು. ರೋಗಿಯ ಹೊಟ್ಟೆಗೆ ಒಂದು ತೊಟ್ಟು ಗಂಜಿಯೂ ಇಳಿಯಲಿಲ್ಲ. ಸಂಧ್ಯಾಕಾಲದಲ್ಲಿ ಗುರುದೇವನಿಗೆ ಉಸಿರಾಡುವುದೂ ಕಠಿನವಾಯಿತು. ದೃಶ್ಯವು ಹೃದಯವಿದ್ರಾವಕವಾಯಿತು. ಶಿಷ್ಯರೆಲ್ಲ ಶಿಶುಗಳಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರ ಜೀವನಜ್ಯೋತಿ ಇನ್ನೇನು ಮಾಯಾಜಗತ್ತಿನಿಂದ ಮಾಸಿಹೋಗುವುದರಲ್ಲಿದೆ. ತಮ್ಮ ನವನಿಧಿ ಸೂರೆಹೋಗುವುದರಲ್ಲಿದೆ. ಇದುವರೆಗೆ ಶ್ರೀಮಂತರಾಗಿದ್ದವರು ಇನ್ನು ದರಿದ್ರರಾಗಿಬಿಡುತ್ತಾರೆ. ಮರುದಿನ ಮುಗುಳುನಗೆಯಿಂದ ತಮಗೆ ಸ್ವಾಗತವೀಯುವರಾರು? ತಮ್ಮ ಸಂದೇಹಸಂಕಟಗಳನ್ನು ಪರಿಹರಿಸುವರಾರು? ತಮ್ಮ ಸುಖದುಃಖಗಳಲ್ಲಿ ಭಾಗಿಯಾಗುವರಾರು? ಚಿಂತಿಸಿದಷ್ಟೂ ಶೋಕವು ದ್ವಿಗುಣಿತವಾಯಿತು. ಅತ್ತರು.

ನಿಶಿ ಪ್ರಾರಂಭವಾಯಿತು. ಪರಮಹಂಸರಿಗೆ ತುಸು ಹಸಿವು ತೋರಿದ್ದರಿಂದ ಸ್ವಲ್ಪ ಗಂಜಿಯನ್ನು ಕುಡಿಸಲು ಪ್ರಯತ್ನಪಟ್ಟರು. ಆದರೆ ಒಂದು ಹನಿಯೂ ಹೊಟ್ಟೆಗೆ ಹೋಗಲಿಲ್ಲ. ನಿರಂತರವೂ ಶುಶ್ರೂಷೆಯ ಕಾರ್ಯದಲ್ಲಿಯೇ ತನ್ಮಯನಾಗಿದ್ದ ತಮ್ಮ ಪ್ರಿಯಶಿಷ್ಯ ಶಶಿಯ ಎದೆಯ ಮೇಲೆ ಒರಗಿಕೊಂಡು ಮಲಗಿದರು. ಇನ್ನಿಬ್ಬರು ಶಿಷ್ಯರು ಬೀಸಣಿಗೆಯಿಂದ ಗಾಳಿ ಬೀಸುತ್ತಿದ್ದರು. ಹಠಾತ್ತಾಗಿ ಪರಮಹಂಸರು ಸಮಾಧಿಸ್ಥರಾದರು. ದೇಹವು ನಿಷ್ಪಂದಸ್ಥಿರವಾಯಿತು. ಆ ಸಮಾಧಿಯಲ್ಲಿ ಏನೋ ಒಂದು ಅಪೂರ್ವತೆ ಕಂಡುಬಂದುದರಿಂದ ಶಶಿ ಬೆಚ್ಚಿಬಿದರ ಗುರುದೇವನ ಕಳೇಬರವನ್ನು ಮೆಲ್ಲಗೆ ಓಸರಿಸಿ ತಲೆದಿಂಬಿನ ಮೇಲೆ ಇಟ್ಟನು.

ಇಟ್ಟವನೇ ಗಟ್ಟಿಯಾಗಿ ಅಳತೊಡಗಿದನು. ಶಿಷ್ಯರಿಗೆ ಕೈಕಾಲು ಬರಲಿಲ್ಲ. ಇಬ್ಬರು ವೈದ್ಯರನ್ನು ಕರೆತರಲೂ ಮತ್ತಿಬ್ಬರು ಗಿರೀಶ ರಾಮಚಂದ್ರರನ್ನು ಕರೆತರಲೂ ಓಡಿದರು.

ಮಧ್ಯರಾತ್ರಿ ಕಳೆದ ಮೇಲೆ ಪರಮಹಂಸರಿಗೆ ಪ್ರಜ್ಞೆ ಮರಳಿತು. ಬಹಳ ಹಸಿವಾಗುತ್ತದೆ ಎಂದೂ ಹೇಳಿದರು. ನರೇಂದ್ರ ಮೊದಲಾದವರು ಬಹಳ ಎಚ್ಚರಿಕೆಯಿಂದ ದಿಂಬುಗಳ ಆಲಂಬನೆಯಲ್ಲಿ ಅವರನ್ನು ಕುಳ್ಳಿರುವಂತೆ ಮಾಡಿ, ಒಂದು ಬಟ್ಟಲು ಗಂಜಿ ಕೊಟ್ಟರು. ಗುರುದೇವನು ಅದಷ್ಟನ್ನೂ ನಿರಾತಂಕವಾಗಿ ಕುಡಿದನು. ಬಹಳ ದಿನಗಳಿಂದ ಅಷ್ಟು ಸುಲಭವಾಗಿ ಪಥ್ಯವು ಹೊಟ್ಟೆಗೆ ಹೋಗಿರಲಿಲ್ಲ. ತರುವಾಯ ನೋವೂ ಸ್ವಲ್ಪ ಶಮನವಾದಂತೆ ತೋರಿತು. ಮಲಗಿ ನಿದ್ದೆಮಾಡಿದರೆ ಒಳ್ಳೆಯದೆಂದು ನರೇಂದ್ರನು ಸೂಚಿಸಲು ಅವರು ಎಂದಿನಂತಲ್ಲದೆ ಮೂರು ಬಾರಿ ಜಗದಂಬೆಯ ನಾಮವನ್ನು ಧೀರವಾಗಿ ಉಚ್ಚರಿಸಿ ಮೆಲ್ಲಗೆ ಮಲಗಿದರು.

ರಾತ್ರಿ ಒಂದು ಗಂಟೆ ಎರಡು ನಿಮಿಷವಾಗಿತ್ತು. ಶ್ರೀರಾಮಕೃಷ್ಣ ಪರಮಹಂಸ ಗುರುದೇವನ ಮಂಗಲಕಾಯವು ಮಿಂಚಿನ ಹೊನಲಿಗೆ ಸಿಕ್ಕಿದಂತೆ ವಿಕಂಪಿಸಿತು. ಮೈನವಿರು ನಿಮಿರಿ ನಿಂತಿತು. ನಯನದೃಷ್ಟಿ ಭ್ರೂಮಧ್ಯಸ್ಥವಾಯಿತು. ಮುಖದಲ್ಲಿ ಮಂದಹಾಸವೊಂದು ಲಾಸ್ಯವಾಡಿತು; ಸುಳಿದು ನಲಿದು ಗಾಂಭೀರ್ಯಸಮುದ್ರದಲ್ಲಿ ಮುಳುಗಿಹೋಯಿತು.

ಕ್ರಿ. ಶ. ೧೮೮೬ ನೇ ಆಗಸ್ಟ್ ೧೬ ನೆಯ ಸೋಮವಾರ ಬ್ರಾಹ್ಮಮುಹೂರ್ತದಲ್ಲಿ ಹತ್ತೊಂಬತ್ತನೆಯ ಶತಮಾನದ ಮಹಾಪುರುಷನು ಮಹಾ ಸಮಾಧಿಯಲ್ಲಿ ಬ್ರಹ್ಮಲೀನವಾದನು.

ಶಿಷ್ಯರೆಲ್ಲರೂ ಸೇರಿ "ಭಗವಾನ್ ಶ್ರೀರಾಮಕೃಷ್ಣ ಪರಮಹಂಸ ದೇವ ಕೀ ಜೈ!" ಎಂದು ಉಚ್ಚಕಂಠದಿಂದ ದಿಗ್ದಿಗಂತವ್ಯಾಪಿಯಾಗುವಂತೆ ಜಯಧ್ವನಿಗೈದರು.

---

## ೮. ಅನಂತರ

ಮಹಾಪುರುಷರ ಜನ್ಮ ಚರಿತ್ರೆ ಕಾಲದಲ್ಲಿ ಕೊನೆಗಂಡರೂ ಅವರ ಜೀವನ ಯಾತ್ರೆ ಕಾಲಕ್ಕಿಂತಲೂ ಚಿರಂಜೀವಿಯಾದುದು. ಅವರ ಮಾತುಕತೆಗಳು, ಅವರ ವಚನೋಪದೇಶಗಳು, ಅವರ ಜೀವನ ಉಪಾಖ್ಯಾನಗಳು, ಎಲ್ಲಕ್ಕಿಂತಲೂ ಅತಿಶಯವಾಗಿ ಅದರ ಚೈತನ್ಯ ಮತ್ತು ಆತ್ಮಶಕ್ತಿಗಳು ಜಗಜ್ಜೀವನದ ನಾಡಿಗಳನ್ನು ಪ್ರವೇಶಿಸಿ, ಅದರ ರಕ್ತನಾಳಗಳಲ್ಲಿ ಮೊರೆದು, ಅದರ ಒಂದೊಂದು ಧಮನಿಯಲ್ಲಿಯೂ ಪ್ರತಿಧ್ವನಿಗೈದು, ರಕ್ತದಲ್ಲಿ ರಕ್ತವಾಗಿ, ಮಾಂಸದಲ್ಲಿ ಮಾಂಸವಾಗಿ, ಅಸ್ಥಿಯಲ್ಲಿ ಅಸ್ಥಿಯಾಗಿ, ಜೀವನದ ಶ್ರೇಯೋಗಮನಕ್ಕೊಂದು ಶಾಶ್ವತಪ್ರೇರಕ ಶಕ್ತಿಯಾಗಿ, ಕಷ್ಟಸಂಕಟಗಳಲ್ಲೊಂದು ವಜ್ರಕವಚವಾಗಿ, ನಿರಾಶೆಯ ತಿಮಿರದಲ್ಲೊಂದು ಆಶಾಕಿರಣವಾಗಿ, ಅಧೈರ್ಯದ ಕಾಲದಲ್ಲೊಂದು ಪಾಂಚಜನ್ಯವಾಗಿ ಪರಿಣಮಿಸಿ ಚಿರಂತನವಾಗಿರುತ್ತವೆ. ಆದ್ದರಿಂದ ಮಹಾಪುರುಷನಿಗೆ ಮರಣವಿಲ್ಲ. ಆತನು ಚಿರಂಜೀವಿ. ಕರ್ಮಮಯ ಜಗತ್ತಿನಲ್ಲಿ ಆತನಾ ಚೈತನ್ಯ ನಿರ್ಝರಿಣಿ ಚಿರತರಂಗಿಣಿ.

ಅದರಲ್ಲಿಯೂ ಶ್ರೀರಾಮಕೃಷ್ಣ ಪರಮಹಂಸರಂತಹ ಅಸಂಖ್ಯಮುಖಿ ಚೈತನ್ಯಮೂರ್ತಿ ತನ್ನ ವ್ಯಕ್ತಿರೂಪವನ್ನು ವಿಸರ್ಜಿಸಿ ವಿರಾಡ್ರೂಪಿಯಾಯಿತೆಂದರೆ ಅಪ್ರತಿಹತವಾಗುತ್ತದೆ. ವ್ಯಷ್ಟಿ ಸಮಷ್ಟಿಯಲ್ಲಿ ಲೀನವಾಗಿ ಸಹಸ್ರರೂಪಿಯಾಗುತ್ತದೆ; ವಿಶ್ವರೂಪಿಯಾಗುತ್ತದೆ; ಸಮಧಿಕ ಶಕ್ತಿಯುಕ್ತವಾಗುತ್ತದೆ. ಪರಮಹಂಸರ ನಿರ್ಯಾಣಾನಂತರ ಅವರ ಚೈತನ್ಯ ಜಲರಾಶಿ ಶಿಷ್ಯಸಂಕುಲ ತರಂಗ ಸಮೂಹ ರೂಪಿಯಾಗಿ ಸ್ವಲ್ಪಕಾಲ ಅಜ್ಞಾತವಾಸದಲ್ಲಿತ್ತು. ತರುವಾಯ ಆ ತರಂಗಗಳಲ್ಲಿ ಒಂದು ವಿಸ್ಫಾರಿತವಾಗಲು ತೊಡಗಿ, ಕ್ರಮೇಣ ಬೃಹದಾಕಾರವನ್ನು ತಾಳಿ, ಪೂರ್ವಾರ್ಧ ಪಶ್ಚಿಮಾರ್ಧ ಗೋಲಗಳೆರಡರಲ್ಲಿಯೂ ವ್ಯಾಪಿಸಿ ಲೋಕಲೋಚನಗಳನ್ನು ತನ್ನೆಡೆಗೆ ಸೆಳೆದು ಸೆರೆಹಿಡಿಯಿತು. ಆ ಮಹಾತರಂಗ ತಾಡನದಿಂದ ಸಹಸ್ರಾರು ವೀಚಿಗಳೆದ್ದು ಎಲ್ಲೆಲ್ಲಿಯೂ ಮೊರೆಯತೊಡಗಿದುವು. ಕಡೆಗೆ ಆ ಹಿಲ್ಲೋಲ ಸಮ್ಮೇಲದಿಂದ ಶ್ರೀರಾಮಕೃಷ್ಣ ಮಹಾಸಂಘವು

ನಿರ್ಮಾಣವಾಯಿತು. ಆ ಸಂಘವು ದೇಶವಿದೇಶಗಳಲ್ಲಿ ಹಬ್ಬಿ, ಶ್ರೀರಾಮಕೃಷ್ಣ ವಿವೇಕಾನಂದರ ಸಂದೇಶಗಳನ್ನು ಸಾರಿ, ಆರ್ಯಾವರ್ತದ ಧರ್ಮತೂರ್ಯವು ಮತ್ತೊಮ್ಮೆ ಪ್ರಪಂಚದ ಎಲ್ಲ ಮಾನವರ ಕರ್ಣಗಳಲ್ಲಿಯೂ ಪ್ರತಿಧ್ವನಿತವಾಗುವಂತೆ ಸಾಹಸಮಾಡುತ್ತಿದೆ. ಆ ಸಂಘವಲ್ಲದೆ ಭರತಖಂಡದ ಇತರ ಸ್ವತಂತ್ರ ವಾಣಿಗಳೂ ನವಯುಗದ ನವೋದಯದ ಶಾಂತಿ ಸಂದೇಶಗಳನ್ನು ಜಗತ್ತಿಗೆ ಸಾರುತ್ತಿವೆ. ಪ್ರಪಂಚವು ಮತ್ತೊಮ್ಮೆ ಪೂರ್ವದ ಕಡೆಗೆ ಕಣ್ಣು ತಿರುಗಿಸಿ ಬೆಳಕನ್ನು ನಿರೀಕ್ಷಿಸಿ ಆಹ್ವಾನಿಸುತ್ತಿದೆ.

ಅದನ್ನಿಲ್ಲಿ ಸಂಕ್ಷೇಪವಾಗಿ ವಿವರಿಸುತ್ತೇವೆ:

ಗುರುದೇವನ ನಿಧನಾನಂತರ ತರುಣಶಿಷ್ಯರು ಸಂಸಾರಕ್ಕೆ ಹಿಂದಿರುಗದೆ, ಮುಂದೇನು ಮಾಡಬೇಕೆಂದು ಆಲೋಚಿಸಿದರು. ಗೃಹತ್ಯಾಗ ಮಾಡಿ, ಮನೆಯವರ ಮುನಿಸಿಗೆ ಪಾತ್ರರಾಗಿದ್ದ ಅವರಿಗೆ ಅರ್ಥಸಹಾಯ ದೊರೆಯುವುದು ದುರ್ಲಭವಾಯಿತು. ಆದರೆ ಪರಮಹಂಸರ ಸಂಸಾರಿ ಶಿಷ್ಯರು ಅವರಿಗೆ ನೆರವಾದರು. ಬಲರಾಮ ಬಸು, ಸುರೇಂದ್ರನಾಥ ಮಿತ್ರ, ಮಹೇಂದ್ರನಾಥ ಗುಪ್ತ, ಗಿರೀಶಚಂದ್ರ ಘೋಷ—ಈ ನಾಲ್ವರ ಸಹಾಯದಿಂದ ಕಲ್ಕತ್ತೆಯ ಬಳಿ ವರಾಹನಗರದಲ್ಲಿ ಪಾಳುಮನೆಯೊಂದನ್ನು ಬಾಡಿಗೆಗೆ ತೆಗೆದುಕೊಂಡು, ಅಲ್ಲಿಗೆ ಶ್ರೀರಾಮಕೃಷ್ಣರ ಪುಣ್ಯಶರೀರದ ಭಸ್ಮಾವಶೇಷವನ್ನು ಶಿರಸಾವಹಿಸಿಕೊಂಡುಹೋಗಿ ಕುಮಾರ ಸಂನ್ಯಾಸಿಗಳು ಕಠೋರ ತಪಸ್ಸಾಧನೆಗೆ ಮೊದಲು ಮಾಡಿದರು. ಆ ಮೇಲೆ ಸ್ವಾಮಿ ವಿವೇಕಾನಂದರಾದ ನರೇಂದ್ರನು ಸೋದರ ಸಂನ್ಯಾಸಿಗಳಿಗೆ ದಳಪತಿಯಾಗಿ, ಮುಂದೆ ಕೈಕೊಳ್ಳಲಿರುವ ಮಹಾಕಾರ್ಯದೀಕ್ಷೆಗೆ ಅವರನ್ನೆಲ್ಲ ಶಿಕ್ಷಣಮಾಡಿದನು.

ಸ್ವಾಮಿ ವಿವೇಕಾನಂದರು ಪರಿವ್ರಾಜಕರಾಗಿ ಆರ್ಯಾವರ್ತವನ್ನೆಲ್ಲ ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಸಂಚರಿಸಿ, ದೇಶದ ದಾರಿದ್ರ್ಯ, ದೌರ್ಬಲ್ಯ, ಮೌಢ್ಯಗಳನ್ನು ಕಣ್ಣಾರೆ ಕಂಡು ಎದೆನೊಂದು, ಅವುಗಳನ್ನು ಪರಿಹರಿಸಿ ಮಾತೃಭೂಮಿಯನ್ನು ಪುನರುಜ್ಜೀವನಗೊಳಿಸಲು ಕಾತರರಾಗಿ ಅಮೇರಿಕಾದ ಚಿಕಾಗೋ ನಗರದಲ್ಲಿ ನೆರೆದ ಧರ್ಮಮಹಾಸಭೆಗೆ ಹೋಗಿ, ಅಲ್ಲಿ ಆರ್ಯಧರ್ಮದ ಜಯಡಿಂಡಿಮವನ್ನು ಬಾರಿಸಿ, ಅಮೇರಿಕಾದ ಜನಗಳನ್ನೂ ಜಗತ್ತನ್ನೂ ತಮ್ಮ

ವೇದಾಂತವಾಣಿಯಿಂದ ಬೆರಗುಗೊಳಿಸಿ, ಮಾತೃಭೂಮಿಗೆ ಕೀರ್ತಿಯನ್ನು ಸಂಪಾದಿಸಿ, ಪುನಃ ಭರತಖಂಡಕ್ಕೆ ಹಿಂದಿರುಗಿ ಬಂದು ಕೊಲಂಬೋದಿಂ ಆಲ್ಮೋರದ ವರೆಗೆ ತಮ್ಮ ಅಮೃತ ಸಂದೇಶವನ್ನು ಸಿಂಹಕಂಠದಿಂದ ಸಾರಿ ಜನರಲ್ಲಿ ಜಡಜೀವನವು ನಶಿಸಿ ಚೈತನ್ಯವು ಚಿಮ್ಮುವಂತೆಮಾಡಿ, ನವಯುಗ ಚಾರ್ಯರೆಂಬ ಬಿರುದಿಗೆ ಪಾತ್ರರಾದ ಮಹಾಕಥೆಯನ್ನು ವಾಚಕರು ಅನ್ಯತ್ರ ಓದಬಹುದು. ಪ್ರಕೃತದಲ್ಲಿ ಅವರ ಸಂದೇಶವನ್ನು ಸಾರಾಂಶವಾಗಿ ಹೇಳಿ ಶ್ರೀರಾಮಕೃಷ್ಣ ಮಹಾಸಂಘಸ್ಥಾಪನೆ, ನವಯುಗ ಸಂನ್ಯಾಸ, ಶ್ರೀರಾಮ ಕೃಷ್ಣ ಮಹಾಸಂಘದ ಕಾರ್ಯಕಲಾಪಗಳು, ಅದರ ಕ್ಷೇತ್ರಗಳು, ಅದರ ಧ್ಯೇಯ ಗಳು, ಅದು ಸಾಧಿಸಿರುವ ಮತ್ತು ಸಾಧಿಸಲಿರುವ ಕರ್ಮಸಮೂಹಗಳು—ಇವ ಗಳನ್ನು ಕುರಿತು ತಿಳಿಸುವುದು ನಮ್ಮ ಕೆಲಸವಾಗಿದೆ.

ಸ್ವಾಮಿ ವಿವೇಕಾನಂದರು ಧರ್ಮಮಹಾಸಭೆಯಲ್ಲಿ ಮಾಡಿದ ಉಪನ್ಯಾ ಸವು ಪರಮಹಂಸರ ಸರ್ವಧರ್ಮಸಮನ್ವಯಕ್ಕೆ ರನ್ನಗನ್ನಡಿಯಂತಿದೆ. ಪ್ರಸಿದ್ಧ ಉಪನ್ಯಾಸದಲ್ಲಿ ಅನ್ಯಮತಸಹನೆ, ಸ್ವೀಕರಣೆ, ಭಿನ್ನಭಿನ್ನಮತಗ ಹೃದಯದಲ್ಲಿರುವ ಅಭಿನ್ನ ಭಾವ, ಮಾನವನ ದೇವತ್ವ, ಆತ್ಮಬ್ರಹ್ಮರ ಐಕ್ಯ, ಅನೇ ಪಥಗಳ ಏಕಗಮ್ಯ, ಸರ್ವಮಾನವರ ಸಮಾನತೆ, ಎಲ್ಲ ಸಂಸ್ಕೃತಿಗಳ ಶ್ರೇಷ್ಠ ಮೊದಲಾದ ವಿಷಯಗಳನ್ನು ಕುರಿತು ಅನನುಕರಣೀಯವಾದ ವಾಗ್ಮಿತೆಯಿಂ ಸಾರಿದ್ದಾರೆ:

"ಭಿನ್ನ ಭಿನ್ನ ಪರ್ವತಗಳಲ್ಲಿ ಉದಿಸಿದ ನದಿಗಳು ಭಿನ್ನ ಭಿನ್ನ ಮಾರ್ಗಗಳ ಹರಿದು ಕಡೆಗೆ ಸಮುದ್ರವನ್ನು ಸೇರುವಂತೆ, ಹೇ ದೇವಾ, ಭಿನ್ನ ಭಿನ್ನ ಸ್ವಭ ವದ ಮನುಷ್ಯರೆಲ್ಲರೂ ಭಿನ್ನಭಿನ್ನಮತ ಮಾರ್ಗಗಳಿಂದ ಕಡೆಗೆ ನಿನ್ನನ್ನೇ ಸೇರು ತ್ತಾರೆ.

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ |
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ||

(ಗೀ ೪. ೧೧)

"ಅನ್ಯಮತದ್ವೇಷವೂ ಸ್ವಮತಭ್ರಾಂತಿಯೂ ನಮ್ಮಿ ಸುಂದರ ವಸುಂಧ ಯನ್ನು ಬಹುಕಾಲದಿಂದಲೂ ಆಕ್ರಮಿಸಿಕೊಂಡಿವೆ. ಅವುಗಳ ಹಿಂಸಾಕಾಯ

ದಿಂದ ಭೂಮಿ ಎಷ್ಟೋ ಸಾರಿ ಮಾನವರಕ್ತದಿಂದ ಪ್ಲಾವಿತವಾಗಿದೆ. ಅವುಗಳ ದೆಸೆಯಿಂದಲೇ ಅನೇಕ ಸಂಸ್ಕೃತಿ ನಾಗರಿಕತೆಗಳು ವಿನಾಶಹೊಂದಿವೆ. ಆ ಪಿಶಾಚಿಗಳಿಲ್ಲದಿದ್ದರೆ ಮನುಷ್ಯ ಸಮಾಜವು ಈಗಿರುವುದಕ್ಕಿಂತಲೂ ಸಾವಿರ ಪಾಲು ಶ್ರೇಯಸ್ವಿಯಾಗಿರುತ್ತಿತ್ತು. ಆದ್ದರಿಂದ ಆ ಪಿಶಾಚಿಗಳಿಗೆ ಮರಣಕಾಲ ಸಮಿಪಿಸಿದೆ. ಈ ದಿನ ಪ್ರಾತಃಕಾಲ ಈ ಧರ್ಮಮಹಾಸಭೆಯ ಪ್ರಾರಂಭೋತ್ಸವವನ್ನು ಸಾರಿದ ಮಹಾಘಂಟಾರವವು ಮತದ್ವೇಷ ಮತಭ್ರಾಂತಿಗಳ ಮೃತ್ಯುತೂರ್ಯವಾಗುವುದೆಂದು ಹಾರೈಸುತ್ತೇನೆ. . . .

"ಹಿಂದೂಧರ್ಮದಲ್ಲಿ ಸೂಕ್ಷ್ಮ ಸೂಕ್ಷ್ಮತಮವಾದ ನಿರ್ಗುಣ ಬ್ರಹ್ಮೋಪಾಸನೆಯಿಂದ ಹಿಡಿದು ಸ್ಥೂಲಸ್ಥೂಲತಮವಾದ ವಿಗ್ರಹಾರಾಧನೆಯ ವರೆಗೂ ಬೌದ್ಧರ ಸಂದೇಹವಾದದಿಂದ ಹಿಡಿದು ಜೈನರ ನಿರೀಶ್ವರವಾದದ ವರೆಗೂ ಎಲ್ಲ ಮತಗಳಿಗೂ ಸ್ಥಾನವಿದೆ. . . .

"ಆರ್ಯನು ತಾನೊಂದು ಆತ್ಮವೆಂದು ನಂಬುತ್ತಾನೆ. ಆತ್ಮವನ್ನು ಕತ್ತಿ ಇರಿಯದು; ಬೆಂಕಿ ಸುಡದು; ನೀರು ತೋಯಿಸದು; ಗಾಳಿ ಒಣಗಿಸದು. ಆತ್ಮವು ಅನಂತವಾದುದು; ಅಚ್ಯುತವಾದುದು. ಮರಣವೆಂದರೆ ಅವಸ್ಥಾಂತರವೇ ಹೊರತು ವಸ್ತುನಾಶವಲ್ಲ. ಆತ್ಮವು ಜಡದ ಉಪಾಧಿಯಿಂದ ಬದ್ಧವಾಗಿಲ್ಲ. ಅದು ತತ್ತ್ವತಃ ನಿತ್ಯಶುದ್ಧವೂ ನಿತ್ಯಬುದ್ಧವೂ ನಿತ್ಯಮುಕ್ತವೂ ಆದುದು. . . .

"ನೀವೆಲ್ಲರೂ ಅಮೃತಪುತ್ರರು. ಅಮೃತಪುತ್ರರಿರಾ, ಆರ್ಯನು ನಿಮ್ಮನ್ನೆಂದಿಗೂ ಪಾಪಿಗಳೆಂದು ಕರೆಯನು. ನೀವೆಲ್ಲರೂ ಈಶ್ವರನ ಶಿಶುಗಳು, ಆನಂದಾಂಶರು, ನಿತ್ಯಪವಿತ್ರರು, ನಿತ್ಯಮುಕ್ತರು. ಮಾನವನನ್ನು ಪಾಪಿಯೆಂದು ಕರೆಯುವುದಕ್ಕಿಂತಲೂ ಬೇರೊಂದು ಮಹಾಪಾಪವಿಲ್ಲ. ಹಾಗೆ ಕರೆಯುವುದು ಮನುಷ್ಯತ್ವಕ್ಕೇ ಒಂದು ಮಹಾ ನಿಂದೆ. ಸಿಂಹಗಳೇ, ಮೇಲೇಳಿ, ಕುರಿಗಳು ನಾವೆಂಬ ಮಾಯೆಯನ್ನು ಹರಿದು ಜಿಸಾಡಿ. . . .

"ಆರ್ಯಧರ್ಮವು ಬರಿಯ ನಂಬುಗೆಗಳ ಕಟ್ಟಲ್ಲ; ಸಿದ್ಧಾಂತಗಳ ಸಮೂಹ ಮಾತ್ರವಲ್ಲ. ಅದೊಂದು ಸಾಧನೆ, ಸಿದ್ಧಿ, ಸಾಕ್ಷಾತ್ಕಾರ. . . .

"ಮೌಢ್ಯವು ಮಾನವನ ಮಹಾ ಶತ್ರು. ಮತಭ್ರಾಂತಿ ಅದಕ್ಕಿಂತಲೂ ಭಯಾನಕವಾದುದು. ಕ್ರೈಸ್ತನು ಚರ್ಚಿಗೆ ಹೋಗುತ್ತಾನೇಕೆ? ಶಿಲುಬೆ

ಪಾವನವಾಗಿರುವುದೇಕೆ ? ಮುಖವು ಆಕಾಶದ ಕಡೆಗೆ ತಿರುಗಬೇಕೇಕೆ ? ಕ್ಯಾಥೋಲಿಕ್ ಚರ್ಚಿನಲ್ಲಿ ಅಷ್ಟೊಂದು ಪ್ರತಿಮೆಗಳೇಕೆ ? ಪ್ರಾರ್ಥನೆಮಾಡು ವಾಗ ಪ್ರೋಟೆಸ್ಟಾಂಟ್ ಕ್ರೈಸ್ತನ ಮನಸ್ಸಿನಲ್ಲೇಕೆ ನೂರಾರು ಚಿತ್ರಗಳಿರುತ್ತವೆ ? ಸೋದರರೇ, ಯಾವುದಾದರೂ ಒಂದು ತೆರನಾದ ಮಾನಸಿಕ ಪ್ರತಿಮೆಗಳಿಲ್ಲದೆ ನಾವು ಆಲೋಚಿಸಲಾರೆವು, ಉಸಿರಾಡದಿದ್ದರೆ ಹೇಗೆ ಬದುಕಲಾರೆವೋ ಹಾಗೆ. ಪ್ರತಿಮೆಯಿಂದ ಭಾವವೂ ಭಾವದೊಡನೆ ಪ್ರತಿಮೆಯೂ ಯಾವಾಗಲೂ ಜೊತೆ ಗೂಡಿರುತ್ತವೆ. ಆದ್ದರಿಂದಲೇ ಹಿಂದುವು ಉಪಾಸನೆಗಳಲ್ಲಿ ಪ್ರತಿಮೆಗಳನ್ನು ಉಪಯೋಗಿಸುತ್ತಾನೆ. . . . ಮನುಷ್ಯನು ಸಾಕ್ಷಾತ್ಕಾರದಿಂದ ದಿವ್ಯನಾಗು ತ್ತಾನೆ. ಪ್ರತಿಮೆ, ದೇವಾಲಯ, ಗ್ರಂಥಗಳೆಲ್ಲ ಬರಿಯ ಅವಲಂಬನೆಗಳು ; ಧಾರ್ಮಿಕಜೀವನದ ಶೈಶವಕ್ಕೆ ಬೇಕಾಗುವ ಸಹಾಯಗಳು ಮಾತ್ರ. ಆದರೆ ಸೋಪಾನವು ಮಹಡಿಯಲ್ಲ ; ದಾರಿ ಮನೆಯಲ್ಲ. ಗುರಿ ದೊರಕಬೇಕಾದರೆ ಮುಂದೆ ಮುಂದೆ ನಡೆಯಬೇಕು.

"ವಿಗ್ರಹಾರಾಧಕನನ್ನು ಹೋಗಿ ಕೇಳಿದರೆ ಆತನೇ ಹೇಳುತ್ತಾನೆ : ನ ತತ್ರ ಸೂರ್ಯೋ ಭಾತಿ, ನ ಚಂದ್ರ ತಾರಕಂ; ನೇಮಾ ವಿದ್ಯುತೋ ಭಾಂತಿ, ಕುತೋಽಯ ಮಗ್ನಿಃ ? ತಮೇವ ಭಾಂತಂ ಅನುಭಾತಿ ಸರ್ವಂ, ತಸ್ಯ ಭಾಸಾ ಸರ್ವಮಿದಂ ವಿಭಾತಿ. . . .

"ಮಾನವನು ವಿಗ್ರಹದ ಸಹಾಯದಿಂದ ದಿವ್ಯತ್ವವನ್ನು ಸುಲಭವಾಗಿ ಪಡೆಯಬಹುದಾದರೆ, ಅದನ್ನು ಪಾಪವೆಂದೇಕ ಕರೆಯಬೇಕು ? ಮನುಷ್ಯನು ಅಸತ್ಯದಿಂದ ಸತ್ಯಕ್ಕೇರುತ್ತಿಲ್ಲ. ಸತ್ಯದಿಂದ ಸತ್ಯಕ್ಕೆ—ಕಿರಿಯ ಸತ್ಯದಿಂದ ಹಿರಿಯ ಸತ್ಯಕ್ಕೆ—ಏರುತ್ತಾನೆ. ಭೂತವಾದದಿಂದ ಹಿಡಿದು ನಿರ್ಗುಣಬ್ರಹ್ಮವಾದದ ವರೆಗೆ ಎಲ್ಲ ಮತಗಳೂ ತತ್ತ್ವಗಳೂ ಸತ್ಯವನ್ನು ಸ್ಪರ್ಶಿಸಲು ಪ್ರಯತ್ನಿಸುತ್ತಿವೆ. . . .

"ದ್ವೈತದಲ್ಲಿ ಅದ್ವೈತವಿದೆ ; ಭೇದದಲ್ಲ ಅಭೇದವಿದೆ ; ಅನೇಕದಲ್ಲಿ ಏಕವಿದೆ ; ಇದನ್ನು ಆರ್ಯನು ಅರಿತಿದ್ದಾನೆ. ಇತರ ಮತಗಳು ತಮ್ಮ ಅನುಯಾಯಿಗಳ ಮೇಲೆ ನಿಯತವಾದ ಮತಭಾವಗಳನ್ನೂ ಆಚಾರಗಳನ್ನೂ ಬಲಾತ್ಕಾರವಾಗಿ ಹೇರುತ್ತಿವೆ. ವೆಂಕ ನಾಣ ಸೀನರಿಗೆ ಒಂದೇ ಅಂಗಿಯನ್ನು ತೊಡಿಸುವ ಪ್ರಯತ್ನ ನಡೆಯುತ್ತಿದೆ. ಆರ್ಯಧರ್ಮವಾದರೋ—ಏಕಮೇವಾದ್ವಿತೀಯವಾದ

ಬ್ರಹ್ಮವೊಂದಿದೆ; ಅದನ್ನು ಸ್ವಾನುಭವದಿಂದ ಅರಿಯಬೇಕು; ಅದನ್ನು ಸಾಧಿಸಲು ಹಲವು ಮಾರ್ಗಗಳಿವೆ; ಆದ್ದರಿಂದ ಆ ಮಾರ್ಗಗಳೆಲ್ಲವೂ ಗೌರವಾರ್ಹವಾದುವು ಎಂದು ಬೋಧಿಸುತ್ತದೆ. . . .

"ಯಾವ ಶಕ್ತಿಯನ್ನು ಹಿಂದುಗಳು ಬ್ರಹ್ಮವೆಂದೂ ಜೊರಾಸ್ತ ಮತಸ್ಥರು ಆಹುರಮಜ್‌ದನೆಂದೂ ಬೌದ್ಧರು ಬುದ್ಧನೆಂದೂ ಕ್ರೈಸ್ತರು ಪರಲೋಕದಲ್ಲಿರುವ ತಂದೆಯೆಂದೂ ಸಂಬೋಧಿಸಿ ಆರಾಧಿಸುತ್ತಾರೋ ಆ ಪರಮಶಕ್ತಿ ಸರ್ವಧರ್ಮ ಸಮನ್ವಯವು ಎಲ್ಲರೆದೆಗಳಲ್ಲಿಯೂ ನೆಲಸುವಂತೆ ಹರಕೆಗೈಯಲಿ!"

ಸ್ವಾಮಿ ವಿವೇಕಾನಂದರು ಸುಮಾರು ಐದು ವರ್ಷಗಳಕಾಲ ಯೂರೋಪು ಅಮೇರಿಕಾ ಖಂಡಗಳಲ್ಲಿ ತಮ್ಮ ಸಿಂಹವಾಣಿಯಿಂದ ವೇದಾಂತಧರ್ಮವನ್ನು ಸಾರಿ ನಮ್ಮ ಮಾತೃಭೂಮಿಗೆ ಹಿಂದಿರುಗಿದರು; ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ ಸಂಚರಿಸಿ, ವೀರವಾಣಿಯಿಂದ ನಾಡಿನ ನಾಡಿಗಳಲ್ಲಿ ಚೈತನ್ಯವು ಚಿಮ್ಮುವಂತೆ ಮಾಡಿದರು. ಆ ಸಂದೇಶವು ಬಹುಮುಖವಾದುದು; ಬೃಹತ್ತಾದುದು. ಅದರಲ್ಲಿ ಕೆಲವಂಶಗಳನ್ನು ಕೊಡುತ್ತೇವೆ:

"ಓ ನನ್ನ ಭರತಮಾತೆ, ಓ ನನ್ನ ಭಾರತೀಯ ಭ್ರಾತೃಗಳಿರಾ, ನಿದ್ದೆಯಿಂದೆದ್ದೇಳಿ! ನವೋದಯವಾಗುತ್ತಿದೆ; ಕಣ್ದೆರೆದು ನೋಡಿ! ಅದೋ. . . .

"ಸುದೀರ್ಘರಾತ್ರಿ ಕಡೆಗಿಂದು ಕೊನೆಗಾಣುತ್ತಿದೆ. ಬಹುಕಾಲದ ಶೋಕತಾಪಗಳು ಕಡೆಗಿಂದು ಮಾಯುವಾಗುತ್ತಲಿವೆ. ಇದುವರೆಗೆ ಶವದಂತೆ ಬಿದ್ದಿದ್ದ ಶರೀರವಿಂದು ಸಚೇತನವಾಗುತ್ತಿದೆ. ಅದೋ, ಕಿವಿಗೊಡಿ; ತೂರ್ಯ ವಾಣಿಯೊಂದು ಕೇಳಿಬರುತ್ತಿದೆ.—ಬಹು ಪುರಾತನ ಕಾಲದ ಇತಿಹಾಸ ಗರ್ಭದಿಂದ ಹೊಮ್ಮಿ, ಪರ್ವತ ಪರ್ವತಶಿಖರಗಳಿಂದ ಮರುದನಿಯಾಗಿ ಚಿಮ್ಮಿ, ಅರಣ್ಯಾರಣ್ಯ ಕಂದರಕಂದರಗಳಲ್ಲಿ ಸಂಚರಿಸಿ, ಒರಬರುತ್ತ ಪ್ರಬಲವಾಗಿ, ಬಂದಂತೆಲ್ಲ ಅಪ್ರತಿಹತವಾಗಿ, ನಮ್ಮೀ ಪುಣ್ಯಭೂಮಿಯನ್ನು ನಿದ್ದೆಯಿಂದೊದೆದೆಬ್ಬಿಸಿ, ಜ್ಞಾನ ಭಕ್ತಿ ಕರ್ಮ ವೈರಾಗ್ಯ ಸೇವಾತತ್ತ್ವಗಳನ್ನು ಉಚ್ಚಕಂಠದಿಂದ ಸಾರುವ ತೂರ್ಯವಾಣಿಯೊಂದು ಕೇಳಿಬರುತ್ತಿದೆ. ಹಿಮಾಲಯಗಳಿಂದ ಬೀಸಿಬರುವ ಪುಣ್ಯಸಮೀರಣನಂತೆ ನಿರ್ಜೀವಾದಂತಿದ್ದ ಅಸ್ಥಿಮಾಂಸಗಳಿಗೆ ಜೀವದಾನಮಾಡುತ್ತಿದೆ; ಜಡನಿದ್ದೆಯನ್ನು ಪರಿಹರಿಸುತ್ತಿದೆ; ಕಾರ್ಯೋ

ತ್ಸಾಹ ಸ್ಥೈರ್ಯ ಧೈರ್ಯಗಳನ್ನು ಉದ್ರೇಕಿಸುತ್ತಿದೆ. ಕುರುಡರಿಗೆ ಕಾಣದು; ಮೂರ್ಖರಿಗೆ ತಿಳಿಯದು. ನಮ್ಮ ಭಾರತಭೂಮಿ ಯುಗಯುಗಗಳ ನಿದ್ರೆಯಿಂದ ಮೇಲೇಳುತ್ತಿದೆ. ಆಕೆಯನ್ನು ಇನ್ನಾರೂ ತಡೆಯಬಲ್ಲವರಿಲ್ಲ; ಇನ್ನಾಕೆ ನಿದ್ದೆಮಾಡುವುದಿಲ್ಲ. ಯಾವ ಶಕ್ತಿಯೂ ಆಕೆಯನ್ನು ಬಗ್ಗಿಸಲಾರದು. ಏಕೆಂದರೆ, ಅದೋ ನೋಡಿ! ಮಹಾಕಾಳಿ ಮತ್ತೊಮ್ಮೆ ಎಚ್ಚತ್ತು ಮೈಕೊಡವಿ ಉಸಿರೆಳೆದು ನಿಲ್ಲುತ್ತಿದ್ದಾಳೆ! . . . .

"ಪ್ರತಿಯೊಂದು ಜನಾಂಗಕ್ಕೂ ಪ್ರತಿಯೊಬ್ಬ ವ್ಯಕ್ತಿಗಿರುವಂತೆಯೇ ಒಂದೊಂದು ಜೀವನೋದ್ದೇಶವಿದೆ. ಆ ಉದ್ದೇಶವೇ ಅದರ ಹೃದಯ. ಉಳಿದುದೆಲ್ಲವೂ ಗೌಣ. ಯಾವ ಜನಾಂಗವಾದರೂ ಶತಮಾನಗಳಿಂದ ತನ್ನ ನಾಡಿಗಳಲ್ಲಿ ಪ್ರವಹಿಸಿ ಬಂದ ಆದರ್ಶವನ್ನು ಕಿತ್ತೊಗೆಯಿತೆಂದರೆ ಸರ್ವನಾಶವಾಗುತ್ತದೆ. ರಾಜಕೀಯವು ಒಂದರ ಹೃದಯ; ಕಲಾಜೀವನವು ಮತ್ತೊಂದರದು, ಭರತಖಂಡದ ಹೃದಯವೆಂದರೆ ಧರ್ಮ. ಅದನ್ನು ವರ್ಜಿಸಿದೆವಾದರೆ ನಮ್ಮ ಸಂಸ್ಕೃತಿ ಅಳಿದುಹೋಗುತ್ತದೆ. . . .

"ಪ್ರಪಂಚಕ್ಕೀಗ ಬೇಕಾಗಿರುವುದು ಆತ್ಮದ ಅಮೃತತ್ವದ ಸಂದೇಶ; ಆತ್ಮದ ಐಕ್ಯದ ಸಂದೇಶ; ಆತ್ಮದ ಬ್ರಹ್ಮತ್ವದ ಸಂದೇಶ. ಆ ಸಂದೇಶವನ್ನು ಸಾರುವ ಭಾರವು ಆರ್ಯಾವರ್ತದ ಮೇಲಿದೆ. . . .

"ದ್ವೈತಭಾವದಿಂದಲೂ ಭಕ್ತಿಯಿಂದಲೂ ಒದಗುವ ಆನಂದದ ರುಚಿಯನ್ನು ನಾನೂ ಅರಿತಿದ್ದೇನೆ. ಆದರೆ ನಮಗಿಂದು ಕಂಬನಿಗರೆಯುತ್ತ ಕುಳಿತುಕೊಳ್ಳಲು ಸಮಯವಿಲ್ಲ; ಸಮಯವಲ್ಲ! ಭಕ್ತಿಯಿಂದ ಸಾಕಾದಷ್ಟು ಕಂಬನಿಗರೆದಿದ್ದೇವೆ. ಮೃದುಹೃದಯ ಸಾಧನೆಗೆ ಇದು ಕಾಲವಲ್ಲ. ಭಕ್ತಿಯ ಹೆಸರಿನಲ್ಲಿ ನಾವು ಬೆಣ್ಣೆಯ ಮುದ್ದೆಗಳಾಗಿ ಹೋಗಿದ್ದೇವೆ. . . . ನಮಗೀಗ ಬೇಕಾಗಿರುವುದು ಕಬ್ಬಿಣದಂತಹ ಮೈಕಟ್ಟು; ಉಕ್ಕಿನಂತಹ ನರಗಳು, ವಜ್ರದಂತಹ ಮನಸ್ಸು; ಸಾವು ಬಂದರೂ ನರಿಯೆ, ಹಿಡಿದುದನ್ನು ಮಾಡಿ ಮುಗಿಸುವಂತಹ ಸಿಡಿಲಿನಂತಹ ಇಚ್ಛೆ. ಅಂತಹ ಶಕ್ತಿ ಅದ್ವೈತದಿಂದಲೇ ಸಾಧ್ಯ. ಶ್ರದ್ಧೆ ಬೇಕು, ಆತ್ಮ ಶ್ರದ್ಧೆ—ಅಂಧ ಶ್ರದ್ಧೆಯಲ್ಲ! . . . . ಎಷ್ಟು ದೇವರ ನೀನೆಷ್ಟು ನಂಬಿದರೇನು, ಒಂದಿಷ್ಟು ನೀ ನಂಬದಿರೆ ನಿನ್ನ ನೀನು? . . . . ಮೂವತ್ತು ಕೋಟಿ

ಮಾನವರು ದಾಸರಾಗಿರುವುದೇಕೆ? ಆತ್ಮ ಶ್ರದ್ಧೆ ಇಲ್ಲದುದರಿಂದಲ್ಲವೇ? . . . . ನಮ್ಮ ಶ್ರೀಮಂತ ಪೂರ್ವಿಕರು ತಮ್ಮ ದರಿದ್ರಭ್ರಾತೃಗಳನ್ನು ಪದದಲಿತ ಮಾಡಿ ನಿರ್ವೀರ್ಯರನ್ನಾಗಿ ಮಾಡಿದ್ದಾರೆ. ಅವರಿಗೆ ತಮ್ಮ ಮನುಷ್ಯತ್ವವೇ ಮರೆತು ಹೋಗಿದೆ. . . .

"ಸಮಾಜ ಸುಧಾರಕರಲ್ಲಿ ನನ್ನದೊಂದು ವಿಜ್ಞಾಪನೆ. ದೇಶದ ಶೋಚನೀಯ ಸ್ಥಿತಿಯನ್ನು ಕಂಡು ನಿಮ್ಮೆದೆ ಬೇಯುತ್ತದೆಯೇ? ಸೋದರನ ದುರವಸ್ಥೆಗೆ ನಿಮ್ಮೆದೆ ನೋಯುತ್ತದೆಯೇ? ಆರ್ಯ ಋಷಿಗಳ ಪುತ್ರರು ಪಶುಗಳಾಗಿರುವುದನ್ನು ನೋಡಿ ನಿಮ್ಮೆದೆ ಬೇಯುತ್ತದೆಯೇ? ಹೊಟ್ಟೆಗಿಲ್ಲದೆ ನರಳಿ ಸಾಯುವ ಸಹಸ್ರಾರು ಜನಗಳಿಗಾಗಿ ನಿಮ್ಮ ಮನಸ್ಸು ನೋಯುತ್ತದೆಯೇ? ನಿಮಗೆ ಶಾಂತಿಯಿಲ್ಲವೇ? ನಿದ್ರೆಯಿಲ್ಲವೇ? ನಿಮಗೆ ಹುಚ್ಚು ಹಿಡಿದಿದೆಯೇ? ಕೀರ್ತಿ, ಐಶ್ವರ್ಯ, ಮನೆ, ಹೆಂಡತಿ, ಮಕ್ಕಳು, ನಿಮ್ಮ ಶರೀರ ಎಲ್ಲವನ್ನೂ ಮರೆತು ದೇಶಕ್ಕಾಗಿ ಮರುಗುತ್ತಿದ್ದೀರಾ? . . . . ಇಷ್ಟಿದ್ದರೆ ದೇಶಭಕ್ತಿಗೆ ಪ್ರಥಮ ಸೋಪಾನ ಮಾತ್ರವೆಂದು ತಿಳಿಯಿರಿ. . . .

"ಜಾತಿ ಮತ ದೇಶ ವರ್ಣ ಭೇದವಿಲ್ಲದೆ ಪ್ರತಿಯೊಬ್ಬನೂ ವೇದಾಂತಿಯಾಗಲಿ. ತಾನು ಅಮೃತಾತ್ಮನೆಂದು ತಿಳಿಯಲಿ. ಆಗ ಇಲಿಗಳು ಹುಲಿಗಳಾಗುತ್ತವೆ. ಕುರಿಗಳು ಹರಿಗಳಾಗುತ್ತವೆ. . . .

"ನಮಗೆ ಬೇಕಾದುದು ಪೌರುಷಕಾರಿಯಾದ ಮತಧರ್ಮ. . . . ನಮಗೆ ಬೇಕಾದುದು ಪೌರುಷಕಾರಿಯಾದ ವಿದ್ಯಾಭ್ಯಾಸ. . . . ದೈಹಿಕವಾಗಿಯಾಗಲಿ, ಮಾನಸಿಕವಾಗಿಯಾಗಲಿ, ಧಾರ್ಮಿಕವಾಗಿಯಾಗಲಿ ನಿಮ್ಮನ್ನು ದುರ್ಬಲರನ್ನಾಗಿ ಮಾಡುವುದನ್ನೆಲ್ಲ ವಿಷವೆಂದು ಭಾವಿಸಿ ವಿಸರ್ಜಿಸಿ. ವಿಷದಲ್ಲಿ ಜೀವವೂ ಇಲ್ಲ; ಸತ್ಯವೂ ಇಲ್ಲ. ಸತ್ಯವಾವಾಗಲೂ ಬಲಕಾರಿಯಾದುದು; ಪ್ರಬೋಧಕಾರಿಯಾದುದು; ಉತ್ಸಾಹಕಾರಿಯಾದುದು. . . . ದುರ್ಬಲಕಾರಿಗಳಾದ ರಹಸ್ಯಗಳನ್ನೆಲ್ಲ ದೂರಮಾಡಿ ಶಕ್ತಿವಂತರಾಗಿ. ನಿಜವಾದ ಸತ್ಯವು ಅತ್ಯಂತ ಸರಳವಾದುದು. ಅಲ್ಲಿ ರಹಸ್ಯವಿಲ್ಲ; ಮುಚ್ಚುಮರೆಯಿಲ್ಲ; . . . ಬೆಳಕಿಗೆ ಕತ್ತಲೆಯ ಮುಸುಗೇಕೆ? . . . .

"ಇನ್ನೊಂದು ನೂರು ವರ್ಷಗಳ ವರೆಗೆ ನಿಮ್ಮ ದೇವದೇವತೆಗಳನ್ನೆಲ್ಲ

ಮನಸ್ಸಿನಿಂದ ತಳ್ಳಿಬಿಡಿ. ನಮ್ಮ ಭಾರತಾಂಬೆಯೇ ನಮ್ಮ ದೇವರಾಗಲಿ. ನಿದ್ದೆ ಮಾಡುವ ಉಳಿದ ದೇವತೆಗಳನ್ನು ಕಟ್ಟಿಕೊಂಡು ನಾವು ಮಾಡುವುದೇನು? . . . . ನಿರ್ಜೀವ ವಿಗ್ರಹಾರಾಧನೆಯನ್ನು ಬಿಟ್ಟು ಸಜೀವ ಮಾನವಾರಾಧನೆಯನ್ನು ಕೈಕೊಳ್ಳಿ. . . .

"ದೇಶಸೇವೆಯೇ ಈಶಸೇವೆ! ನರನ ಸೇವೆಯೇ ಹರನ ಸೇವೆ!

"ಆರ್ಯಮಾತೆಯ ಅಮೃತಪುತ್ರರಿರಾ, ಮಹರ್ಷಿ ಕುಲಸಂಜಾತ ಧನ್ಯಾತ್ಮರಿರಾ, ಮರೆಯದಿರಿ—ನಿಮ್ಮ ಆದರ್ಶಮಾತೆಯರೆಂದರೆ—ಸೀತೆ, ಸಾವಿತ್ರಿ, ದಮಯಂತಿಯರು! ಮರೆಯದಿರಿ—ನಿಮ್ಮ ಆರಾಧನೆಯ ಮಹೇಶ್ವರನು ತ್ಯಾಗಿ ಕುಲಚೂಡಾಮಣಿ, ವೈರಾಗ್ಯನಿಧಿ, ಉಮಾನಾಥ ಶಂಕರನು! ನಿಮ್ಮ ವಿವಾಹ ಸಂಪತ್ತುಗಳು ಬರಿಯ ಇಂದ್ರಿಯ ಭೋಗಕ್ಕಲ್ಲ; ನಿಮ್ಮ ಸ್ವಾರ್ಥಪರ ಸುಖಕ್ಕಲ್ಲ. ಮರೆಯದಿರಿ—ಮಾತೆಯ ಬಲಿಪೀಠದ ಮೇಲೆ ಯಜ್ಞಶಿಶುಗಳಾಗಿ ಜನ್ಮವೆತ್ತಿರುವಿರಿ. ಮರೆಯದಿರಿ—ಶೂದ್ರರೂ ಅಂತ್ಯಜರೂ ದರಿದ್ರರೂ ಅಜ್ಞಾನಿಗಳೂ ಚಂಡಾಲ ಚಮ್ಮಾರರೆಲ್ಲರೂ ನಿಮ್ಮ ರಕ್ತಬಂಧುಗಳಾದ ಸೋದರರು! ವೀರಾತ್ಮರೇ, ನೆಚ್ಚುಗೆಡದಿರಿ, ಧೀರರಾಗಿರಿ. ಭಾರತೀಯರು ನಾವೆಂಬ ಹೆಮ್ಮೆಯಿಂದ ಸಾರಿಹೇಳಿ—ಭಾರತೀಯರು ನಾವು; ಭಾರತೀಯರೆಲ್ಲ ಸೋದರರು ನಮಗೆ. ಸಾರಿಹೇಳಿ—ಅಜ್ಞಾನಿಭಾರತೀಯರೆಮ್ಮ ಸಹೋದರರು; ದರಿದ್ರ ದೀನಾನಾಥ ಭಾರತೀಯರೆಮ್ಮ ಸಹೋದರರು; ಬ್ರಾಹ್ಮಣ ಭಾರತೀಯರೆಮ್ಮ ಸಹೋದರರು; ಪಂಚಮ ಭಾರತೀಯರೆಮ್ಮ ಸಹೋದರರು. ಛಿದ್ರಮಲಿನ ವಸನಧಾರಿಗಳಾದರೂ ಅಭಿಮಾನ ಪೂರ್ಣವಾದ ಮೇಘ ಗಂಭೀರವಾಣಿಯಿಂದ ಘೋಷಿಸಿರಿ—ಆರ್ಯರೆಮ್ಮ ಬಂಧುಗಳು; ಆರ್ಯರೆಮ್ಮ ಪ್ರಾಣ; ಆರ್ಯದೇವ ದೇವತೆಗಳೆಲ್ಲರೂ ನಮ್ಮ ದೇವರು; ಆರ್ಯಸಮಾಜವು ನಮ್ಮ ಶೈಶವದ ತೊಟ್ಟಿಲು, ತಾರುಣ್ಯದ ಉಯ್ಯಾಲೆ, ಯೌವನದ ಉದ್ಯಾನ, ವೃದ್ಧಾಪ್ಯದ ವಾರಣಾಸಿ! ಸೋದರರೇ, ಇಂತೆಂದು ಗಾನಮಾಡಿ—ಆರ್ಯಭೂಮಿಯೇ ನಮ್ಮ ಸ್ವರ್ಗ; ಆರ್ಯಭೂಮಿಯೇ ನಮಗೆ ಪರಮ ಪರಂಧಾಮ; ಆರ್ಯಮಾತೆಯ ಶುಭವೇ ನಮ್ಮ ಶುಭ; ಆಕೆಯ ಸುಖವೇ ನಮ್ಮ ಸುಖ. ದಿವಾರಾತ್ರಿಯೂ ಇದು ನಿಮ್ಮ ಪ್ರಾರ್ಥನೆಯಾಗಿರಲಿ—ಹೇ ಗೌರೀನಾಥ, ಹೇ ಜಗನ್ಮಾತೆ,

ಪೌರುಷವನ್ನೆಮಗೆ ದಯಪಾಲಿಸು! ಹೇ ಸರ್ವಶಕ್ತಿಶಾಲಿನೀ, ನಮ್ಮ ದೌರ್ಬಲ್ಯ ವನ್ನು ದಹಿಸು; ಕ್ಲೈಬ್ಯವನ್ನು ಪರಿಹರಿಸು; ನಮ್ಮನ್ನು ಪೌರುಷವಂತರನ್ನಾಗಿ ಮಾಡು; ಪುರುಷಸಿಂಹರನ್ನಾಗಿ ಮಾಡು.''

ಸ್ವಾಮಿಗಳ ಪವಿಧ್ವನಿಯಿಂದ ರಾಷ್ಟ್ರ ಮಹಾ ಶರೀರದಲ್ಲಿ ವಿದ್ಯುತ್ಸಂಚಾರ ವಾಯಿತು. ಜನರು ಜ್ವಾಲಾಗ್ರಸ್ತರಾದರು. ಆದರೆ ಉಪನ್ಯಾಸಗಳಿಂದ ಉತ್ಪತ್ತಿ ಯಾಗುವ ಕ್ಷಣಿಕ ಉದ್ರೇಕವು ಶಾಶ್ವತ ಉತ್ಸಾಹವಾಗಿ ಕಾರ್ಯಕಾರಿಯಾಗ ಬೇಕಾದರೆ ಸಂದೇಶವಾಣಿ ಶಿಥಿಲವಾಗದೆ ಚಿರಸ್ಥಾಯಿಯಾಗಿರಬೇಕೆಂದು ಸ್ವಭಾವತಃ ದೂರದರ್ಶಿಯಾಗಿದ್ದ ವಿವೇಕಾನಂದರು ಮನಗಂಡು, ದೇಶಬಾಂಧವ ರಲ್ಲಿ ಸಂಜನಿಸಿದ ಶಕ್ತಿಸೂತ್ರಗಳನ್ನು ಸಂಘಬದ್ಧವಾಗಿ ಮಾಡಲೋಸುಗ ಮಹಾ ಸಂಸ್ಥೆಯೊಂದನ್ನು ನಿರ್ಮಿಸಿ ಸ್ಥಾಪಿಸಲು ನಿಶ್ಚಯಿಸಿದರು. ''ತರುಣರನ್ನು ತ್ಯಾಗಮೂರ್ತಿಗಳನ್ನಾಗಿಯೂ ಸೇವಾನಿರತರನ್ನಾಗಿಯೂ ಶಿಕ್ಷಣಮಾಡಿ, ಸ್ವದೇಶದಲ್ಲಿಯೂ ವಿದೇಶಗಳಲ್ಲಿಯೂ ಹರಡಬೇಕೆಂಬುದು ನನ್ನದೊಂದು ಮಹದಾಕಾಂಕ್ಷೆ. ಆ ಕೆಲಸಕ್ಕೆ ಧೀರರು ಬೇಕು. ಉಳಿದುದೆಲ್ಲ ಸುಲಭಸಾಧ್ಯ. ಆಶಿಷ್ಠ, ದೃಢಿಷ್ಠ, ಬಲಿಷ್ಠ, ಮೇಧಾವಿಗಳಾದ ವೀರತರುಣರು ಬೇಕು. ಅಂತಹ ನೂರು ಜನರು ಸಿಕ್ಕುವುದಾದರೆ ಪ್ರಪಂಚವನ್ನೇ ಬದಲಾಯಿಸಬಹುದು. ಮಾನ ವನ ಚಿಚ್ಛಕ್ತಿಗಿಂತಲೂ ಬಲವಾದ ಶಕ್ತಿ ಇನ್ನೊಂದಿಲ್ಲ. ಈಶ್ವರಾವಿಷ್ಟವಾದ ಚಿಚ್ಛಕ್ತಿಯ ಮುಂದೆ ಜಗತ್ತು ತಲೆಬಾಗುತ್ತದೆ. ಪರಿಶುದ್ಧವಾಗಿಯೂ ವೀರ್ಯ ವತ್ತಾಗಿಯೂ ಇರುವ ಚಿತ್ತವು ಅಪ್ರತಿಹತವಾದುದು; ಸರ್ವಶಕ್ತವಾದುದು.''

ಮೊದಲನೆಯದಾಗಿ, ಆಶಾಜನಕವೂ ಬಲಕಾರಿಯೂ ಆಗಿರುವ ಉಪ ನಿಷತ್ತುಗಳ ಧೀರಸಂದೇಶವನ್ನು ಮನೆ ಮನೆಗೂ ಗುಡಿಸಲು ಗುಡಿಸಲಿಗೂ ಹೋಗಿ ಸಾರಬೇಕು. ಜನಗಳ ಹೃದಯಕ್ಕೆ ವಜ್ರಸಾಣೆಯನ್ನು ಕೊಟ್ಟು 'ಮನುಷ್ಯ'ರನ್ನಾಗಿ ಮಾಡಬೇಕು. ಏಕೆಂದರೆ, ಹೃಚ್ಛಕ್ತಿಯಿಲ್ಲದೆ ಶ್ರೇಯಸ್ಸಿಲ್ಲ.

ಎರಡನೆಯದಾಗಿ, ಸಂಕುಚಿತ ಭಾವಗಳನ್ನು ತೊಡೆದುಹಾಕಿ ಪರಮಹಂಸ ರಿಂದ ಪ್ರಣೀತವಾದ ಸರ್ವಧರ್ಮಸಮನ್ವಯವನ್ನು ಸಾರಿ ವಿಶಾಲದೃಷ್ಟಿಯನ್ನು ದಯಪಾಲಿಸಬೇಕು. ಏಕೆಂದರೆ, ಭರತಖಂಡದ ಅವನತಿಗೆ ಭಿನ್ನಬುದ್ಧಿಯೇ ಮೂಲಕಾರಣವಾಗಿದೆ.

ಮೂರನೆಯದಾಗಿ, ವಿವೇಕಪೂರ್ವಕವಾದ ಮತ್ತು ಆರ್ಯಸಂಸ್ಕೃತಿಗೆ ಹಾನಿಕರವಲ್ಲದ ಸಮಾಜಸುಧಾರಣೆಯನ್ನು ಕೈಕೊಳ್ಳಬೇಕು. ಬದಲಾವಣೆಗಿಂತಲೂ ಬೆಳವಣಿಗೆಯೇ ಹಿತಕರವಾದುದು. ಸಂಪ್ರದಾಯ ಶರಣರನ್ನು ಖಂಡಿಸಿ ನಿಂದಿಸಿ ಮೈಮೇಲೆ ಹಾಕಿಕೊಳ್ಳದೆ ಪ್ರೀತಿಯಿಂದಲೂ ಎಚ್ಚರಿಕೆಯಿಂದಲೂ ಅವರನ್ನು ಗೆದ್ದು ಬೆಳಕಿನ ಹಾದಿಗೆ ಕರೆತರಬೇಕು. ಬೆಳಕು ಬಂದರೆ ಕತ್ತಲೆ ತನಗೆ ತಾನಾಗಿ ತೊಲಗುತ್ತದೆ.

ನಾಲ್ಕನೆಯದಾಗಿ, ವಿದ್ಯಾಪ್ರಚಾರ. ಅದಿಲ್ಲದೆ ದೇಶಕ್ಕೆ ಮುಕ್ತಿಯಿಲ್ಲ. ಮಾನವನಲ್ಲಿ ಮಲಗಿರುವ ಪೂರ್ಣತೆ ವಿಕಾಸವಾಗುವಂತೆ ಮಾಡುವುದೇ ಬೋಧನೆಯ ಗುರಿ. ಬರಿಯ ವಿಷಯಸಂಗ್ರಹಮಾಡಿ ಮಿದುಳನ್ನೊಂದು ಉಗ್ರಾಣದಂತೆ ಮಾಡಿಕೊಂಡರೆ ಅದು ವಿದ್ಯೆಯಲ್ಲ. ಜೀವನಪೋಷಕವೂ ಪೌರುಷಕಾರಿಯೂ ಸೌಶೀಲ್ಯಜನಕವೂ ಆದ ಭಾವಸಮನ್ವಯಕರಣವೇ ನಿಜವಾದ ವಿದ್ಯೆ.

ಐದನೆಯದಾಗಿ, ಸಾಮಾನ್ಯಜನರ ಅಥವಾ 'ಮಂದಿ'ಯ ಉತ್ಥಾಪನೆ. ಮಂದಿಯ ಅಧೋಗತಿಯೇ ಭಾರತವರ್ಷದ ದಾಸ್ಯದುಃಸ್ಥಿತಿಗಳಿಗೆ ಮುಖ್ಯಕಾರಣ. ಉಚ್ಚವರ್ಗದವರು ಅವರನ್ನು ಮೂಲೆಗೆ ತಳ್ಳಿ ತುಳಿದುದರಿಂದ ಅವರೆಲ್ಲರೂ ಕ್ರಿಮಿಗಳಾಗಿದ್ದಾರೆ. ಕ್ರಿಮಿಗಳನ್ನು ಪುನಃ ದೇವತೆಗಳನ್ನಾಗಿ ಮಾಡಬೇಕು. ಭಾರತಾಂಬೆಯ ವಾಸಸ್ಥಾನವು ರಾಜನ ಅರಮನೆಯಲ್ಲ; ಬಡವನ ಗುಡಿಸಲು. ಬಡವನ ನೋವಿಗೆ ಯಾರೆದೆ ಕುದಿಯುತ್ತದೆಯೋ ಆತನೇ ಮಹಾತ್ಮನು; ಉಳಿದವರೆಲ್ಲ ದುರಾತ್ಮರು.

ಆರನೆಯದಾಗಿ, ಸ್ತ್ರೀಯರ ಉತ್ಥಾಪನೆ. ಭರತಖಂಡದ ಆದರ್ಶಸ್ತ್ರೀ ಸತಿಯಲ್ಲ, ಮಾತೆ. ಅವರು ವಿದ್ಯಾರ್ಜನೆಮಾಡುವಂತೆ ಅವಕಾಶ ಕಲ್ಪಿಸಿಕೊಟ್ಟರೆ, ಅವರ ಸಮಸ್ಯೆಗಳನ್ನು ಅವರೇ ಪರಿಹರಿಸಿಕೊಳ್ಳಲು ಸಮರ್ಥರಾಗುತ್ತಾರೆ. ಭಾವೀಭಾರತಸ್ತ್ರೀಯರು ಸೀತೆ, ಸಾವಿತ್ರಿ, ದಮಯಂತಿ, ಮೀರಾಬಾಯಿ ಮೊದಲಾದ ಪುಣ್ಯಮಾತೆಯರ ತನುಜಾತೆಯರಾಗುವಂತೆ ಮಾಡುವುದು ನಮ್ಮ ಕರ್ತವ್ಯ. ಸ್ತ್ರೀ ಪಾಕಶಾಲೆಯ ಮೂದೇವಿಯಲ್ಲ, ಆರ್ಯಾವರ್ತದ ಮಹಾದೇವಿ.

ಏಳನೆಯದಾಗಿ, ಜಾತಿಪದ್ಧತಿಯ ಸಮಸ್ಯೆ. ವರ್ಣಾಶ್ರಮಧರ್ಮವು ಹಿತಕಾರಿ; ಆದರೆ ಜಾತಿಪದ್ಧತಿ ಲಯಕಾರಿ. ಧರ್ಮಪ್ರಪಂಚದಲ್ಲಿ ಜಾತಿಪದ್ಧತಿಯಿಲ್ಲ. ಕೀಳುಜಾತಿಯವನೂ ಮೇಲುಜಾತಿಯವನೂ ಸಂನ್ಯಾಸ ಸ್ವೀಕಾರ ಮಾಡಿದಾಗ ಸಮಾನರಾಗುತ್ತಾರಲ್ಲವೇ? ಜಾತಿಪದ್ಧತಿ ವೇದಾಂತಮತಕ್ಕೆ ವಿರುದ್ಧವಾದುದು. ಅದು ಒಂದು ಸಾಮಾಜಿಕ ವ್ಯವಸ್ಥೆ ಮಾತ್ರ. ಮಹಾಪುರುಷರೆಲ್ಲರೂ ಅದನ್ನು ಪ್ರತಿಭಟಿಸಿದ್ದಾರೆ. ವರ್ಣಾಶ್ರಮಧರ್ಮವು ಜಾತಿಪದ್ಧತಿಯಲ್ಲ. ವರ್ಣಾಶ್ರಮವಿಲ್ಲದ ದೇಶವಿಲ್ಲ. ಗುಣಸಂಸ್ಕಾರಗಳ ಮೇಲೆ ನಿಲ್ಲಬೇಕಾದ ವರ್ಣಾಶ್ರಮವು ಹಕ್ಕುಬಾಧ್ಯತೆಗಳ ಮೇಲೆ ನಿಂತು ಜಾತಿಪದ್ಧತಿಯಾಗಿಹೋಗಿದೆ. ಹಕ್ಕುಬಾಧ್ಯತೆಗಳಿಗೆ ಪರದಾಡುವುದನ್ನು ತ್ಯಜಿಸಿ, ಗುಣಸಂಸ್ಕಾರಗಳ ಆರ್ಜನೆಯಿಂದ ಎಲ್ಲರೂ ಬ್ರಾಹ್ಮಣ್ಯಕ್ಕೆ ಏಳಬೇಕು. ಬ್ರಾಹ್ಮಣ್ಯವು ನಮ್ಮ ಆದರ್ಶ. ಪಂಡಿತನ ಮಗನು ಪಂಡಿತನಾಗದಿರಬಹುದು; ಹಾಗೆಯೇ ಬ್ರಾಹ್ಮಣನ ಮಗನು ಬ್ರಾಹ್ಮಣನಾಗದಿರಬಹುದು. ಆದ್ದರಿಂದ ಹಕ್ಕುಬಾಧ್ಯತೆಗಳಿಗಾಗಿ ಹೊಡೆದಾಡುವ ಅನಿಷ್ಟವಾದ ಜಾತಿಪದ್ಧತಿಯನ್ನು ಉತ್ತರಿಸಿ, ಗುಣಸಂಸ್ಕಾರಗಳ ಸಾಧನೆಯಿಂದ ಶ್ರೇಯಸ್ಕರವಾಗುವ ವರ್ಣಾಶ್ರಮಧರ್ಮವನ್ನು ಕೈಕೊಂಡು ಎಲ್ಲರೂ ಬ್ರಾಹ್ಮಣರಾಗಬೇಕು.

ಎಂಟನೆಯದಾಗಿ, ಆರ್ಯಸಂಸ್ಕೃತಿಯ ಸಂರಕ್ಷಣೆ ಮತ್ತು ಪ್ರಚಾರ. ಆರ್ಯಸಂಸ್ಕೃತಿ ಸಜೀವ ಸಂಸ್ಕೃತಿಗಳಲ್ಲೆಲ್ಲ ಅತ್ಯಂತ ಪುರಾತನವಾದುದು, ಶಕ್ತಿಪೂರ್ಣವಾದುದು ಮತ್ತು ಸರ್ವಗ್ರಾಸಿಯಾದುದು. ಅದರಲ್ಲಿ ಔದಾರ್ಯವಿರುವಂತೆಯೇ ವೈಶಿಷ್ಟ್ಯವೂ ಇದೆ. ಆದ್ದರಿಂದ ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಗೆ ಕೈಹಾಕದೆ, ಅದರಲ್ಲಿರುವ ಸತ್ಯಾಂಶಗಳನ್ನು ಹೀರಿಕೊಂಡು ನಮ್ಮ ಲೌಕಿಕ ಜೀವನವನ್ನು ಉದ್ಧಾರಮಾಡಿಕೊಳ್ಳುವುದಲ್ಲದೆ, ವಿನಿಮಯವಾಗಿ ಯಂತ್ರಪಿಶಾಚಗ್ರಸ್ತರಾಗಿ ಲೋಭಾಗ್ನಿಯಿಂದ ಬೆಂದು ನರಳುತ್ತಿರುವ ಅವರಿಗೆ ಉಪನಿಷತ್ ಪ್ರಣೀತವಾದ ಆತ್ಮದ ಸಂದೇಶವನ್ನು ದಾನಮಾಡಿ, ಜಗತ್ತಿನಲ್ಲಿ ಸೌಹಾರ್ದವೂ ನೆಮ್ಮದಿಯೂ ಶಾಂತಿಯೂ ನೆಲಸುವಂತೆ ಕೈಯಲ್ಲಾದ ಸೇವೆ ಮಾಡುವುದು ನಮ್ಮ ಕರ್ತವ್ಯ.

ಈ ಮಹೋದ್ದೇಶಗಳನ್ನು ನಿರುತಮಾಡಲೋಸುಗ ಒಂದು ಸಂಸ್ಥೆಯನ್ನು

ನಿರ್ಮಿಸಿ, ನಾವೆಲ್ಲರೂ ನಮ್ಮ ಪ್ರಾಣಾರ್ಪಣೆಮಾಡಬೇಕೆಂದು ವಿವೇಕಾನಂದರು ತಮ್ಮ ಗುರುಭ್ರಾತೃಗಳಿಗೆ ತಿಳಿಸಲು ಅವರೆಲ್ಲ ದಿಗಿಲುಬಿದ್ದರು. ಏಕಾಂತ ವಾಸವನ್ನೂ ಧ್ಯಾನಜೀವನವನ್ನೂ ಆತ್ಮಸಾಕ್ಷಾತ್ಕಾರದ ಮಧುರ ರುಚಿಯನ್ನೂ ತ್ಯಜಿಸಿ, ಮಾಯಾಜಗತ್ತಿನ ಕರ್ಮರಂಗಕ್ಕೆ ಪ್ರವೇಶಮಾಡಿ ಅಶಾಂತತೆಯನ್ನು ಕಟ್ಟಿಕೊಳ್ಳುವುದು ಅವರ ಮನಸ್ಸಿಗೆ ಸರಿಬೀಳಲಿಲ್ಲ. ಆದ್ದರಿಂದ ಎಲ್ಲವನ್ನೂ ಬಿಟ್ಟ ಸಂನ್ಯಾಸಿಗಳು ಪುನಃ ಕರ್ಮದಾಸರಾಗುವುದು ಹಿತವಲ್ಲ ಎಂದು ವಾದ ಹೂಡಿದರು. ಆದರೆ ವಿವೇಕಾನಂದರು ಅವರ ವಾದವನ್ನೂ ಆತ್ಮಸಾಕ್ಷಾತ್ಕಾರದ ಸ್ವಾರ್ಥತೆಯನ್ನೂ ಕಠಿನವಾಗಿ ವಿಮರ್ಶೆಮಾಡಿ ಖಂಡಿಸಿ, ಒಡಂಬಡುವಂತೆ ಮಾಡಿದರು.

ಕ್ರಿ. ಶ. ೧೮೯೭ ನೆಯ ಮೇ ೧ ನೆಯ ತಾರೀಖಿನ ದಿನ ಶ್ರೀರಾಮಕೃಷ್ಣ ಮಹಾಸಂಘವು ನಿರ್ಮಾಣವಾಯಿತು. ಅದರ ಉದ್ದೇಶಗಳನ್ನು ಇಲ್ಲಿ ಸಂಕ್ಷೇಪವಾಗಿ ಕೊಟ್ಟಿದೆ—

೧. ಪ್ರಪಂಚದಲ್ಲಿರುವ ಎಲ್ಲ ಮತಗಳೂ ಏಕವೂ ಅಖಂಡವೂ ಆಗಿರುವ ಸನಾತನ ಧರ್ಮದ ರೂಪಾಂತರಗಳೆಂದು ಭಾವಿಸಿ, ಭಿನ್ನ ಭಿನ್ನ ಮತಾವಲಂಬಿಗಳ ಮಧ್ಯೆ ಆತ್ಮೀಯತೆಯನ್ನು ಸ್ಥಾಪಿಸುವುದಕ್ಕಾಗಿ ಶ್ರೀರಾಮಕೃಷ್ಣರಿಂದ ಪ್ರಣೀತವಾದ ಸರ್ವಧರ್ಮಸಮನ್ವಯವನ್ನು ಪ್ರಚಾರಮಾಡುವುದು ಈ ಸಂಘದ ಉದ್ದೇಶ.

೨. ಮಾನವರ ಲೌಕಿಕ, ಸಾಂಸಾರಿಕ ಮತ್ತು ಆಧ್ಯಾತ್ಮಿಕ ಉನ್ನತಿಗಾಗಿ ಶ್ರೀರಾಮಕೃಷ್ಣರ ಜೀವನ ಮತ್ತು ಉಪದೇಶಗಳಿಗೆ ಅನುಗುಣವಾಗಿ ಜನರಿಗೆ ವಿದ್ಯಾದಾನಮಾಡುವುದು ಈ ಸಂಘದ ಕರ್ತವ್ಯ.

೩. ಸಂಘದ ಕಾರ್ಯವಿಧಾನಗಳೆಂದರೆ—(೧) ಇಹಪರಗಳೆರಡಕ್ಕೂ ಕ್ಷೇಮವಾಗುವಂತಹ ಜ್ಞಾನ ಮತ್ತು ವಿಜ್ಞಾನವಿದ್ಯೆಯನ್ನು ಮುಂದಿಯಲ್ಲಿ ಹರಡಲು ಸಮರ್ಥರಾದ ಶಿಕ್ಷಕರನ್ನು ತರಬಿಯತ್ತುಮಾಡುವುದು; (೨) ಕಲೆ ಮತ್ತು ಕೈಗಾರಿಕೆಗಳ ಅಭಿವೃದ್ಧಿಗೆ ಸಹಾಯಮಾಡುವುದು ; (೩) ಶ್ರೀರಾಮಕೃಷ್ಣರ ಜೀವನದಲ್ಲಿ ತೋರಿಬಂದಂತೆ ವೇದಾಂತವನ್ನೂ ಇತರ ಮತಧರ್ಮಗಳನ್ನೂ ಜನರಿಗೆ ಬೋಧಿಸುವುದು.

೪. ಭಾರತವರ್ಷದ ನಗರ ನಗರಗಳಲ್ಲಿಯೂ ಆಶ್ರಮಗಳನ್ನೂ ಮಠಗಳನ್ನೂ ಸ್ಥಾಪಿಸಿ, ಸಂನ್ಯಾಸಿಗಳನ್ನೂ, ಪ್ರಚಾರಕಾರ್ಯಗಳನ್ನು ಕೈಕೊಳ್ಳಲು ಇಷ್ಟವಿರುವ ಗೃಹಸ್ಥರನ್ನೂ ಲೋಕಸೇವೆಗೆ ಸಿದ್ಧಮಾಡುವುದು. ಇದು ಭಾರತವರ್ಷೀಯ ಕಾರ್ಯ.

೫. ವಿದೇಶಗಳಿಗೆ ಸಂಘದ ಸದಸ್ಯರನ್ನು ಕಳುಹಿಸಿ, ಅಲ್ಲಿಯೂ ಕಾರ್ಯಕ್ಷೇತ್ರಗಳನ್ನೂ ಆಶ್ರಮಗಳನ್ನೂ ನಿರ್ಮಿಸಿ, ಜನಾಂಗಗಳಲ್ಲಿ ಪರಸ್ಪರ ಮೈತ್ರಿ ಹೆಚ್ಚುವಂತೆ ಮಾಡುವುದು. ಇದು ಸಂಘದ ವಿದೇಶೀಯ ಕಾರ್ಯ.

ಶ್ರೀರಾಮಕೃಷ್ಣ ಮಹಾಸಂಘವು ಸ್ಥಾಪನೆಯಾದ ದಿನವೇ ನವಯುಗದ ನವಸಂನ್ಯಾಸವೂ ಸ್ಥಾಪಿತವಾಯಿತು. ಭಾರತವರ್ಷಕ್ಕೆ ಅದೊಂದು ಮಹಾ ಮುಹೂರ್ತವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಏಕೆಂದರೆ, ಅಂದು ರಾಷ್ಟ್ರದ ಶ್ರೇಷ್ಠವ್ಯಕ್ತಿಗಳು ಸ್ವಂತ ಮೋಕ್ಷದ ಸಲುವಾಗಿ ಸಮಾಜತ್ಯಾಗ ಮಾಡಿ ಅರಣ್ಯಕ್ಕೆ ಹೋಗುವುದನ್ನು ಬಿಟ್ಟು ರಾಷ್ಟ್ರಸೇವಾಕಾರ್ಯದಲ್ಲಿ ನಿರತರಾಗಲು ಕಂಕಣಬದ್ಧರಾದರು. "ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ." ಎಂದು ವೀರಸಂನ್ಯಾಸಿಗಳು ಸಂಘಬದ್ಧರಾದುದು ಭಾರತಾಂಬೆಯ ಭಾಗ್ಯವಲ್ಲದೆ ಮತ್ತೇನು ? ತ್ಯಾಗಪೂರ್ಣವಾದ ಸೇವೆಯೇ ತಪಸ್ಸು. ದರಿದ್ರನಾರಾಯಣನ ಸೇವೆಯೇ ಶ್ರೀಮನ್ನಾರಾಯಣನ ಸೇವೆ. ಸೇವೆಯೇ ಪೂಜೆ. ನವಯುಗದ ಸಂನ್ಯಾಸದ ಧ್ಯೇಯ, ಆದರ್ಶ ಮತ್ತು ಕಾರ್ಯಗಳನ್ನು ಕುರಿತು ಸ್ವಾಮಿಗಳು ತಮ್ಮ ಶಿಷ್ಯರಿಗೆ ಹೀಗೆಂದು ಹೇಳಿದ್ದಾರೆ:

"ಸಂನ್ಯಾಸವೆಂದರೇನು ? ತ್ಯಾಗ, ಮೃತ್ಯುಪ್ರೇಮ. ಎಂದರೆ ಕೊಂದುಕೊಳ್ಳುವುದಲ್ಲ. ಕೊಂದುಕೊಳ್ಳುವವನು ಮೃತ್ಯುಪ್ರೇಮಿಯಲ್ಲ; ಅವನು ಜೀವನದ್ವೇಷಿ. ಅದೂ ಕೂಡ ತಾತ್ಕಾಲಿಕವಾದುದು. ಅವನನ್ನು ಒಂದು ಸಾರಿ ಆತ್ಮಹತ್ಯದಿಂದ ತಪ್ಪಿಸಿದರೆ ಮತ್ತೆ ಪ್ರಯತ್ನಿಸುವುದಿಲ್ಲ. ಆದರೆ ಸಂನ್ಯಾಸವು ಸ್ವಾರ್ಥತ್ಯಾಗ, ಸ್ವ-ತ್ಯಾಗ. ಮಹೋದ್ದೇಶಕ್ಕಾಗಿ ಸ್ವ-ತ್ಯಾಗ! ಎಂದಿದ್ದರೂ ಸಾಯುತ್ತೇವೆ; ಮಹಾಕಾರ್ಯದಲ್ಲಿ ಸತ್ತರೆ ಲೇಸು. ಇತರರ ಸೇವೆಗಲ್ಲದೆ ಶರೀರವನ್ನು ಆಹಾರದಿಂದ ಪೋಷಿಸಿದರೆ ಏನು ಫಲ ? ಅಧ್ಯಯನಮಾಡಿ ಬುದ್ಧಿಶಾಲಿಗಳಾಗಬೇಕು. ಆದರೆ ಜ್ಞಾನದಾನ ಮಾಡದಿದ್ದರೆ ಅದು ವ್ಯರ್ಥ! . . . . ಸೋದರ

ಮಾನವರ ಸೇವೆಯೇ ಸ್ವರ್ಗ, ಮೋಕ್ಷ ; ಉಳಿದುದೆಲ್ಲ ನರಕ. . . . ಅಸಾಧ್ಯ ಆದರ್ಶವಿರಬಾರದು. ಅಸಾಧ್ಯ ಆದರ್ಶವು ದೇಶವನ್ನು ದುರ್ಬಲಗೊಳಿಸಿ ಅಧೋಗತಿಗೆಳೆಯುತ್ತದೆ. . . . ಹಾಗೆಂದು ಆದರ್ಶವನ್ನು ಕಾಲಡಿಗೆಳೆಯ ಬಾರದು. ಅತಿ ಭಾವಜೀವಿಯಾಗಿರುವುದೂ ಅತಿ ಕಾರ್ಯಜೀವಿಯಾಗಿರು ವುದೂ ಎರಡೂ ಶ್ರೇಯಸ್ಕರವಲ್ಲ. ಆದ್ದರಿಂದ ಆದರ್ಶವು ಆಕಾಶದಲ್ಲಿಯೇ ಹಾರ ದಂತೆಯೂ ಭೂಮಿಯಲ್ಲಿಯೇ ಹೊರಳದಂತೆಯೂ ನೋಡಿಕೊಳ್ಳುವುದು ಸಂನ್ಯಾಸಿಯ ಕರ್ತವ್ಯ. . . . ಗುಹೆಗಳಲ್ಲಿ ಕುಳಿತು ಧ್ಯಾನಮಾಡಿ ಸಾಯು ವುದು ಹಳೆಯವರ ಪದ್ಧತಿಯಾಗಿತ್ತು. ಮುಕ್ತಿಗಾದರೂ ಕೂಡ ಇತರರೊಡನೆ ಸ್ಪರ್ಧೆಹೂಡುವುದು ತಪ್ಪು ಎಂಬುದು ಹಿಂದಿನವರ ಭಾವನೆಯಾಗಿತ್ತು. . . . ಇಂದಾಗಲಿ, ನಾಳೆಯಾಗಲಿ, ಸೋದರರ ಮುಕ್ತಿಗೂ ಪ್ರಯತ್ನ ಮಾಡದವನಿಗೆ ಮುಕ್ತಿಯಿಲ್ಲ ಎಂದು ನಿಮಗೆ ತಿಳಿಯುತ್ತದೆ. . . . ನಿಮ್ಮ ಜೀವನದಲ್ಲಿ ಕರ್ಮ ಧರ್ಮಗಳು ಸಮತೂಕವಾಗಿರಬೇಕು. ಈ ಕ್ಷಣದಲ್ಲಿ ಸಮಾಧಿ ಮಗ್ನರಾಗಿದ್ದು ಕೊಂಡು, ಮರುಕ್ಷಣದಲ್ಲಿ ತೋಟದಲ್ಲಿ ಅಗೆಯುವ ಕಾರ್ಯಕ್ಕೆ ಸಿದ್ಧರಾಗಬೇಕು ; ಈ ಕ್ಷಣದಲ್ಲಿ ವೇದಿಕೆಯ ಮೇಲೆ ನಿಂತು ಅತ್ಯಂತ ಕಠಿನವಾದ ಶಾಸ್ತ್ರ ವಿಷಯ ಗಳನ್ನು ಕುರಿತು ಉಪನ್ಯಾಸಮಾಡಿ, ಮರುಕ್ಷಣದಲ್ಲಿ ಮಾರ್ಕೆಟ್ಟಿಗೆ ಹೋಗಿ ತರಕಾರಿ ಮಾರಲು ಸಿದ್ಧರಾಗಿರಬೇಕು. . . . ಸಂಘದ ಉದ್ದೇಶವು 'ಪುರುಷ ಸಿಂಹ' ನಿರ್ಮಾಣ. ನೀವು ಪೂರ್ವಕಾಲದ ಋಷಿಗಳು ಹೇಳಿದ್ದನ್ನೇ ಓದಿ ಕೊಂಡರೆ ಸಾಲದು. . . . ನವನವೀನ ವಿಜ್ಞಾನಶಾಸ್ತ್ರಗಳನ್ನೂ ಅಧ್ಯಯನ ಮಾಡಬೇಕು. . . . ಆ ಪೂರ್ವಕಾಲದ ಋಷಿಗಳು ಈಗೆಲ್ಲಿ ? ಅವರ ಕಾಲವಾಗಿ ಹೋಯ್ತು. ಅವರ ಜೊತೆಗೆ ಅವರ ಮತಗಳೂ ಹೋದುವು. ನೀವೇ ಋಷಿ ಗಳಾಗಬೇಕು. ನೀವೂ ಮಹಾತ್ಮರೇ. ಹಳೆಯ ಮಹಾತ್ಮರಿಗಿಂತಲೂ ನೀವೇನು ಕಡಮೆಯಿಲ್ಲ. ಅವತಾರಗಳಿಗೂ ಕೂಡ ನೀವೇನು ಕೀಳಲ್ಲ. . . . ಬರಿಯ ಪಾಂಡಿತ್ಯದಿಂದೇನು ? ಬರಿಯ ಧ್ಯಾನದಿಂದಾದರೂ ಏನು ? ಮಂತ್ರಗಳೂ ತಂತ್ರ ಗಳೂ ಏಕೆ ? ನಿಮ್ಮ ಕಾಲುಗಳ ಮೇಲೆಯೇ ನೀವು ನಿಲ್ಲಬೇಕು. . . . ನಿಜವಾದ ಮಹಾತ್ಮನು ವಜ್ರದಂತೆ ಕಠೋರವೂ ಕುಸುಮದಂತೆ ಕೋಮಲವೂ ಆಗಿರು

ತ್ತಾನೆ. . . . '' ವೈರಾಗ್ಯ, ಬ್ರಹ್ಮಚರ್ಯ, ತಪಸ್ಸು, ಸೇವೆ—ಇವು ನವಸಂನ್ಯಾಸದ ಧ್ಯೇಯೋಕ್ತಿಗಳು.

ತಮ್ಮ ಜೀವಮಾನದಲ್ಲಿಯೇ ತಮ್ಮ ಉಪದೇಶವು ಫಲಕಾರಿಯಾಗುತ್ತಿರುವುದನ್ನು ಕಣ್ಣಾರೆ ಕಂಡು ವಿವೇಕಾನಂದರು ಸಂತೋಷಪಟ್ಟರು. ಕ್ರಿ. ಶ. ೧೮೯೯ ರಲ್ಲಿ ಭಯಂಕರ ಕ್ಷಾಮವು ಉತ್ತರ ಹಿಂದೂಸ್ಥಾನವನ್ನೆಲ್ಲಾ ವ್ಯಾಪಿಸಲು ಸಂಘದ ಸಂನ್ಯಾಸಿಗಳು ಕ್ಷಾಮಪೀಡಿತರಿಗೆ ಕೈಯಲ್ಲಾದ ಮಟ್ಟಿಗೆ ಅನ್ನವಸ್ತ್ರಗಳನ್ನು ಕೊಟ್ಟು ಸಹಾಯಮಾಡಿದರು. ೧೯೦೦ ರಲ್ಲಿ ಮಧ್ಯಪ್ರಾಂತದಲ್ಲಿ ೧೩,೮೩೭ ಜನಗಳು ಸಂನ್ಯಾಸಿಗಳಿಂದ ಸೇವಿತರಾಗಿ ಕ್ಷಾಮಮಾರಿಯಿಂದ ತಪ್ಪಿಸಿಕೊಂಡರು. ಸ್ವಾಮಿ ಅಖಂಡಾನಂದರು ಮುರ್ಷಿದಾಬಾದಿಗೆ ಹೋಗಿ ಸೇವಾಕ್ಷೇತ್ರವೊಂದನ್ನು ತೆರೆದು ಪ್ರವಾಹದ ಕಷ್ಟಕ್ಕೆ ಸಿಕ್ಕಿದ ಜನರನ್ನು ಬದುಕಿಸಿದರು. ಕಲ್ಕತ್ತಾ ನಗರದಲ್ಲಿ ಪ್ಲೇಗು ಕಾಲರಾ ರೋಗಗಳು ಪ್ರಾಪ್ತವಾಗಲು ಸಂಘದ ಸಂನ್ಯಾಸಿಗಳು ರೋಗಿಗಳಿಗೆ ಶುಶ್ರೂಷೆಮಾಡಿ ಚರಂಡಿಗಳನ್ನು ಗುಡಿಸಿದರು. ಕಾರ್ಯಭಾರವು ಹೆಚ್ಚಾದಂತೆಲ್ಲ ಅನೇಕ ತರುಣರು ಸಂನ್ಯಾಸಿಗಳಾಗಿ ಸಂಘಕ್ಕೆ ಸೇರತೊಡಗಿದರು. ಸಾವಿರಾರು ಗೃಹಸ್ಥಭಕ್ತರೂ ಸಂಘಕ್ಕೆ ನೆರವಾದರು.

ಕ್ರಿ. ಶ. ೧೯೦೨ ನೆಯ ಜುಲೈ ೪ ನೆಯ ಶುಕ್ರವಾರ ನವಯುಗಾಚಾರ್ಯ ಮಾನವಮಿತ್ರ ಮಹಾಯೋಗಿ ಶ್ರೀ ಸ್ವಾಮಿ ವಿವೇಕಾನಂದರು ಬ್ರಹ್ಮಲೀನರಾದರು. ಆದರೆ ಅವರ ವಾಣಿ ಚಿರಸ್ಥಾಯಿಯಾಗಿದೆ. ಅವರ ಆತ್ಮವು ಕೋಟ್ಯನುಕೋಟಿ ಮಾನವರ ಆತ್ಮಗಳನ್ನು ಹುರಿದುಂಬಿಸುತ್ತಿದೆ. ಅವರ ಜೀವನ ಮತ್ತು ಉಪದೇಶಗಳ ವ್ಯಾಖ್ಯಾನವಿಲ್ಲದಿದ್ದರೆ ಶ್ರೀರಾಮಕೃಷ್ಣರು ಅನೇಕರಿಗೆ ಅರ್ಥವಾಗುತ್ತಿರಲಿಲ್ಲ. ಗುರುಶಿಷ್ಯರಿಬ್ಬರೂ ವಿರಾಟ್ ಶರೀರಿಗಳಾಗಿ, ಶ್ರೀರಾಮಕೃಷ್ಣ ಮಹಾಸಂಘದಲ್ಲಿಯೂ ಅವರಿಂದ ಪ್ರೇರಿತವಾಗಿ ಹುಟ್ಟಿದ ಲಕ್ಷಾಂತರ ಸಣ್ಣ ದೊಡ್ಡ ಸಂಸ್ಥೆಗಳಲ್ಲಿಯೂ ಯಾವ ಸಂಸ್ಥೆಗೂ ಸೇರದೆ ಅವರ ಉಪದೇಶಾಮೃತವನ್ನು ಸವಿದು ಲೋಕಸೇವಾನಿರತರಾಗಿರುವ ಮತ್ತು ಆಗುತ್ತಿರುವ ಕೋಟ್ಯನುಕೋಟಿ ಇತರ ವ್ಯಕ್ತಿಗಳಲ್ಲಿಯೂ ಜಗಜ್ಜೀವನವನ್ನು ಶಾಂತಿಮಂದಿರಕ್ಕೆ ಕರೆದೊಯ್ಯುತ್ತಿದ್ದಾರೆ.

ಸ್ವಾಮಿ ವಿವೇಕಾನಂದರು ತೀರಿಹೋಗಿ ಇಂದಿಗೆ (೧೯೩೨) ಮೂವತ್ತು

ಸಂವತ್ಸರಗಳಾದುವು. ಇಷ್ಟು ಸ್ವಲ್ಪ ಕಾಲದಲ್ಲಿಯೇ ಶ್ರೀರಾಮಕೃಷ್ಣ ಸಂಘವು ಬೃಹದಾಕಾರವನ್ನು ತಾಳಿದೆ; ಮೆಲ್ಲಮೆಲ್ಲಗೆ ವಿರಾಡ್ರೂಪಿಯಾಗುತ್ತಿದೆ. ಅದರ ಮಹಿಮೆಯನ್ನೂ ಉಪಕಾರವನ್ನೂ (ಸಂಘವು 'ಸೇವೆ' ಎಂದುಕೊಳ್ಳಲಿ; ನಮಗದು 'ಉಪಕಾರ') ತಿಳಿಯಬೇಕಾದರೆ, ಪ್ರಪಂಚದ ನಾನಾ ಭಾಗಗಳಲ್ಲಿ ಸ್ಥಾಪಿತವಾಗಿರುವ ಅದರ ಕೇಂದ್ರಸ್ಥಾನಗಳು ಪ್ರತಿ ವರ್ಷವೂ ಹೊರಡಿಸುತ್ತಿರುವ ಗಣನೆಯಿಲ್ಲದ ವರದಿಗಳನ್ನು ನೋಡಬೇಕು. ಸಂಶಯವುಳ್ಳವರು ಆಯಾ ಸ್ಥಳಗಳಿಗೆ ಹೋಗಿ ನೋಡಿದರೆ ಅದರ ಕಾರ್ಯಕಲಾಪಗಳು ದಿಗ್ಭ್ರಮೆ ಹುಟ್ಟಿಸದಿರುವುದಿಲ್ಲ.

ಆದರೆ ವಾಚಕರಲ್ಲೊಂದು ವಿಜ್ಞಾಪನೆ. ಸಾಮಾನ್ಯವಾಗಿ ಸಂಘವನ್ನೂ ಅದರ ಸಂನ್ಯಾಸಿಗಳನ್ನೂ ಅವರು ಮಾಡುವ ಲೋಕಸೇವೆಯ ಗಾತ್ರಕ್ಕೆ ತಕ್ಕಂತೆ ಪ್ರಶಂಸಿಸುವುದು ವಾಡಿಕೆಯಾಗಿದೆ. ಆದರೆ ಆ ಸೇವೆಗೆ ಅತ್ಯಾವಶ್ಯಕವಾದ ಅಸೀಮಸ್ಫೂರ್ತಿಯೂ ನಿರಂತರೋತ್ಸಾಹವೂ ಅಕ್ಷಯಶಕ್ತಿಯೂ ಇರುವುದೆಲ್ಲಿ? ಅವರ ಕರ್ಮಮಯ ಜೀವನದ ಹಿಂದಿರುವ ಧರ್ಮಜೀವನದಲ್ಲಿ! ಅವರ ಧ್ಯಾನದಲ್ಲಿ! ಅವರ ತಪಸ್ಸಿನಲ್ಲಿ! ಇವುಗಳು ಹೊರಗಿನ ಜನರಿಗೆ ಕಾಣುವುದಿಲ್ಲ. ಆದ್ದರಿಂದ ಇಲ್ಲವೆಂದಲ್ಲ. ಸೇವಾಕಾರ್ಯವು ಅವರಿಗೆ ಗೌಣವಾದುದು. ಆತ್ಮದ ಸಾಧನೆಗೆ ಅದು ಅಡ್ಡಬಂದರೆ ಅದನ್ನು ತ್ಯಜಿಸಿಬಿಡಲೂ ಸಿದ್ಧರಾಗಿದ್ದಾರೆ. ಆದ್ದರಿಂದಲೇ ಅವರು ಸರದಿಯಂತೆ ಕೆಲವು ಕಾಲ ಕೆಲಸದಿಂದ ನಿವೃತ್ತರಾಗಿ, ಆಲ್ಮೋರ ಮೊದಲಾದ ಪ್ರಶಾಂತ ಪ್ರದೇಶಗಳಿಗೆ ಹೋಗಿ ಧ್ಯಾನಮಗ್ನರಾಗಿ, ತಪೋಧನರಾಗಿ ಹಿಂದಿರುಗಿ ಕರ್ಮರಂಗಕ್ಕೆ ಹೊಸ ಹುರುಪಿನಿಂದ ನುಗ್ಗುತ್ತಾರೆ. ಪಾವನಭಾವನೆಯಿಂದ ಮಾಡಿದ ಸೇವಾಕರ್ಮಕ್ಕೂ ಬೆಲೆ ಕಟ್ಟಿ ತಲೆದೂಗುವ ಮಾನವಕಾರ್ಪಣ್ಯವು ಬಂದಿಸಿತು ಎಚ್ಚರಿಕೆಯಿಂದಿರುವುದು ಲೇಸು.

ಈ ಮಧ್ಯೆ ಶ್ರೀರಾಮಕೃಷ್ಣ ವಿವೇಕಾನಂದರ ಕೀರ್ತಿವಲಯವೂ ಪ್ರಭಾವವೂ ದಿನೇ ದಿನೇ ವಿಸ್ತಾರವಾಗುತ್ತಿರುವುದೊಂದು ಶುಭಸೂಚನೆ. ಅನೇಕ ಭಾಷೆಗಳಲ್ಲಿ ಉದ್ದಾಮಪಂಡಿತರು ಅವರ ಜೀವನ ಚರಿತ್ರೆಗಳನ್ನೂ ಉಪದೇಶಗಳನ್ನೂ ಬರೆದು ಜನಜೀವನದಲ್ಲಿ ನವೋದಯವಾಗುವಂತೆ ಮಾಡುತ್ತಿದ್ದಾರೆ. ನಮ್ಮೀ ಪೃಥ್ವಿಯ ಸುಂದರವದನವು ಮಾನವನ ಈರ್ಷ್ಯಾದ್ವೇಷಗಳಿಂದಲೂ ಸಂಕುಚಿತಬುದ್ಧಿ ಮತಭ್ರಾಂತಿಗಳಿಂದಲೂ ತಾಡಿತವಾಗಿ ಕುರೂಪವಾಗಿದೆ.

ಮಾನವನ ಉನ್ಮಾದಾಗ್ನಿಯಿಂದ ಭೂದೇವಿಯ ಎದೆ ಬೆಂದುಹೋಗಿದೆ. ಶ್ರೀರಾಮಕೃಷ್ಣರ ಸಮನ್ವಯ ಸಂದೇಶವನ್ನು ಸ್ವೀಕರಿಸಿದಲ್ಲದೆ ಜಗತ್ತಿಗೆ ಶಾಂತಿಯಿಲ್ಲ. ವ್ಯಕ್ತಿತಃ ಅಲ್ಲದಿದ್ದರೂ ತತ್ತ್ವತಃ ಆಗಿಯಾದರೂ ಶ್ರೀರಾಮಕೃಷ್ಣರು ನವಯುಗದ ದೇವಮೂರ್ತಿ. ಆಲಿಸಿ! ದಿಕ್ಕುದಿಕ್ಕುಗಳಲ್ಲಿ ಹಬ್ಬಿ, ಬೆಟ್ಟಬೆಟ್ಟಗಳಲ್ಲಿ ಮರುದನಿಯಾಗಿ, ಕಡಲಮೊರೆಯಲ್ಲಿ ಬೆರೆತು, ಹಕ್ಕಿಗಳಿಂಚರದಲ್ಲಿ ಕಲೆತು, ಭೂವ್ಯೋಮಾಕಾಶಗಳನ್ನು ತುಂಬಿ ಕೇಳಿಬರುತ್ತಿದೆ ಶ್ರೀ ಸ್ವಾಮಿ ವಿವೇಕಾನಂದರ ಸಿಂಹವಾಣಿ.

"ಈ ಮಹಾಯುಗದ ಪ್ರತ್ಯೂಷೆಯಲ್ಲಿ ಸರ್ವಭಾವಗಳ ಸಮನ್ವಯವು ಪ್ರಚಾರವಾಗುವುದು ; ಈ ಅಸೀಮ ಅನಂತಭಾವವು, ಸನಾತನ ಶಾಸ್ತ್ರ ಮತ್ತು ಧರ್ಮಗಳಲ್ಲಿ ನಿಹಿತವಾಗಿದ್ದರೂ ಕೆಲವು ಕಾಲ ಮಾತ್ರ ಪ್ರಚ್ಛನ್ನವಾಗಿದ್ದ ಈ ಅಸೀಮ ಅನಂತಭಾವವು ಈ ಯುಗಾವತಾರನಿಂದ ಪುನರಾವಿಷ್ಕೃತವಾಗಿ ಪಾಂಚಜನ್ಯಸದೃಶವಾದ ಉಚ್ಚನಿನಾದದಿಂದ ಮಾನವ ಸಮಾಜದಲ್ಲಿ ಘೋಷಿತವಾಗುವುದು.

"ಈ ನವಯುಗ ಧರ್ಮವು ಸಮಗ್ರ ಜಗತ್ತಿನ, ಅದರಲ್ಲಿಯೂ ಭಾರತವರ್ಷದ, ಕಲ್ಯಾಣಮಾರ್ಗವಾಗಿರುವುದು ; ಅಲ್ಲದೆ ಈ ನವಯುಗ ಧರ್ಮಪ್ರವರ್ತಕನಾದ ಶ್ರೀ ಭಗವಾನ್ ರಾಮಕೃಷ್ಣನು ಹಿಂದೆ ಅವತರಿಸಿದ ಯುಗಧರ್ಮ ಪ್ರವರ್ತಕ ಸಮೂಹದ ಪುನಃಸಂಸ್ಕೃತ ಮಹಾಪ್ರಕಾಶವಾಗಿರುತ್ತಾನೆ!— ಹೇ ಮಾನವ, ಇದನ್ನು ನಂಬು! ನಂಬಿ ಬಾಳು!

"ಹೇ ಮಾನವ, ಮೃತವ್ಯಕ್ತಿ ಪುನರಾಗತವಾಗನು ; ಕಳೆದ ಇರುಳು ಮರಳಲರಿದು ; ಬೀಸಿದ ಗಾಳಿಯೂ ಮೊದಲಿನಂತೆ ಮರಳಿ ಬೀಸದು ; ಜೀವನೂ ಕೂಡ ಒಂದೇ ದೇಹವನ್ನು ಎರಡು ಸಾರಿ ಹೊಂದುವುದಿಲ್ಲ. ಆದ್ದರಿಂದ ಓ ಮಾನವ, ಅತೀತದ ಪೂಜೆಯಿಂದ ಪ್ರತ್ಯಕ್ಷದ ಪೂಜೆಗೆ, ನಿನಗಿದೋ ಆಹ್ವಾನ! ಹೋದ ದುಃಖದಿಂದ ಬರುವ ಸುಖಕ್ಕೆ, ನಿನಗಿದೋ ಆಹ್ವಾನ! ಗತಾನುಶೋಚನೆಯಿಂದ ಆಧುನಿಕ ನವಪ್ರಯತ್ನಕ್ಕೆ, ನಿನಗಿದೋ ಆಹ್ವಾನ! ಲುಪ್ತ ಪಂಥದ ಪುನರುದ್ಧಾರ ಸಾಹಸದ ವೃಥಾ ಶಕ್ತಿಕ್ಷಯದಿಂದ ಸದ್ಯೋನಿರ್ಮಿತ

ವಿಶಾಲ ಸನ್ನಿಕಟ ಪಥಕ್ಕೆ, ನಿನಗಿದೋ ಆಹ್ವಾನ! ಓ ಬುದ್ಧಿವಾನ್ ಮಾನವಾ, ಇದನ್ನು ತಿಳಿ; ಸಿದ್ಧನಾಗು, ಪ್ರಬುದ್ಧನಾಗು!

"ಯಾವ ಶಕ್ತಿಯ ಉನ್ಮೇಷ ಮಾತ್ರದಿಂದಲೇ ದಿಗ್ದಿಗಂತ ವ್ಯಾಪಿಯಾದ ಪ್ರತಿಧ್ವನಿಯಿಂದ ಜಗತ್ತು ಜಾಗ್ರತವಾಗುತ್ತಿರುವುದೋ ಆ ಶಕ್ತಿಯ ಪೂರ್ಣತ್ವವನ್ನು ಭಾವಿಸಿ ಅನುಭವಿಸು; ವೃಥಾ ಸಂದೇಹ ಬೇಡ; ದುರ್ಬಲತೆ ಬೇಡ; ದಾಸಜಾತಿ ಸುಲಭವಾದ ಈರ್ಷ್ಯಾದ್ವೇಷಗಳನ್ನು ದೂರಮಾಡಿ ಈ ಮಹಾ ಯುಗಚಕ್ರ ಪರಿವರ್ತನೆಯ ಸಹಾಯಾರ್ಥವಾಗಿ ಹೆಗಲು ಕೊಟ್ಟು ನಿಲ್ಲು; ಸೊಂಟ ಕಟ್ಟಿ ನಿಲ್ಲು; ಧೀರನಾಗಿ ನಿಲ್ಲು!

"ನಾವು ಪ್ರಭುವಿನ ದಾಸರು, ಪ್ರಭುವಿನ ಪುತ್ರರು; ಪ್ರಭುವಿನ ಲೀಲೆಗೆ ಸಹಾಯಕರು ಎಂಬುದನ್ನು ತಿಳಿ. ವಿಶ್ವಾಸ ಹೃದಯದಿಂದ ದೃಢಭಾವಧಾರಿಯಾಗಿ ಕಾರ್ಯಕ್ಷೇತ್ರಕ್ಕೆ ಧುಮುಕು! ನಿರ್ಭರತೆಯಿಂದ ಧುಮುಕು!"

ಓಂ ಶಾಂತಿಃ ಶಾಂತಿಃ ಶಾಂತಿಃ

# ಗ್ರಂಥಋಣ


ಇಂಗ್ಲಿಷ್—

1. *Life of Sri Ramakrishna* (Adwaita Asrama)
2. *The Life of Ramakrishna* By ROMAIN ROLLAND
3. *The Life of Vivekananda.* By ROMAIN ROLLAND
4. *Gospel of Sri Ramakrishna* (I & II Vols) By 'M'
5. *Complete Works of Swami Vivekananda*
6. *Sri Ramakrishna, The Great Master* By SWAMI SARADANANDA.
7. *Sayings of Sri Ramakrishna.*
8. *The Ramakrishna Math and Mission Convention, 1926*
9. *The Master as I Saw Him* By SISTER NIVEDETA
10. *Sri Ramakrishna and His Disciples* By SISTER DEVAMATA
11. *Days in an Indian Monastery* By SISTER DEVAMATA
12. *Satyartha Prakasa* By SWAMI DAYANANDA SARASVATI

ಬಂಗಾಳಿ—

೧ ಶ್ರೀರಾಮಕೃಷ್ಣ ಲೀಲಾಪ್ರಸಂಗ—ಶ್ರೀ ಸ್ವಾಮಿ ಶಾರದಾನಂದ

೨ ಶ್ರೀರಾಮಕೃಷ್ಣದೇವ—ಶ್ರೀ ಶಶಿಭೂಷಣ ಘೋಷ

೩ ಮಾಯೇರ್ ಕಥಾ—(ಉದ್ಬೋಧನ ಕಾರ್ಯಾಲಯ)

೪ ಶ್ರೀರಾಮಕೃಷ್ಣ ಕಥಾಮೃತ (೪ ಭಾಗಗಳು)—"ಮ"

೫ ಶ್ರೀಮತ್ ವಿವೇಕಾನಂದ ಚರಿತ—ಶ್ರೀ ಸತ್ಯೇಂದ್ರನಾಥ ಮಜುಂದಾರ್

ಕನ್ನಡ—

೧ ಉಪದೇಶ ವಾಕ್ಯಾವಳಿ—ಶ್ರೀ ನಂ ವೆಂಕಟೇಶ ಐಯಂಗಾರ್

೨ ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ—ಟಿ ಎಸ್ ವಿ, ಎ ಆರ್. ಕೃ.

೩. ಶ್ರೀರಾಮಕೃಷ್ಣ ವಚನಾಮೃತ—(ಶ್ರೀರಾಮಕೃಷ್ಣಾಶ್ರಮ, ಮೈಸೂರು)